# ಕನ್ನಡ ಅಧ್ಯಯನ



ಸಂಪಾದಕ
ಎಚ್. ಎಸ್. ರಾಘವೇಂದ್ರ ರಾವ್




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ–೫೮೩ ೨೧೧

KANNADA ADHYAYANA
(Kannada Bi-Annual of Kannada University)
Edited by Prof. H. S. Raghavendra Rao, Published by the Director of Prasaranga, Kannada University, Hampi-583 211.

Vol-1, No. 2, Pages viii + 194 Price Rs. 25.

First Impression January 1994

ಅರ್ಧವಾರ್ಷಿಕ ಪತ್ರಿಕೆ

ಲೇಖಕರ ವೈಯಕ್ತಿಕ ಅಭಿಪ್ರಾಯಗಳಿಗೆ ವಿಶ್ವವಿದ್ಯಾಲಯವು ಜವಾಬ್ದಾರಿಯಲ್ಲ



ಪ್ರಕಾಶಕರು:
ಕರೀಗೌಡ ಬೀಚನಹಳ್ಳಿ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ-೫೮೩ ೨೧೧

ಬೆಲೆ: ಬಿಡಿಪ್ರತಿ ರೂ. ೨೫; ವಾರ್ಷಿಕ ಚಂದಾ ರೂ. ೫೦

ಮುದ್ರಣ:
ಫ. ಶಿ. ಯವರ ತ್ವರಿತ ಮುದ್ರಣಾಲಯ
ಕುಂಬಾರಗರಡಿ ಹತ್ತಿರ, "ಗಂಗಾಪೂರ ಓಣಿ,
ಗದಗ-೫೮೨ ೧೦೧ ದೂರವಾಣಿ: 8617

# ಸಂಪಾದಕೀಯ

೧

ಕರ್ನಾಟಕ ಜನಸಮುದಾಯದ ಬದುಕು ಮತ್ತು ಆಲೋಚನೆಗಳ ಮೇಲೆ ಬಹಳ ತೀವ್ರವಾದ ಪ್ರಭಾವವನ್ನು ಬೀರುತ್ತಿರುವ ಎರಡು ವಲಯಗಳ ವಿವರವಾದ ಅಧ್ಯಯನಕ್ಕೆ 'ಕನ್ನಡ ಅಧ್ಯಯನ'ದ ಈ ಸಂಚಿಕೆಯು ಮೀಸಲಾಗಿದೆ. ಆಡಳಿತ ವ್ಯವಸ್ಥೆಯಾಗಲಿ, ಸಂವಹನ ಮಾಧ್ಯಮಗಳಾಗಲಿ ಒಂದು ಕ್ಷಣ ನಿಂತು ತಮ್ಮನ್ನೇ ತಾವು ಪರೀಕ್ಷೆ ಮಾಡಿಕೊಳ್ಳುವ ಸಂಭವ ಬಹಳ ಕಡಿಮೆ. ಹಾಗೆ ಮಾಡಿಕೊಂಡ ಆತ್ಮವಿಮರ್ಶೆ ಕೂಡ ಸಂವಹನವೆಂಬ ಉದ್ಯಮದ ನಿಯಂತ್ರಕ ಶಕ್ತಿಗಳ ಮೂಲಕವೇ ಪ್ರಕಟಣೆಯ ಅವಕಾಶ ಪಡೆಯಬೇಕಾದ ಅನಿವಾರ್ಯತೆ ಇದೆ. ಜನರ ಗಮನವು ಇಂಥ ಗಂಭೀರವಾದ ಸಮಸ್ಯೆಗಳ ಕಡೆಗೆ ಹರಿಯದೆ, ವ್ಯಕ್ತಿನಿಷ್ಠ ರಾಜಕೀಯದ ಕ್ಷುಲ್ಲಕವಾದ ದೈನಿಕಗಳಲ್ಲಿಯೋ ನಿಷ್ಕ್ರಿಯ ಮನರಂಜನೆಯ ಹುಸಿ ಕನಸಿನಲ್ಲಿಯೋ ಸದಾ ಮಗ್ನವಾಗಿರುವಂತೆ ವ್ಯವಸ್ಥಿತವಾದ ಹುನ್ನಾರಗಳನ್ನು ಹೂಡಲಾಗುತ್ತದೆ. ತಮ್ಮ ಸೆರೆಮನೆಯ ಕಂಬಿಗಳನ್ನು ಕಾಣಲಾರದ ಜನರಿಗೆ ವ್ಯಕ್ತಿ ಸ್ವಾತಂತ್ರ್ಯದ ಭ್ರಮೆಗಳನ್ನು ಊಡಿಸುವ ಕೆಲಸ ಒಂದೇ ಸಮನೆ ನಡೆಯುತ್ತಿರುತ್ತದೆ.

ಈ ಸಂಚಿಕೆಯ ವಸ್ತುವನ್ನು 'ಸಂವಹನ' ಮತ್ತು 'ಮಾಧ್ಯಮಗಳು' ಎಂದು ಎರಡು ಭಾಗಗಳಾಗಿ ವಿಂಗಡಿಸಬಹುದು. ಸಂವಹನಕ್ರಿಯೆಯ ಬಗೆಗಿನ ತಾತ್ವಿಕ ಚಿಂತನೆಯು ಇಲ್ಲಿನ ಕೆಲವು ಲೇಖನಗಳಲ್ಲಿ ನಡೆದರೆ, ಮತ್ತೆ ಹಲವು ಬರಹಗಳು ಆಡಳಿತ ಮಾಧ್ಯಮ, ಶಿಕ್ಷಣ ಮಾಧ್ಯಮ, ಕಲಾ ಮಾಧ್ಯಮ ಹಾಗೂ ಸಮೂಹ ಸಂವಹನ ಮಾಧ್ಯಮಗಳೆಂಬ ನಾಲ್ಕು ನೆಲೆಗಳಲ್ಲಿ ವಿಷಯದ ಬೇರೆ ಬೇರೆ ಆಯಾಮಗಳನ್ನು ಪರಿಶೀಲಿಸುತ್ತವೆ. ಇಂಥ ಅಧ್ಯಯನಕ್ಕೆ ಪ್ರವೇಶಿಕೆಯಾಗುವಂಥಹ ಕೆಲವು ಅನಿಸಿಕೆಗಳನ್ನು ಮಂಡಿಸುವುದು ಈ ಸಂಪಾದಕೀಯದ ಉದ್ದೇಶ.

೨

ಇಂದಿನ ಸನ್ನಿವೇಶದಲ್ಲಿ ಸಂವಹನದ ಆಶಯಗಳನ್ನು ರೂಪಿಸುವ ಆರ್ಥಿಕ-ಸಾಮಾಜಿಕ ಒತ್ತಡಗಳು ಹಾಗೂ ಅದರ ವಿಧಿ ವಿಧಾನಗಳನ್ನು ರೂಪಿಸುವ ತಂತ್ರಜ್ಞಾನ ಗಾಳಿ, ಬೆಂಕಿಗಳಂತೆ ಒಂದುಗೂಡಿವೆ. ಹೀಗೆ ಭುಗಿಲೆದ್ದಿರುವ ಮಹಾಜ್ವಾಲೆಯು ಸುಟ್ಟುರುಹುತ್ತಿರುವುದು ಮೂರನೆಯ ಜಗತ್ತಿನ ದೇಶಗಳನ್ನು. ಇಡೀ ಜನಾಂಗದ ಇತಿಹಾಸ ಮತ್ತು ಸಂಸ್ಕೃತಿಗಳು ಮರೆವಿಗೆ ಸಂದು ಹೋಗುವಂತೆ ಮಾಡಬಲ್ಲ ಈ ಆಕ್ರಮಣವನ್ನು ನಾವು ತೆರೆದ ತೋಳುಗಳಿಂದ ಸ್ವಾಗತಿಸುತ್ತಿದ್ದೇವೆ. ಈ ನವವಸಾಹತುಶಾಹಿಯ ಕದಂಬ ಬಾಹುಗಳಿಂದ ಬಿಡುಗಡೆಯನ್ನು ಪಡೆಯುವ ಸಾಧ್ಯತೆ ನಮ್ಮ ವರ್ತಮಾನಕ್ಕೆ ಇಲ್ಲವಾಗಿದೆ.

ಕಣ್ಣಿಗೆ ಕಟ್ಟಬೇಕಾದ ಮೊದಲ ಸಂಗತಿಯೆಂದರೆ 'ಸತ್ಯ', (Truth) 'ಸಂಗತಿ' (fact) ಮತ್ತು ಪ್ರಚಾರಗಳ ನಡುವಿನ ಗಡಿಗೆರೆಯು ಗುರುತಿಸಲಾರದಂತೆ ಅಳಿಸಿಹೋಗಿರುವುದು. ಸಮುದಾಯದ ಗ್ರಹಿಕೆಗೆ ಸಿಲುಕುವ ಸತ್ಯದ ತುತ್ತುಗಳನ್ನು ಸಿದ್ಧಪಡಿಸುವವರು ಸಂವಹನ ಮಾಧ್ಯಮಗಳಲ್ಲಿ ತೊಡಗಿಸಿಕೊಂಡಿರುವ 'ಸ್ವಯಂಸೇವೆಯ ಗಿಳಿ'ಗಳಲ್ಲ. ಅವರ ಕುತ್ತಿಗೆಗಳ ಮೇಲಿನ ಹಿಡಿತವನ್ನು ಬಿಗಿಮಾಡುವ, ಸಡಿಲಿಸುವ ಧಣಿಗಳು ಬೇರೆ ಎಲ್ಲಿಯೋ ಇರುತ್ತಾರೆ. 'ಇದು ನಿಜ ಅಲ್ಲ' ಎಂದು ಜನರಿಗೆ ಅನ್ನಿಸಿದರೂ, 'ಯಾವುದು ನಿಜ' ಎನ್ನುವುದು ಯಕ್ಷಪ್ರಶ್ನೆಯಾಗಿಯೇ ಉಳಿಯುತ್ತದೆ. ಇರಾಕ್‌ನ 'ಪಟಾಕಿ ಬೆಳಕಿನ ಲೋಕ'ದಿಂದ ಹಿಡಿದು ಅಯೋಧ್ಯೆಯ ಅಂಗಳಗಳವರೆಗೆ ಎಲ್ಲಿ ಏನು ನಡೆಯಿತು, ಏಕೆ ನಡೆಯಿತು ಎನ್ನುವುದು ನಮಗೆ ತಿಳಿದರೂ ತಿಳಿಯದ ಗೂಢಗಳಾಗಿ ಬಿಡುತ್ತವೆ.

ಇಷ್ಟೇ ಅಲ್ಲ, ಈ ಸುದ್ದಿಮೂಲಗಳನ್ನು ನಿಯಂತ್ರಿಸುವವರು ಕೇವಲ ನಮ್ಮ ಸ್ಥಳೀಯ ರಾಜಕಾರಣಿಗಳು ಮತ್ತು ಆರ್ಥಿಕ ಪಾಳೆಯಗಾರರು ಮಾತ್ರವಾಗಿರುವುದಿಲ್ಲ. ವಾಣಿಜ್ಯ ಹಿತಾಸಕ್ತಿಗಳನ್ನು ಪೊರೆಯಲೆಂದೇ ರೂಪಿತವಾಗುವ 'ಪರದೇಶಿ ಸುದ್ದಿ ಸಂಸ್ಥೆಗಳು' ತಾವು 'ಸೃಷ್ಟಿಸಿದ' ಸತ್ಯಗಳನ್ನು ಹಂಚುವ ಕೆಲಸದಲ್ಲಿ ವ್ಯವಸ್ಥಿತವಾಗಿ ತೊಡಗಿರುತ್ತವೆ. ನೆನ್ನೆಮೊನ್ನೆಯವರೆಗೆ, ಪಾಶ್ಚಾತ್ಯ ಸುದ್ದಿಮಾಧ್ಯಮಗಳಿಗೆ ಅಸ್ಪೃಶ್ಯರಾಗಿದ್ದ 'ಮಂಡೇಲ' 'ಅರಾಫತ್'ರು, ಈಗ ಅದೇ ಪಾಶ್ಚಾತ್ಯ ದೇಶಗಳ ರಾಜತಾಂತ್ರಿಕ ವಿಜಯದ ಸಂಕೇತಗಳಂತೆ ಪ್ರದರ್ಶಿತವಾಗುತ್ತಿರುವುದನ್ನು ಈ ನೆಲೆಯಲ್ಲಿಯೇ ಅರ್ಥಮಾಡಿಕೊಳ್ಳಬೇಕು. ಇಂದಿರಾ ಗಾಂಧಿಯವರ ಕಾಲದಲ್ಲಿ ನಿಷಿದ್ಧವಾಗಿದ್ದ ಮುಕ್ತ ಮಾರುಕಟ್ಟೆ,ಪಾಶ್ಚಾತ ಬಂಡವಾಳಕ್ಕೆ ಆಹ್ವಾನ ಮುಂತಾದವು ಈಗ, ಅದೇ ಪಕ್ಷದ ಆಡಳಿತದಲ್ಲಿ, ಪ್ರಗತಿಯ ದಾರಿಯಲ್ಲಿ ಇಟ್ಟ ದಾಪುಹೆಜ್ಜೆಗಳಂತೆ ಮೆರೆಯುತ್ತಿವೆ. ಕೊನೆಗೂ ಸ್ಪಷ್ಟವಾಗುವಂತೆ, ಮಾಧ್ಯಮಗಳು ಸದಾ ಆಳುವ 'ಪಕ್ಷಗಳೇ' ಅಲ್ಲ, ಆಳುವ 'ಹಿತಾಸಕ್ತಿ'ಗಳ ಗುಲಾಮರಂತೆಯೇ ಕೆಲಸ ಮಾಡುತ್ತವೆ. ಮಾಧ್ಯಮದೊಳಗಡೆಯೇ ಪರಸ್ಪರ ವಿರುದ್ಧವಾಗಿದೆಯೆಂದು ಭಾಸವಾಗುವ ನೆಲೆಗಳ ನಡುವಿನ 'ಕೋಳಿಜಗಳಗಳು' ಮಂಕುಬೂದಿಯೇ ಆಗಿರುತ್ತವೆ.

ಇಷ್ಟೇ ಮುಖ್ಯವಾದ ಮತ್ತೊಂದು ಸಂಗತಿಯೆಂದರೆ, ವಿದ್ಯುನ್ಮಾನ ಮಾಧ್ಯಮಗಳು, ನೋಡುಗರ ವೈಯಕ್ತಿಕ ಪ್ರಜ್ಞೆಯನ್ನು ಅವನಿಗೇ, ಅರಿವಿಲ್ಲದಂತೆ ರೂಪಿಸಿಬಿಡುವ ವಿಧಾನಗಳು. ಈ ಪ್ರಕ್ರಿಯೆಯನ್ನು ಇಲ್ಲಿ ಪ್ರಕಟಿಸಲಾಗಿರುವ ಎಂಜನ್‌ಬರ್ಗರ್ ಅವರ ಲೇಖನವು ಬಹಳ ಸಮರ್ಥವಾಗಿ ವಿವರಿಸುತ್ತದೆ. ಸಂಸ್ಕೃತಿಯ ಪರಿಕರಗಳನ್ನು ಅವುಗಳ 'ಸಂದರ್ಭ'ದಿಂದ ಬೇರ್ಪಡಿಸಿ, ಪರಸ್ಪರ ಸಂಬಂಧವಿಲ್ಲದ 'ರಂಜಕ ದೃಶ್ಯ'ಗಳ ಸರಣಿಯ ಭಾಗವಾಗಿಸಿ ಉಣಬಡಿಸಿದಾಗ ಆಗುವುದು ವಿಷಪ್ರಾಶನವೇ ಸರಿ. ಈ 'ಸಮೂಹಸನ್ನಿ'ಯು ಕೇವಲ ಮನರಂಜನೆಯ ದುಷ್ಟಸಾಧನವಾಗದೆ, ಜನರ ತಲೆ, ನಾಲಿಗೆಗಳನ್ನು ಕೊಂಡುಕೊಳ್ಳುವ ದಾರಿಯಾಗುತ್ತದೆ.

ಈ ಸಂಚಿಕೆಯಲ್ಲಿ ದೂರದರ್ಶನ, ಪತ್ರಿಕೋದ್ಯಮ, ಚಲನಚಿತ್ರ, ಜಾಹೀರಾತುಗಳು ಮುಂತಾದುವನ್ನು ಕುರಿತು ಲೇಖನಗಳು, ಪರಸ್ಪರ ಪೂರಕವಾಗಿ ಕೆಲಸಮಾಡುತ್ತವೆ. ಎಲ್ಲದರ ಸಮಾನ ನೆಲೆಯೆಂದರೆ ಮಾಧ್ಯಮಗಳ ವ್ಯಾಪಕತೆ ಹಾಗೂ ಭ್ರಷ್ಟತೆಗಳನ್ನು ಕುರಿತಾದ ಆತಂಕ. ಎಲ್ಲೋ ಒಂದು ಒಳ್ಳೆಯ ಲೇಖನ ಅಥವಾ ಟಿ.ವಿ. ಕಾರ್ಯಕ್ರಮ ಪ್ರಸಾರ ವಾಗುತ್ತದೆಯೋ ಇಲ್ಲವೋ ಎನ್ನುವುದು ಮುಖ್ಯ ಪ್ರಶ್ನೆಯಲ್ಲ. ಆಗಬಹುದು; ಆಗುತ್ತವೆ. ಪ್ರಶ್ನೆಯಿರುವುದು ಒಟ್ಟು ಸನ್ನಿವೇಶವು ಸಮುದಾಯದ ಸೃಜನಶೀಲತೆಗೆ ಒಡ್ಡುತ್ತಿರುವ ಸವಾಲುಗಳಿಗೆ ಸಂಬಂಧಪಟ್ಟಿದ್ದು. ಪ್ರಾದೇಶಿಕ, ಅಲ್ಪಸಂಖ್ಯಾತ ಸಮುದಾಯಗಳ, ಉಪಸಂಸ್ಕೃತಿಗಳ ಅನನ್ಯತೆಯನ್ನು ಒತ್ತೆಯಿಟ್ಟು ಪಡೆಯುತ್ತಿರುವ 'ಇಸ್ತ್ರಿ ಮಾಡಿದ' ಮನರಂಜನೆಗೆ ಸಂಬಂಧಪಟ್ಟಿದ್ದು. ದುರಂತವೆಂದರೆ ಈ ಸಮಸ್ಯೆಯು ಉಪೇಕ್ಷೆ ಯಿಂದಲಾಗಲೀ, ಮಡಿಮಾಡುವುದರಿಂದಾಗಲೀ ಪರಿಹಾರವಾಗುವುದಿಲ್ಲ. ಮಾಧ್ಯಮಗಳ ಆಕ್ರಮಣಶೀಲ ವರ್ತನೆಯ ಎದುರಿಗಿನ ಮೌನವೂ ಸೋಲಿನ ಸಂಕೇತವೇ ಆಗಿರುತ್ತದೆ. ಎಲ್ಲರೂ ಕೂಡಿಕೊಂಡು ಉತ್ತರಗಳನ್ನು ಹುಡುಕಬೇಕಾದ, ಈ ಜಾಗತಿಕ ಸಮಸ್ಯೆಗೆ ಕರ್ನಾಟಕ ಅಪವಾದವಲ್ಲ.

೩

ಪ್ರಾದೇಶಿಕಭಾಷೆಗಳ ಪ್ರಮುಖತೆಯನ್ನು ಕುರಿತು ತುಟಿಮರುಕವನ್ನು ಸಲ್ಲಿ ಸುವುದು ಅಭ್ಯಾಸವಾಗಿಬಿಟ್ಟಿರುವ ಈ ದಿನಗಳಲ್ಲಿ ಆಡಳಿತ ಭಾಷೆ, ಶಿಕ್ಷಣಮಾಧ್ಯಮ ಮುಂತಾದವನ್ನು ಕುರಿತು ಮಾತನಾಡುವುದು, ಕ್ಲೀಷೆಯಾಗಿಬಿಟ್ಟಿದೆ. ಆದರೆ ಸ್ವಾರ್ಥ ಸಾಧನೆ, ಭಾಷಾದ್ವೇಷ ಹಾಗೂ ತಪ್ಪು ತಿಳುವಳಿಕೆಗಳೇ ಭಾಷಾನೀತಿಯನ್ನು ಪರೋಕ್ಷವಾಗಿ ರೂಪಿಸುತ್ತಿರುವುದರಿಂದ, ಈ ಬಗೆಗಿನ ವೈಜ್ಞಾನಿಕವಾದ ಅಧ್ಯಯನ ಏನು ಹೇಳುತ್ತದೆ ಎಂಬುದನ್ನು ನಿರ್ಲಿಪ್ತವಾಗಿ ಹೇಳುವ ಅಗತ್ಯ ಇಂದು ಇದೆ. ಭಾಷೆಯ ಬಗೆಗಿನ ಪ್ರೀತಿ ಮತ್ತು ಅಭಿಮಾನಗಳು ತಮ್ಮಷ್ಟಕ್ಕೆ ತಾವೇ ಭಾಷಾಕಲಿಕೆ, ಬಳಕೆ, ಆಯ್ಕೆ ಮುಂತಾದ ಸಮಸ್ಯೆಗಳಿಗೆ ಉತ್ತರಗಳನ್ನು ನೀಡಲಾರವು. ಭಾಷಿಕಚಳುವಳಿಗಳ ದಿಕ್ಕು ದೆಸೆಗಳನ್ನು ರೂಪಿಸುವ ಕೆಲಸ ಕಟ್ಟೆಚ್ಚರದಿಂದ ನಡೆಯಬೇಕಾದುದು. ಇಂಥ ಕಡೆ, ಭಾಷೆಯನ್ನು ಕುರಿತಂತೆ ವಿಶೇಷ ಅಧ್ಯಯನ ನಡೆಸಿರುವ ತಜ್ಞರ ಅಭಿಪ್ರಾಯಗಳಿಗೆ ಮನ್ನಣೆ ಸಿಗಬೇಕಾದ್ದು ಕಡ್ಡಾಯ. ಆದರೆ ಭಾಷಾನೀತಿಯನ್ನು ನಿರ್ಧರಿಸಲೆಂದು ರೂಪಿತವಾಗುವ ಹತ್ತು ಹಲವು ಸಮಿತಿಗಳಲ್ಲಿ ಭಾಷಾತಜ್ಞರು ಔಷಧಕ್ಕೂ ಸಿಗುವುದಿಲ್ಲ. ಕರ್ನಾಟಕದ ಹೊರಗಿನ ವಿದ್ವಾಂಸರು ಯಾರೂ ಕನ್ನಡಕ್ಕೆ ಹಿತವಾಗುವ ಸಲಹೆಗಳನ್ನು ನೀಡಲಾರರು ಎಂಬ ಪೂರ್ವಗ್ರಹದಿಂದಲೇ ನಾವು ಕೆಲಸ ಮಾಡತೊಡಗಿದರೆ, ಜಗತ್ತಿನ ಖ್ಯಾತ ಭಾಷಾ ವಿಜ್ಞಾನಿಗಳ ಮಾತು ಮೂಲೆಗೆ ಸರಿದು 'ಕನ್ನಡ ಚಳುವಳಿಗಾರರು', 'ಸರ್ವಜ್ಞ ಧೋರಣೆಯ' ರಾಜಕಾರಣಿಗಳು, ಸಾಹಿತಿಗಳು ಮುನ್ನೆಲೆಗೆ ಬರುತ್ತಾರೆ. ತಮ್ಮ ತಮ್ಮ

ಕ್ಷೇತ್ರಗಳಲ್ಲಿ ಇವರಿಗೆ ಇರುವುದಾದ ಪರಿಣತಿಯು ಭಾಷಾಯೋಜನೆಗಳನ್ನು ಹಾಕಿಕೊಳ್ಳುವುದರಲ್ಲಿ ನೆರವು ನೀಡುವುದಿಲ್ಲ.

ಯಾವುದೇ ಯೋಜನೆಯನ್ನು ಹಾಕದೆ ಹೋದಾಗಲೂ, ಸಮುದಾಯದ ಆಸ್ಕೆ-ಅಗತ್ಯಗಳಿಗೆ ಅನುಗುಣವಾಗಿ, ಭಾಷಿಕಪ್ರಗತಿಯು ನಡೆಯುತ್ತದೆನ್ನುವ ಮಾತಿನಲ್ಲಿ ತಥ್ಯವಿಲ್ಲ. ಏಕೆಂದರೆ ನಾವು ಯೋಜನೆ ಹಾಕದಿರುವಾಗಲೂ, ಬೇರೆ ಹಿತಾಸಕ್ತಿಗಳು ತಮ್ಮದೇ ರೀತಿಯಲ್ಲಿ ನಮ್ಮ ಕತ್ತು ಹಿಚುಕುತ್ತಿರುತ್ತವೆ. ಕಳೆದ ಹತ್ತು ವರ್ಷಗಳಲ್ಲಿ 'ದೂರದರ್ಶನ'ದ ಮೂಲಕ ಹಿಂದಿಗೆ ಆಗಿರುವ ಲಾಭವು ಯೋಜಿತವಲ್ಲವೆಂದುಕೊಂಡರೆ, ನಾವು ಮರಳಿನಲ್ಲಿ ತಲೆ ಹೂಳಿಕೊಂಡ ಉಷ್ಟ್ರಪಕ್ಷಿಗಳಿಗಿಂತ ಬೇರೆಯಾಗುವುದಿಲ್ಲ. ಕಳೆದ ವರ್ಷಗಳಲ್ಲಿ ಆಡಳಿತ ಮತ್ತು ಶಿಕ್ಷಣಗಳೆರಡರಲ್ಲೂ ನಾವು ಹಿಮ್ಮುಖವಾದ ಹೆಜ್ಜೆಗಳನ್ನೇ ಇಡುತ್ತಿದ್ದೇವೆ.

ಬಹುಭಾಷಿಕವಾದ, ಉಪಸಂಸ್ಕೃತಿಗಳಿಂದ, ಶ್ರೇಣೀಕೃತ ಘಟಕಗಳಿಂದ ನಿಬಿಡವಾದ ಸನ್ನಿವೇಶದಲ್ಲಿ ಪ್ರಾದೇಶಿಕ ಭಾಷೆಗಳ ಪರವಾದ ವಾದದ ಸಮರ್ಥಕರು ಎಚ್ಚರದಿಂದ ಹೆಜ್ಜೆಯಿಡುವುದು ಅತ್ಯಗತ್ಯ. 'ಕನ್ನಡ' ಬೇಕು ಎನ್ನುವಾಗಲೂ ಯಾವ ಕನ್ನಡ, ಯಾರು ಬಳಸುವ ಕನ್ನಡ ಎಂಬ ಪ್ರಶ್ನೆಗಳನ್ನು ಕೇಳಿಕೊಳ್ಳುವುದು ಅನಿವಾರ್ಯ. ಕನ್ನಡದ ಪ್ರಮಾಣೀಕರಣ ಹಾಗೂ ಆಧುನೀಕರಣಗಳು ಅದನ್ನು ಬಳಸುವ ಸಾಮಾನ್ಯರನ್ನು ಹೊರಗುಳಿಸುವಂತೆ ನಡೆದರೆ, ಅದು ಅಪಾಯಕಾರಿಯಾದ ಬೆಳವಣಿಗೆಯೆನ್ನದೆ ವಿಧಿಯಿಲ್ಲ. ಹಲವು ಸ್ವತಂತ್ರ ಭಾಷೆಗಳು ಉಪಭಾಷೆಗಳು ನಿಧಾನವಾಗಿ ತಮ್ಮ ಉಪಯೋಗದ ವ್ಯಾಪ್ತಿಯನ್ನು ಸಂಕುಚಿತಗೊಳಿಸಿಕೊಂಡು, 'ನಾವು ಸಮ ನಿಮಗೆಂದು ಮೆರೆವ ಛಲ' ಇಲ್ಲದೆ ಉಸಿರಾಡುತ್ತಿರಬೇಕಾಗುತ್ತದೆ. ಕೊಡಗು, ತುಳು, ಕೊಂಕಣಿ, ಉರ್ದುಗಳು, ಹಿಂದಿ, ಇಂಗ್ಲಿಷ್‌ಗಳಂತೆ (ಕನ್ನಡಕ್ಕೆ ಸ್ಪರ್ಧಿಗಳಾಗದೆಯೂ, ತಮ್ಮ ಅನನ್ಯತೆಯನ್ನು ಉಳಿಸಿಕೊಳ್ಳುವ ಅವಕಾಶವನ್ನು ಪಡೆಯುತ್ತಿಲ್ಲ. 'ಆಡುಮಾತು'ಗಳಾಗಿ ಮಾತ್ರ ಸಮಾಧಾನ ಪಡೆಯುತ್ತಿವೆ. ಕನ್ನಡ ಆಲದ ಮರ ಅಲ್ಲ; ಆಗಬಾರದು. ಅದರ ಕೆಳಗೆ ಬೆಳೆಯುವ ಸಣ್ಣ ಪುಟ್ಟ ಗಿಡಗಳು ಅದಕ್ಕೆ ರಕ್ತದಾನ ಮಾಡಬಲ್ಲವು.

ಶಿಕ್ಷಣಮಾಧ್ಯಮದಂಥ ಸೂಕ್ಷ್ಮ ವಿಷಯದ ಬಗ್ಗೆಯೂ ಆಳವಾದ ಚಿಂತನೆ ಅಗತ್ಯವಿದೆ. 'ಹೇಳಿಕೆ ಪಂಡಿತ'ರಿಗೆ ಮಣೆಹಾಕುವ ಕೆಲಸ ಇನ್ನಾದರೂ ನಿಲ್ಲಬೇಕು. ಯಾವ ಭಾಷೆಯನ್ನು ಯಾವಾಗ, ಯಾರು ಕಲಿಯಬೇಕು, ಕಲಿತರೆ/ಕಲಿಯದಿದ್ದರೆ ಯಾವ ಬಗೆಯ ಲಾಭ-ನಷ್ಟವಾಗುತ್ತದ ಎಂಬ ಪ್ರಶ್ನೆಗಳನ್ನು ಕೇಳಿಕೊಳ್ಳಬೇಕು. ಯಾವುದೇ ಕ್ಷೇತ್ರದ 'ವಿದ್ವಾಂಸರು', ತಮ್ಮ ಕ್ಷೇತ್ರದಲ್ಲಿ ದೊರೆಯುವ 'ಕನ್ನಡ' ಪುಸ್ತಕಗಳನ್ನು ಮಾತ್ರ ಓದುವುದರಿಂದ ತನ್ನ ತಿಳುವಳಿಕೆ ಸಮಗ್ರವಾಗುತ್ತವೆ ಎಂದು ಹೇಳಿದರೆ, ಅಂಥವರ 'ಪಾಂಡಿತ್ಯ' ತಕ್ಷಣ ಪ್ರಶ್ನೆಗೆ ಒಳಪಡುತ್ತದೆ. ಕನ್ನಡದ ಪಂಡಿತ ಸಮುದಾಯ ಇಂಗ್ಲಿಷ್ ಕಲಿಯುವುದು ಅನಿವಾರ್ಯ. ಆ ಓದು ಅವರ ಕಿರೀಟದ ಗರಿಯಾಗಿ ಜನರಿಂದ ಅವರನ್ನು

ದೂರವಾಡಬಾರದು. ಬದಲಾಗಿ ಕಡಲಿನಿಂದ ಪಡೆದುದನ್ನು ನಮ್ಮ ನದಿಗಳಿಗೆ, ಕಾಲುವೆ ಗಳಿಗೆ, ಹರಿಸುವ ಶಕ್ತಿಯನ್ನು ಅವರು ಪಡೆದುಕೊಳ್ಳಬೇಕು.

ಇಲ್ಲಿನ ಹಲವು ಲೇಖನಗಳು ಆ ರೀತಿಯ ಮಾರ್ಗದರ್ಶನವನ್ನು ನೀಡಬಲ್ಲವೆನ್ನು ವುದು ನಮ್ಮ ತಿಳುವಳಿಕೆ. 'ಕರ್ನಾಟಕ ಸಂಸ್ಕೃತಿಯ ಅಧ್ಯಯನ'ವನ್ನು ಕುರಿತ ಮೊದಲ ಸಂಚಿಕೆಯನ್ನು ಪ್ರೀತಿ, ಕುತೂಹಲಗಳಿಂದ ಸ್ವಾಗತಿಸಿದ ನೀವು ಈ ಸಂಚಿಕೆಯನ್ನೂ ಹಾಗೆಯೇ ತೆಗೆದುಕೊಳ್ಳುವಿರೆಂಬ ಭರವಸೆ ನಮಗಿದೆ.

ಈ ಸಂಚಿಕೆಯನ್ನು ರೂಪಿಸುವುದರಲ್ಲಿ ಮೂಲ ಪರಿಕಲ್ಪನೆಯಿಂದ ಹಿಡಿದು ಮುದ್ರಣದವರೆಗೆ ಹಲವು ಹಿರಿಯರು, ಗೆಳೆಯರು ಸಹಕರಿಸಿದ್ದಾರೆ. ಡಾ|| ಶಾಂತಿನಾಥ ದೇಸಾಯಿಯವರು, ಡಾ|| ಅಶೋಕ್ ಕೇಳ್ಕರ್ ಅವರ ಲೇಖನದ ಅನುವಾದವನ್ನು ಪರಿಶೀಲಿಸಿಕೊಟ್ಟಿದ್ದಾರೆ. ನಮ್ಮ ವಿಶ್ವವಿದ್ಯಾಲಯದ ಮಾನ್ಯ ಕುಲಪತಿಗಳಾದ ಡಾ|| ಚಂದ್ರಶೇಖರ ಕಂಬಾರರಿಗೆ, ಪ್ರಸಾರಾಂಗದ ನಿರ್ದೇಶಕರಾದ ಡಾ|| ಕರೀಗೌಡ ಬೀಚನಹಳ್ಳಿಯವರಿಗೆ, ನನ್ನ ಇತರ ಸಹೋದ್ಯೋಗಿಗಳಿಗೆ ಹಾಗೂ ಕಲಾವಿದರಿಗೆ ನಾನು ಕೃತಜ್ಞನಾಗಿದ್ದೇನೆ. ಈ ಸಂಚಿಕೆಯನ್ನು ತಮ್ಮ ಎಂದಿನ ಕಾಳಜಿ ಮತ್ತು ಪರಿಣತಿ ಗಳೊಂದಿಗೆ ಮುದ್ರಿಸಿಕೊಟ್ಟಿರುವ ಗದಗಿನ ತ್ವರಿತ ಮುದ್ರಣದವರಿಗೆ ನನ್ನ ವಂದನೆಗಳು.

**—ಎಚ್. ಎಸ್. ರಾಘವೇಂದ್ರ ರಾವ್**

# ಕನ್ನಡ ಅಧ್ಯಯನ

# ಮೆದುಳಿನ ಕೈಗಾರಿಕೀಕರಣ

**ಹ್ಯಾನ್ಸ್ ಮ್ಯಾಗ್ನಸ್ ಎಂಜೆನ್ಸ್‌ಬರ್ಗರ್**

ನಾವೆಲ್ಲರೂ ಅಷ್ಟೆ. ನಮ್ಮ ನಮ್ಮ ಪ್ರಜ್ಞೆಗಳ ಮೇಲೆ ನಮಗೆ ಸಂಪೂರ್ಣ ಪ್ರಭುತ್ವ ಇದೆಯೆಂದು ತಿಳಿದುಕೊಳ್ಳಲು ಇಷ್ಟಪಡುತ್ತೇವೆ. ಈ ವಿಷಯದ ಬಗ್ಗೆ ನಮಗೆ ಅನುಮಾನವೇ ಇಲ್ಲ. ನಮ್ಮ ಮನಸ್ಸುಗಳು ಯಾವುದನ್ನು ಒಪ್ಪಿಕೊಳ್ಳುತ್ತವೆ, ಯಾವುದನ್ನು ತಿರಸ್ಕರಿಸುತ್ತವೆ ಎಂದು ತೀರ್ಮಾನಿಸುವ ಪ್ರಭುಗಳು ನಾವು ತಾನೇ! ಈಚಿನ ದಿನಗಳಲ್ಲಿ ಧರ್ಮ ಗುರುಗಳು, ಕವಿಗಳು ಮತ್ತು ಪಾಪ್ ಸಂಗೀತಗಾರರನ್ನು ಬಿಟ್ಟರೆ ಯಾರೂ ಆತ್ಮದ ಬಗ್ಗೆ ಮಾತನಾಡುವುದಿಲ್ಲ. ಆದ್ದರಿಂದ ಈ ಜಗತ್ತಿನ ಹತ್ತು ಹಲವು ಸಂತೆಗದ್ದಲಗಳಿಂದ ತಪ್ಪಿಸಿಕೊಂಡು ಇರುವ ಒಂದೇಒಂದು ನೆಲೆಯೆಂದರೆ ನಮ್ಮ ಅಂತರಂಗ ಎಂದು ನಮಗೆ ತೋರುತ್ತದೆ ಈ ದೈನಿಕಗಳ ಬಿಗಿ ಹಿಡಿತದಿಂದ ತಪ್ಪಿಸಿಕೊಳ್ಳಲು, ನಮ್ಮೊಳಗೆ ಅಲ್ಲದಿದ್ದರೆ ಬೇರೆ ಎಲ್ಲಿ ಸಾಧ್ಯ? ಈಗ, ಸರ್ವಾಧಿಕಾರವು ಜಾರಿಯಲ್ಲಿರುವ ಸನ್ನಿವೇಶದ ಬಗ್ಗೆ ಯೋಚನೆ ಮಾಡೋಣ. ಅಲ್ಲಂತೂ ತನ್ನ ಮನೆಯೇ ತನ್ನ ಕೋಟೆ ಎಂದು ಯಾರೂ ತಿಳಿಯಲು ಸಾಧ್ಯವಿಲ್ಲ. ಅಲ್ಲಿ ಕೂಡ ಮನುಷ್ಯನ ಮನಸ್ಸು ಅತ್ಯಂತ ಪವಿತ್ರವಾದ ಅಂತಿಮ ಆಶ್ರಯ ವೆಂದು ತಿಳಿದು ಅದರ ಮೇಲೆ ನಡೆಯುವ ಧಾಳಿಗಳನ್ನು ವೀರಾವೇಶದಿಂದ ಎದುರಿಸ ಲಾಗುತ್ತದೆ. ವಾಸ್ತವವಾಗಿ ಜಾಣನಾದ ಶತ್ರುವು ಈ ಕಾಲ್ಪನಿಕ ಕೋಟೆಯನ್ನು ಯಾವಾಗಲೋ ತನ್ನ ವಶಪಡಿಸಿಕೊಂಡಿದ್ದರೂ ಭ್ರಮೆ ಮಾತ್ರ ಮುಂದುವರೆದಿರುತ್ತದೆ.

ಈ ಭ್ರಮೆಯು ಅತ್ಯಂತ ಯಾತನಾಮಯವಾಗಿ ಬಯಲಿಗೆ ಬಂದದ್ದು ಜರ್ಮನಿಯ ನಾಝಿ ಆಡಳಿತದಲ್ಲಿ. ಅಲ್ಲಿನ ಅನೇಕ ಬುದ್ಧಿಜೀವಿಗಳು ತಮ್ಮ ಅಂತರಂಗದ ಒಳಕೋಣೆಗಳಿಗೆ ವಲಸೆ ಹೋದರೆ ಸಾಕು ಎಂದು ತಿಳಿದರು. ನಿಜವಾಗಿ ನೋಡಿದರೆ, ಅದು ಅತ್ಯಂತ ಶೋಚನೀಯವಾದ ರೀತಿಯಲ್ಲಿ ನಾಝಿಗಳಿಗೆ ಶರಣಾಗುವುದಲ್ಲದೆ ಬೇರೇನೂ ಆಗಿರಲಿಲ್ಲ. ಸ್ಟಾಲಿನ್‌ನ ಆಡಳಿತದ ಅವಧಿಯಲ್ಲಿ ಅನೇಕ ಕಮ್ಯೂನಿಸ್ಟ್ ರಾಷ್ಟ್ರಗಳಲ್ಲಿ ಕೂಡ ಈ ರೀತಿಯ ನಿಲುವುಗಳು ಕಂಡುಬಂದವು. ವಿವರಗಳಿಗೆ ಜೆಸ್ಲಾವ್ ಮಿಲೋಝನ **'The Captive Mind'** ಎಂಬ ಶ್ರೇಷ್ಠ ಕೃತಿಯನ್ನು ನೋಡಬಹುದು.

ನಮ್ಮ ಮನಸ್ಸುಗಳಿಗೆ ಸರ್ವತಂತ್ರ ಸ್ವಾತಂತ್ರ್ಯ ಇದೆ ಎಂಬ ಭ್ರಮೆಯನ್ನು ನಾವು ಬಹಳ ಹಟಮಾರಿತನದಿಂದ ಕಾಪಾಡಿಕೊಂಡು ಬರುತ್ತೇವೆ. ತತ್ವಶಾಸ್ತ್ರದ ಬಗ್ಗೆ ನಿರ್ಲಕ್ಷ್ಯ ತೋರಿಸುವ ಜನ ಕೂಡ ಅದರಿಂದ ಪ್ರಭಾವಿತರಾಗಿರುತ್ತಾರೆ ಎನ್ನುವುದಕ್ಕೆ ಇದು ಒಳ್ಳೆಯ

ಉದಾಹರಣೆ. ಏಕೆಂದರೆ ಮನುಷ್ಯರು ವೈಯಕ್ತಿಕವಾಗಿ ಮತ್ತು ಬೇರೆ ಯಾರ ನೆರವೂ ಇರದೆ ತಮ್ಮ ಬಗೆಗಿನ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಾರೆ ಎಂಬ ಭ್ರಮೆಯು ನಿಜವಾಗಿಯೂ ಬೂರ್ಷ್ವಾ ತತ್ತ್ವಗಳ ನೆಲೆಗಳಿಂದಲೇ ಮೂಡಿ ಬಂದಿದೆ. ಥಂಡಿ ಹಿಡಿದ ಡೆಕಾರ್ಟೆಸ್, ನೀರು ಬೆರೆಸಿದ ಹಸೆಲ್, ಆರಾಮ ಕುರ್ಚಿಯಲ್ಲಿ ಕುಳಿತು ಹರಟುವ ಆದರ್ಶವಾದ ಮುಂತಾದವು ಈ ಬಗೆಯ ಚಿಂತನೆಗಳ ಮೂಲಗಳು. ಒಟ್ಟು ಕತೆಯ ನೀತಿಯೆಂದರೆ ಅಲ್ಲಿ ಇಲ್ಲಿ ಕಡತಂದ ಚೂರುಗಳನ್ನು ಒಟ್ಟುಗೂಡಿಸಿ ಮಾಡಿದ ತಾತ್ತ್ವಿಕ ಪ್ರಮೇಯವೇ ಈ ಮಾನಸಿಕ ಸ್ವಾತಂತ್ರ್ಯದ ಕಟ್ಟುಕತೆ.

ಹಾಗೆ ನೋಡಿದರೆ, ನೂರುವರ್ಷಗಳಿಗಿಂತ ಹಿಂದೆ ಮಾಡಲಾದ ಅತ್ಯಂತ ಅರ್ಥ ಪೂರ್ಣವಾದ ಹೇಳಿಕೆಯೊಂದನ್ನು, ಅದರ ಮೇಲಿನ ಧೂಳು ಕೊಡವಿ ಮತ್ತೆ ಪರಿಶೀಲಿಸ ಬಹುದು.

“ನಮ್ಮ ಮನಸ್ಸುಗಳಲ್ಲಿ ಏನು ಆಗುತ್ತಿದೆ ಎನ್ನುವುದು ಸಾಮಾಜಿಕವಾದ ಸಂಗತಿಗಳ ಪರಿಣಾಮ. ಈ ಮಾತು ಅನಾದಿಕಾಲದಿಂದಲೂ ನಿಜ. ಬರಲಿರುವ ಎಲ್ಲ ಕಾಲಕ್ಕೂ ನಿಜ” ಕಾರ್ಲ್‌ಮಾರ್ಕ್ಸ್‌ನು ತನ್ನ ‘ಜರ್ಮನ್ ಐಡಿಯಾಲಜಿ’ ಎಂಬ ಗ್ರಂಥದಲ್ಲಿ ಹೀಗೆ ಹೇಳಿದ್ದಾನೆ. ಈ ಅದ್ಭುತ ಒಳನೋಟ ಪ್ರಕಟವಾಗಿದ್ದು,ಒಟ್ಟು ಇತಿಹಾಸಕ್ಕೆ ಹೋಲಿಸಿದರೆ ತೀರಾ ಈಚೆಗೆ. ಶ್ರಮ ಹಂಚಿಕೆಯ ವ್ಯವಸ್ಥೆಯು ಅಸ್ತಿತ್ವಕ್ಕೆ ಬಂದ ನಂತರದ ಸಮಗ್ರ ಮಾನವ ಇತಿಹಾಸಕ್ಕೆ ಈ ಸತ್ಯ ಅನ್ವಯವಾಗುತ್ತದೆ. ಆದರೆ ಮಾರ್ಕ್ಸ್‌ಗಿಂತ ಮುಂಚೆ ಇದಕ್ಕೆ ಹೀಗೆ ಅಭಿವ್ಯಕ್ತಿ ಕೊಡಲು ಯಾರಿಗೂ ಸಾಧ್ಯವಾಗಿರಲಿಲ್ಲ. ಎಲ್ಲ ರೀತಿಯ ಸಂವಹನಗಳು ಬಹುಮಟ್ಟಿಗೆ ತೋಂಡಿಯಲ್ಲಿಯೇ ನಡೆಯುತ್ತಿದ್ದ ಸಮಾಜಗಳಲ್ಲಿ, ಎಲ್ಲರೂ ಇವನ್ನು ಅಂಗೈನೆಲ್ಲಿಯಂಥ ಸತ್ಯವೆಂದು ನಂಬುತ್ತಿದ್ದರು. ಗುರುವನ್ನು ಶಿಷ್ಯ, ಉಪಾಧ್ಯಾಯರನ್ನು ವಿದ್ಯಾರ್ಥಿಗಳು, ಧರ್ಮಗುರುವನ್ನು ಅವನ ಹಿಂಬಾಲಕರು ಅವಲಂಬಿಸಿರುವುದು ಬಹಳ ಸಹಜವಾಗಿತ್ತು. ಒಟ್ಟು ಸಮುದಾಯದ ಪರವಾಗಿ ಎಲ್ಲೋ ಕೆಲವರು ಆಲೋಚನೆ ಮಾಡುವುದು ಹಾಗೂ ತೀರ್ಮಾನಗಳನ್ನು ತೆಗೆದುಕೊಳ್ಳುವುದು ಪ್ರಶ್ನಾತೀತವಾದ ವಾಸ್ತವ ವಾಗಿತ್ತು. ಅದರ ಬಗ್ಗೆ ಯಾರೂ ತಲೆಕೆಡಿಸಿಕೊಳ್ಳುತ್ತಿರಲಿಲ್ಲ. ಮಧ್ಯಮಯುಗದ ಮನುಷ್ಯನು ಯಾವ ಪ್ರಮಾಣದಲ್ಲಿ ಅನ್ಯನಿರ್ದೇಶಿತನಾಗಿರುತ್ತಿದ್ದನೆಂಬುದನ್ನು ಇಂದಿನ ಸಮಾಜಶಾಸ್ತ್ರವು ಊಹಿಸಿಕೊಳ್ಳುವುದೂ ಕಷ್ಟ. ಅವನ ಮನಸ್ಸು ಅತಿ ಹೆಚ್ಚಿನ ಪ್ರಮಾಣದಲ್ಲಿ ಹೊರಗಿನಿಂದಲೇ ರೂಪಿಸಲ್ಪಡುತ್ತಿತ್ತು. ಆದರೆ ಹೀಗೆ ಪಾಠ ಹೇಳುವ ಮತ್ತು ಮನಸ್ಸುಗಳನ್ನು ಕಟ್ಟುವ ಕೆಲಸವು ಎಷ್ಟೊಂದು ನೇರವೂ, ಮುಚ್ಚುಮರೆಯಿಲ್ಲದ್ದೂ ಆಗಿರುತ್ತಿತ್ತೆಂದರೆ, ಯಾರೂ ಅದನ್ನು ಸಮಸ್ಯೆಯೆಂದು, ಅನ್ಯಾಯವೆಂದು ತಿಳಿಯುತ್ತಲೇ ಇರಲಿಲ್ಲ. ಆದರೆ ಕ್ರಮೇಣ ನಮ್ಮ ಮನಸ್ಸನ್ನು ರೂಪಿಸುವ ವಿಧಾನಗಳು ಅಪಾರದರ್ಶಕ ವಾದವು; ನಿಗೂಢವಾದವು. ‘ಏನು ನಡೆಯುತ್ತಿದೆ’ ಅನ್ನುವುದು ಸಾಮಾನ್ಯ ಮನುಷ್ಯನಿಗೆ ತಿಳಿಯದಂತೆ ಆಯಿತು. ಕೈಗಾರಿಕೀಕರಣವು ತೀವ್ರವಾಗಿ ಕಾಣಿಸಿಕೊಂಡ ಮೇಲೆ

ಮನಸ್ಸುಗಳನ್ನು ಜೇಡಿಮಣ್ಣಿನಂತೆ ರೂಪಿಸುವ ಈ ಕೆಲಸವು ಸಮಸ್ಯೆಯಾಯಿತು.

ನಿಜವಾಗಿ ನೋಡಿದರೆ ಮನಸ್ಸುಗಳನ್ನು ಕಟ್ಟುವ ಕೈಗಾರಿಕೆಯು ಕಳೆದ ನೂರು ವರ್ಷಗಳ ಬೆಳವಣಿಗೆ. ಆದರೆ ಅದು ಎಷ್ಟು ವೇಗವಾಗಿ ನಡೆದಿದೆಯೆಂದರೆ, ಎಷ್ಟು ವಿಭಿನ್ನ ಬಗೆಗಳಲ್ಲಿ ನಡೆದಿದೆ ಎಂದರೆ ಅದನ್ನು ಅರ್ಥಮಾಡಿಕೊಳ್ಳುವುದು ಮತ್ತು ನಿಯಂತ್ರಿಸುವುದು ನಮ್ಮ ಅಳವಿಗೆ ನಿಲುಕುವುದಿಲ್ಲ. 'ಮಾಧ್ಯಮ'ಗಳನ್ನು ಕುರಿತ ನಮ್ಮ ಇಂದಿನ ಚರ್ಚೆಯು ಅನೇಕ ತಾತ್ವಿಕ ಪರಿಮಿತಿಗಳಿಂದ ನರಳುತ್ತಿರುವಂತೆ ಕಾಣುತ್ತದೆ. ವೃತ್ತ ಪತ್ರಿಕೆಗಳು, ಚಲನಚಿತ್ರ, ದೂರದರ್ಶನ, ಸಾರ್ವಜನಿಕ ಸಂಪರ್ಕ ಸಾಧನಗಳು ಈ ಎಲ್ಲವನ್ನೂ ಪ್ರತ್ಯೇಕವಾಗಿ ಮೌಲ್ಯಮಾಪನ ಮಾಡುವುದು ನಮ್ಮ ಹವ್ಯಾಸವಾಗಿದೆ. ಪ್ರತಿಯೊಂದರಲ್ಲಿ ಅವುಗಳ ತಂತ್ರಜ್ಞಾನಗಳ ಸನ್ನಿವೇಶಗಳು ಮತ್ತು ಸಾಧ್ಯತೆಗಳನ್ನು ನಾವು ಗಮನಿಸುತ್ತೇವೆ. ಈ ಮನಸ್ಸು ಕಟ್ಟುವ ಕೈಗಾರಿಕೆಯು ಪ್ರತಿಯೊಂದು ವಿಭಾಗದ ಜೊತೆಗೂ ತತ್ವದ ಹೊಸ ಅಲೆಯೊಂದು ಹುಟ್ಟಿಕೊಳ್ಳುತ್ತದೆ. ಇಂಥ ಹೊಸ ಅಲೆಗೆ ಒಳ್ಳೆಯ ಉದಾಹರಣೆಯೆಂದರೆ ಮಾರ್ಷಲ್ ಮೆಕ್‌ಲೂಹನ್ ಅವರ ವಿಚಾರಗಳು. ಅವರ ಕೆಲವು ಗ್ರಹಿಕೆಗಳು ಅತ್ಯಂತ ಹೊಸವು ಹಾಗೂ ಪ್ರತಿಭಾಶಾಲಿಯಾದವು ಎಂದು ತೋರುತ್ತದೆ. ಆದರೆ ಮಾಧ್ಯಮದ ಬಗೆಗಿನ ಅವರ ಗ್ರಹಿಕೆಗಳು ಒಂದು ಸಿದ್ಧಾಂತವೆಂದು ಕರೆಸಿಕೊಳ್ಳುವ ಯೋಗ್ಯತೆ ಪಡೆದಿಲ್ಲ. ಮಾಧ್ಯಮಗಳ ಸಾಮಾಜಿಕ ಮತ್ತು ರಾಜಕೀಯ ಆಯಾಮಗಳನ್ನು ನಗುನಗುತ್ತ ನಿರ್ಲಕ್ಷಿಸುವ ಅವರ ಧೋರಣೆ ಶೋಚನೀಯವಾದುದು. 'ಮಾಧ್ಯಮವೇ ಸಂದೇಶ' (The Madium is the Message) ಎಂಬ ಘೋಷಣೆಯನ್ನು ಮೆಚ್ಚಿಕೊಂಡು ಕುಣಿಯುವುದು ಬಹಳ ಸುಲಭ. ಮಾಧ್ಯಮದ ಜನರಿಗಂತೂ ಈ ಹೇಳಿಕೆ ಬಹಳ ಹಿಡಿಸುತ್ತದೆ. ಏಕೆಂದರೆ ಅದು ಸತ್ಯದ ಪ್ರಶ್ನೆಯನ್ನು ಮೋಸವೆನ್ನಿಸುವಷ್ಟು ಜಾಣತನದಿಂದ ಪಕ್ಕಕ್ಕೆ ತಳ್ಳಿಬಿಡುತ್ತದೆ ಮೆಕ್‌ಲೂಹನ್ ವಾದದ ಪ್ರಕಾರ ಒಂದು ಸಂದೇಶವು ನಿಜವೋ ಸುಳ್ಳೋ ಎಂಬುದು ಅಪ್ರಸ್ತುತವಾಗುತ್ತದೆ. ಏಕೆಂದರೆ ಅದರ ಪ್ರಕಾರ ಸತ್ಯವೆನ್ನುವುದು ಮಾಧ್ಯಮದ ಅಸ್ತಿತ್ವದಲ್ಲಿ ವಾಸ ಮಾಡುತ್ತಿರುತ್ತದೆ. ಅದು ಏನನ್ನು ಸಂವಹನ ಮಾಡುತ್ತದೆ ಎನ್ನುವುದು ಮುಖ್ಯವಾಗುವುದಿಲ್ಲ. ಸುದ್ದಿಜಾಲದ ಸತ್ಯಕ್ಕೆ ಸಾಕ್ಷಿಯೆಂದರೆ ಸುದ್ದಿ ಜಾಲವೆ. ಎಂಥ ವಿಪರ್ಯಾಸ. ಪಾಪ! ತನ್ನ ವಿಚಾರಗಳ ಈ ಪುನರ್ಜನ್ಮವನ್ನು ನೋಡಲು ಜರ್ಮನಿಯ ಗೋಬೆಲ್ಸ್ ಇದುವರೆಗೆ ಬದುಕಲಿಲ್ಲ. ಯಾರು ಕೂಡ ಈ ಎಲ್ಲ ಪ್ರಕ್ರಿಯೆಗಳನ್ನು ಅವುಗಳ ಸಮಗ್ರತೆಯಲ್ಲಿ ಗ್ರಹಿಸಿರುವಂತೆ ಕಾಣುತ್ತಿಲ್ಲ. ಮನುಷ್ಯನ ಮನಸ್ಸಿನ ಕೈಗಾರಿಕೀಕರಣವೇ ನಿಜವಾದ ಸಮಸ್ಯೆ. ಈ ಪ್ರಕ್ರಿಯೆಯನ್ನು ಕೇವಲ ಅದರ ಯಂತ್ರ ತಂತ್ರಗಳ ಪರಿಶೀಲನೆಯಿಂದ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ.

ಎರಡನೆಯ ಮಹಾಯುದ್ಧದ ನಂತರದ ಯುರೋಪಿನಲ್ಲಿ ಸಾಮಾನ್ಯವಾಗಿ ಬಳಕೆಯಲ್ಲಿರುವ 'ಸಂಸ್ಕೃತಿ ಕೈಗಾರಿಕೆ' ಎಂಬ ಪದ ಕೂಡ ಅಷ್ಟೇ ಅಸಮರ್ಪಕವಾದುದು. ಈ ಪಾರಿಭಾಷಿಕವು, ನಡೆಯುತ್ತಿರುವ ಪ್ರಕ್ರಿಯೆಗಳ ತೀವ್ರತೆ ಹಾಗೂ ವ್ಯಾಪಕತೆಗಳನ್ನು

ಪ್ರತಿಬಿಂಬಿಸುವ ಬದಲು, ಅವುಗಳನ್ನು ವಿಶ್ಲೇಷಣೆ ಮಾಡಲು ತೊಡಗಿರುವವರ ಸಾಮಾಜಿಕ ನೆಲೆಗಳಿಗೆ ಕನ್ನಡಿ ಹಿಡಿಯುತ್ತದೆ. ಅವರು ಸಾಮಾನ್ಯವಾಗಿ ವಿಶ್ವವಿದ್ಯಾಲಯಗಳ ಪ್ರಾಧ್ಯಾಪಕರೋ ಅಥವಾ ಅಂತಹುದೇ ವಿದ್ವಾಂಸ ಲೇಖಕರೋ ಆಗಿರುತ್ತಾರೆ. ಅಧಿಕಾರ ಶಾಹಿಯು, ಈ ಮಹನೀಯರನ್ನು 'ಸಾಂಸ್ಕೃತಿಕ ಬದುಕು' ಎಂಬ ಅರೆನಿವೃತ್ತ ಸ್ಥಿತಿಗೆ ತಳ್ಳಿಬಿಟ್ಟಿರುತ್ತದೆ. ಅಲ್ಲಿ ಕುಳಿತ ಇವರು 'ಸಂಸ್ಕೃತಿ ವಿಮರ್ಶಕ'ರೆಂಬ ನತದೃಷ್ಟ ಹಣೆಪಟ್ಟಿ ಯನ್ನು ಅಂಟಿಸಿಕೊಂಡು ಕಾಲಕಳೆಯುತ್ತಾರೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಅವರನ್ನು 'ನಿರಪಾಯಕರ ಜೀವಿ'ಗಳೆಂದು ಗುರುತಿಸಲಾಗಿರುತ್ತದೆ. ಅವರು 'ಸಂಸ್ಕೃತಿ'ಯ ಪರಿಭಾಷೆಯಲ್ಲಿ ಮಾತನಾಡುವುದು ಕ್ಷೇಮವೆಂದೂ, ಅಧಿಕಾರದ ಪರಿಭಾಷೆಯಲ್ಲಿ ಚರ್ಚಿಸುವುದು ಅಪರಾಧವೆಂದೂ ತಿಳಿಯಲಾಗುತ್ತದೆ.

ಆದರೂ 'ಸಂಸ್ಕೃತಿ ಕೈಗಾರಿಕೆ' ಎಂಬ ಅಸಮರ್ಪಕ ಪದ ಕೂಡ, ಎಲ್ಲ 'ಮಾಧ್ಯಮ' ಗಳಲ್ಲೂ ಅಡಗಿರುವ ಪರಸ್ಪರ ವಿರೋಧವೊಂದರ ಕಡೆಗೆ ನಮ್ಮ ಗಮನ ಸೆಳೆಯುತ್ತದೆ. 'ಪ್ರಜ್ಞೆ'ಯನ್ನು ಕೈಗಾರಿಕೆಯ ಸಾಧನಗಳಿಂದ ಪ್ರಭಾವಿಸಬಹುದು ಅಥವಾ ಮರು ರೂಪಿಸ ಬಹುದು. ಆದರೆ ಕೈಗಾರಿಕೆಗಳ ಮೂಲಕ ಪ್ರಜ್ಞೆಯನ್ನು ಸೃಷ್ಟಿಸಲು ಸಾಧ್ಯವಿಲ್ಲ. ಪ್ರಜ್ಞೆಯು ಜನರ ನಡುವೆ, ಜನರಿಂದಲೇ ರೂಪು ತಳೆಯುವ 'ಸಾಮಾಜಿಕ ಉತ್ಪನ್ನ'. (Social product)ಅದರ ಮೂಲ ಆಕರವೆಂದರೆ 'ಸಂವಾದ', ಸಂಭಾಷಣೆ. ಯಾವುದೇ ಕೈಗಾರಿಕಾ ಪ್ರಕ್ರಿಯೆಯು, ಪ್ರಜ್ಞೆಯನ್ನು ರೂಪಿಸುವ ಮನುಷ್ಯರಿಗೆ ಬದಲಿಯಾಗಿ ಕೆಲಸಮಾಡ ಲಾರದು. 'ಸಂಸ್ಕೃತಿ' ಎಂಬ ಪುರಾತನ ಪದವು– ಎಷ್ಟೇ ಕ್ಷೀಣವಾಗಿಯಾದರೂ ಸರಿಯೆ– ನಮಗೆ ನೆನಪು ಮಾಡಿಕೊಡಲು ಪ್ರಯತ್ನಿಸುತ್ತಿರುವ ಸತ್ಯವು ಇದೇ ಆಗಿದೆ.'ಮನೋರೂಪಣ ಕೈಗಾರಿಕೆ'ಯು ರಾಕ್ಷಸಾಕಾರದ್ದು, ಅರ್ಥಮಾಡಿಕೊಳ್ಳಲು ಕಷ್ಟವಾದದ್ದು. ಏಕೆಂದರೆ ನಿಜವಾಗಿಯೂ ಅದು ಏನನ್ನೂ ಸೃಷ್ಟಿಸುವುದಿಲ್ಲ. ಅದು ಒಂದು ಮಧ್ಯವರ್ತಿ. ಉತ್ಪಾದನೆಯ ಎರಡು ಮತ್ತು ಮೂರನೆಯ ನೆಲೆಗಳಲ್ಲಿ ಮಾತ್ರ ಅದು ಕೆಲಸ ಮಾಡುತ್ತದೆ. ಪ್ರಸರಣ ಮಾಡುವುದು ಮತ್ತು ಅತಿಕ್ರಮಣ ಮಾಡುವುದು ಮಾತ್ರ ಅದರ ಕೆಲಸ. ತನಗೆ ಯಾರೋ ಕೊಟ್ಟಿದ್ದನ್ನು ನೂರುಪಟ್ಟು, ಸಾವಿರಪಟ್ಟು ಆಗಿ ಪುನರುತ್ಪಾದಿಸಿ ಗ್ರಾಹಕರ ಮನೆಬಾಗಿಲಿಗೆ ತಲುಪಿಸುವುದಷ್ಟೇ ಅದರ ಕೆಲಸ.

ಈ ಕೈಗಾರಿಕೆಯು ಏನನ್ನು ಬೇಕಾದರೂ ನುಂಗಬಲ್ಲುದು, ಅರಗಿಸಿಕೊಳ್ಳಬಲ್ಲುದು. ಅದಕ್ಕೆ ಮರುಹುಟ್ಟು ಕೊಟ್ಟು ಹೊರಚೆಲ್ಲಬಲ್ಲುದು. ನಮ್ಮ ಮನಸ್ಸುಗಳು ಏನೆಲ್ಲವನ್ನು ಗ್ರಹಿಸಬಲ್ಲುದೋ, ಅದಷ್ಟೂ ಈ ಬಕಾಸುರನ ಬಾಯಿ ಕವಳ. ಇದು ಯಾವುದರಿಂದಲೂ 'ಭ್ರಷ್ಟ'ವಾಗುವುದಿಲ್ಲ, 'ಕಲುಷಿತ'ವಾಗುವುದಿಲ್ಲ. ಈ ಕೈಗಾರಿಕೆಯು ಯಾವುದೇ 'ವಿಚಾರ' ವನ್ನು ಕಣ್ಣು ಮುಚ್ಚಿ ತೆಗೆಯುವಷ್ಟರಲ್ಲಿ 'ಸ್ಲೋಗನ್' ಆಗಿ ಮಾರ್ಪಡಿಸಿಬಿಡುತ್ತದೆ. ಕಲ್ಪನೆಯ ಫಲವಾದ ಕಲಾಕೃತಿಗಳನ್ನು, 'ಹಿಟ್' ಆಗಿ ಪರಿವರ್ತಿಸುತ್ತದೆ. ಇದು ಮಾಧ್ಯಮ ಕೈಗಾರಿಕೆಯ ಮಹಾನ್ ಶಕ್ತಿ. ಆದರೂ ಈ ಸಂಗತಿಯೇ ಅದರ ದುರ್ಬಲತೆಯ ಕೇಂದ್ರವೂ

ಹೌದು. ಅದು ಸ್ವತಃ ತಾನು ಉತ್ಪಾದಿಸಲಾಗದ ವಸ್ತುಗಳಿಂದ ಮಾತ್ರ ಪುಷ್ಟಿ ಪಡೆಯ ಬಲ್ಲುದು. ಅದು ತಾನು ಯಾವುದಕ್ಕೆ ಹೆದರುತ್ತದೆಯೋ ಅದನ್ನೇ ಅವಲಂಬಿಸಿರುತ್ತದೆ; ತನ್ನ ಮೂಲಧನವನ್ನೇ ದಮನಕ್ಕೆ ಒಳಪಡಿಸಬೇಕಾಗುತ್ತದೆ. ಜನರ ಸೃಜನಶೀಲ ಉತ್ಪಾದಕತೆಯೇ ಆ ಮೂಲಧನ. 'ಸಂಸ್ಕೃತಿ ಕೈಗಾರಿಕೆ' ಎಂಬ ಮಾತಿನಲ್ಲಿರುವ ಸಂದಿಗ್ಧತೆಯು ಈ ಕಾರಣದಿಂದಲೇ ಹುಟ್ಟಿಕೊಂಡಿದೆ. ಆ ಪದವು, ಒಂದು ಕಡೆ 'ಸಂಸ್ಕೃತಿ' ಯನ್ನು ಆದರೆ ಎಲ್ಲ ಪುರಾತನ ಅರ್ಥಛಾಯೆಗಳೊಂದಿಗೆ ಒಪ್ಪಿಕೊಳ್ಳುವಂತೆ ನಟಿಸುತ್ತದೆ. ಮತ್ತೊಂದು ಕಡೆ ಆ 'ಸಂಸ್ಕೃತಿ'ಯನ್ನು ನುಂಗಿ ನೊಣೆದಿರುವ ಕೈಗಾರಿಕಾ ಪ್ರಕ್ರಿಯೆಯ ಹಕ್ಕು ಗಳನ್ನು ಒಪ್ಪಿಕೊಳ್ಳುತ್ತದೆ. ಆಗ ಸಂಸ್ಕೃತಿ ಪರವಾದ ಬೇಡಿಕೆಗಳ ಬಗ್ಗೆ ಒತ್ತಾಯಿಸುವುದು ಹುಡುಗು ಹುಂಬತನವಾಗುತ್ತದೆ. 'ಉದಾತ್ತ ಶಿಕ್ಷಣ'ದ **'Liberal Education'** ಸುಭದ್ರ ನೆಲೆಯಲ್ಲಿ ನಿಂತು 'ಸಂವಹನ ಮಾಧ್ಯಮ'ಗಳ ಕೀಳು ಅಭಿರುಚಿಗಳ ಬಗೆಗೆ ಕೂಗು ಎಬ್ಬಿಸುವುದರಿಂದ, ಅವನ್ನು ಕಿಂಚಿತ್ತೂ ಬದಲಾಯಿಸಲು ಸಾಧ್ಯವಾಗುವುದಿಲ್ಲ. 'ಸಂಸ್ಕೃತಿ'ಯ ಮೃತ ಆತ್ಮಗಳನ್ನು ಪುನರುಜ್ಜೀವಿಸುವುದೂ ಸಾಧ್ಯವಿಲ್ಲ. ಹೆಚ್ಚೆಂದರೆ ಇಂಥ ಪ್ರಯತ್ನಗಳಿಂದ 'ಶೈಕ್ಷಣಿಕ ಕಾರ್ಯಕ್ರಮ'ಗಳೆಂಬ 'ಹೊರಗೇರಿ'ಗಳನ್ನು ತುಂಬ ಬಹುದು. ಭಾನುವಾರದ ಸಾಪ್ತಾಹಿಕ ಪುರವಣಿಗಳ ಕೊನೆಯ ಪುಟಗಳಲ್ಲಿ ಯಾರೋ ಕೆಲವರು ಓದುವ ಅಳುಬುರುಕ ಲೇಖನಗಳನ್ನು ಬಗೆಯಬಹುದು. ಅದರ ಜೊತೆಗೆ, ಈ ಕೈಗಾರಿಕೆಯ ಉತ್ಪಾದನೆಗಳನ್ನು ಕೇವಲ ಸೌಂದರ್ಯಾತ್ಮಕ ಮಾನದಂಡಗಳಿಂದ ಟೀಕಿಸು ವುದೂ ತಪ್ಪಾಗುತ್ತದೆ. ಏಕೆಂದರೆ ಆಗ ಒಟ್ಟು ಸಮಸ್ಯೆಯ ಹೆಚ್ಚು ಮಹತ್ವಪೂರ್ಣವಾದ ರಾಜಕೀಯ–ಸಾಮಾಜಿಕ ಅರ್ಥಗಳು ಹಿನ್ನೆಲೆಗೆ ಸರಿಯುತ್ತವೆ.

ಇನ್ನೊಂದು ತುದಿಯಲ್ಲಿ ಮನೋರೂಪಣದ ಈ ಕೈಗಾರಿಕೆಯನ್ನು ತಾತ್ವಿಕ ಭಿನ್ನಾಭಿಪ್ರಾಯಗಳ ಆಧಾರದ ಮೇಲೆ ಟೀಕಿಸುವ ವಿಮರ್ಶಕರಿದ್ದಾರೆ. ಅವರ ಗಮನವು, ರಾಜಕೀಯ ಪ್ರಚಾರದ ಪ್ರತ್ಯಕ್ಷ ಅಥವಾ ಪರೋಕ್ಷ ಉಪಕರಣವಾಗಿ ಸಮೂಹ ಮಾಧ್ಯಮಗಳು ವಹಿಸುವ ಪಾತ್ರದ ಮೇಲೆ ಕೇಂದ್ರೀಕೃತವಾಗಿರುತ್ತದೆ. ಮಾಧ್ಯಮಗಳಲ್ಲಿ ಪ್ರಚಾರವಾದ ಕಾರ್ಯಕ್ರಮಗಳ ರಾಜಕೀಯ ಆಶಯಗಳನ್ನು ಸೋಸಿ ತೆಗೆಯುವುದರಲ್ಲಿ ಮಾತ್ರ ಅವರ ಆಸಕ್ತಿ. ಎಷ್ಟೋ ಸಲ ಇಂಥ ಪ್ರಯತ್ನಗಳ ಹಿಂದೆ ಇರುವ ರಾಜಕೀಯದ ಗ್ರಹಿಕೆಯು ತೀರ ಸಂಕುಚಿತವಾದುದು. ಅಧಿಕಾರಕ್ಕಾಗಿ ನಡೆಯುವ ದಿನದಿನದ ಸ್ಪರ್ಧೆಗಳಲ್ಲಿ ಪರ ಅಥವಾ ವಿರೋಧವಾಗಿ ಇರುವುದೇ ರಾಜಕೀಯ ಎಂದು ಅವರು ತಿಳಿದಿರುತ್ತಾರೆ. 'ಸಂಸ್ಕೃತಿ ವಿಮರ್ಶಕ'ರ ಹಾಗೆಯೇ ಇವರಿಂದಲೂ ಮನಸ್ಸುಗಳನ್ನು ಕಟ್ಟುವ ಕೈಗಾರಿಕೆಯ ಸಮಗ್ರ ಪರಿಣಾಮಗಳನ್ನು ಗ್ರಹಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ ಆ ಕೈಗಾರಿಕೆಯು ತನ್ನ ಅಂತಿಮ ನೆಲೆಯಲ್ಲಿ ಖಾಸಗಿ ಪ್ರಜ್ಞೆ ಮತ್ತು ಸಾರ್ವಜನಿಕ ಪ್ರಜ್ಞೆಗಳ ನಡುವಿನ ಅಂತರವನ್ನೇ ಅಳಿಸಿಹಾಕುತ್ತದೆ.

ಹೀಗೆ ಆಕಾಶವಾಣಿ, ಚಲನಚಿತ್ರ, ದೂರದರ್ಶನ, ಧ್ವನಿಮುದ್ರಣ, ಜಾಹೀರಾತುಗಳು ಹಾಗೂ ಸಾರ್ವಜನಿಕ ಸಂಪರ್ಕ ಮುಂತಾದ "ಪ್ರಚಾರ ಮತ್ತು ಮನೋರೂಪಣ"ದ ಹೊಸ ಹೊಸ ತಂತ್ರಗಳನ್ನು ಬಿಡಿ ಬಿಡಿಯಾಗಿ, ಉಮೇದಿನಿಂದ ಚರ್ಚಿಸಲಾಗುತ್ತಿದೆ. ಆದರೆ ಮನೋನಿಯಂತ್ರಣದ ಕೈಗಾರಿಕೆಯನ್ನು ಅದರ ಒಟ್ಟಂದದಲ್ಲಿ ಚರ್ಚಿಸಲು ಸಾಧ್ಯವಾಗಿಲ್ಲ. ಪತ್ರಿಕೋದ್ಯಮ ಮತ್ತು ಪುಸ್ತಕ ಪ್ರಕಾಶನಗಳು ಸಂವಹನ ಮಾಧ್ಯಮಗಳ ಅತ್ಯಂತ ಹಳೆಯವೂ ಕುತೂಹಲಕಾರಿಯಾದವೂ ಆದ ವಿಭಾಗಗಳಾದರೂ ಅವುಗಳ ಬಗ್ಗೆ ಹೆಚ್ಚೇನೂ ಗಂಭೀರ ಚರ್ಚೆ ನಡೆಯುತ್ತಿಲ್ಲ. ಏಕೆಂದರೆ ಅವುಗಳ ಬಗೆಗಿನ ಚರ್ಚೆಯಲ್ಲಿ ತಾಂತ್ರಿಕ ನಾವೀನ್ಯದ ಆಕರ್ಷಣೆ ಅಷ್ಟೊಂದು ಇಲ್ಲ. ಆದರೂ ಬಾಲ್ಝಾಕ್ ತನ್ನ 'ಇಲ್ಯೂಷನ್ಸ್ ಪರಡ್ಯೂಸ್' ಕಾದಂಬರಿಯಲ್ಲಿ ನೂರು ವರ್ಷಗಳ ಹಿಂದೆ ಮಾಡಿದ ವಿಶ್ಲೇಷಣೆಯು ಇಂದಿಗೂ ಬಹುಮಟ್ಟಿಗೆ ಪ್ರಸ್ತುತವಾಗಿದೆ. ಇದನ್ನು ಆ ಪುಸ್ತಕವನ್ನು ಓದಿರುವ, ಹಾಲಿವುಡ್‌ನ ಯಾವುದೇ ಕಥಾಲೇಖಕನು ಒಪ್ಪಿಕೊಳ್ಳುತ್ತಾನೆ. 'ಸಂವಹನ ಮಾಧ್ಯಮ ಕೈಗಾರಿಕೆ'ಯ ಇತ್ತೀಚಿನ ಬೆಳವಣಿಗೆಗಳು ಇನ್ನೂ ಗಂಭೀರ ಶೋಧನೆಗೆ ವಸ್ತುವಾಗಿಲ್ಲ: ಫ್ಯಾಷನ್‌ಗಳು ಮತ್ತು ಕೈಗಾರಿಕಾ ವಿನ್ಯಾಸಗಳು, ಪ್ರತಿಷ್ಠಿತ ಧರ್ಮಗಳ ಪ್ರಚಾರ ತಂತ್ರಗಳು, ಐಸೋಟೆರಿಕ್ ತಂಡಗಳು, 'ಅಭಿಪ್ರಾಯ ಸಂಗ್ರಹ' ಪೋಲ್‌ಗಳು, ಇತ್ಯಾದಿಗಳು ಈ ಹೊಸ ಬೆಳೆಗೆ ಸೇರುತ್ತವೆ. ಇವೆಲ್ಲಕ್ಕಿಂತ ಹೆಚ್ಚಾಗಿ ಈಚಿನ ದಿನಗಳಲ್ಲಿ 'ಪ್ರವಾಸೋದ್ಯಮ' ಕೂಡ ತಾನೇ ಒಂದು ಸಮೂಹ ಮಾಧ್ಯಮವೆನ್ನುವಷ್ಟು ಪರಿಣಾಮಕಾರಿಯಾಗಿ ಬೆಳೆದು ನಿಂತಿದೆ.

ಹಾಗೆ ನೋಡಿದರೆ, ಈ ಭಯಾನಕ ಕೈಗಾರಿಕೆಯು ಸಂಪೂರ್ಣವಾಗಿ ಕಾರ್ಯನಿರತವಾಗುವ ದಿನಗಳು ಇನ್ನು ಮುಂದೆ ಕಾದಿವೆಯೆಂಬ ಸಂಗತಿಯು ನಮಗೆ ಸರಿಯಾಗಿ ತಿಳಿದಿಲ್ಲ. ಇಲ್ಲಿಯವರೆಗೆ, ಅದು ತನ್ನ ಯಶಸ್ಸಿಗೆ ಅತ್ಯಂತ ಅಗತ್ಯವಾದ ಕ್ಷೇತ್ರವನ್ನು ತೆಕ್ಕೆಗೆ ತೆಗೆದುಕೊಳ್ಳುವುದರಲ್ಲಿ ಯಶಸ್ವಿಯಾಗಿಲ್ಲ. ಶಿಕ್ಷಣವೇ ಆ ಕ್ಷೇತ್ರ. ಕಲಿಕೆಯ ವಿಧಾನಗಳನ್ನು ಎಲ್ಲ ಹಂತಗಳಲ್ಲಿಯೂ ಕೈಗಾರಿಕೀಕರಣಕ್ಕೆ ಒಳಪಡಿಸುವ ಕೆಲಸವು ಈಗತಾನೇ ಪ್ರಾರಂಭವಾಗಿದೆ. ನಾವು ಇನ್ನೂ 'ಪಠ್ಯಕ್ರಮ', ಶಾಲಾವ್ಯವಸ್ಥೆಗಳು, ಕಾಲೇಜು-ವಿಶ್ವವಿದ್ಯಾಲಯಗಳ ಸುಧಾರಣೆ, ಅಧ್ಯಾಪಕ ವೃತ್ತಿಯ ಕೊರತೆಗಳು ಮುಂತಾದ ಸಮಸ್ಯೆಗಳನ್ನು ಕುರಿತು ಚಿಂತಿಸುತ್ತಿರುವಾಗಲೇ ಅವುಗಳನ್ನು ನಗೆಪಾಟಲಾಗಿ ಮಾಡಿ ಬಿಡುವಂತಹ ತಾಂತ್ರಿಕ ಸುಧಾರಣೆಗಳು ಜಾರಿಗೆ ಬರುತ್ತಿವೆ. 'ಭಾಷಾ ಪ್ರಯೋಗ ಶಾಲೆ' ಮತ್ತು 'ಷಾರ್ಟ್ ಸರ್ಕ್ಯೂಟ್ ದೂರದರ್ಶನಗಳು' ಮುಂದೆ ಬರಲಿರುವ, ಸಂಪೂರ್ಣವಾಗಿ ಕೈಗಾರಿಕೀಕರಣಗೊಂಡ ಶಿಕ್ಷಣ ವ್ಯವಸ್ಥೆಯ ಮುನ್ಸೂಚನೆಗಳು ಮಾತ್ರ. ಆ ವ್ಯವಸ್ಥೆಯಲ್ಲಿ ದಿನದಿಂದ ದಿನಕ್ಕೆ ಹೆಚ್ಚು ಹೆಚ್ಚು ಕೇಂದ್ರೀಕೃತವಾದ ವಿಧಾನಗಳನ್ನು ಬಳಸಲಾಗುತ್ತದೆ. ಕಲಿಕೆಯನ್ನು ಕುರಿತ ಅಧ್ಯಯನದ ಇತ್ತೀಚಿನ ಫಲಿತಾಂಶಗಳನ್ನು ಉಪಯೋಗಿಸಲಾಗುತ್ತದೆ. ಇವೆಲ್ಲದರ ಫಲವಾಗಿ ಶಿಕ್ಷಣವು ಒಂದು ಸಮೂಹ ಮಾಧ್ಯಮವಾಗುತ್ತದೆ. ಉಳಿದೆಲ್ಲವುಗಳಿಗಿಂತ

ಅತ್ಯಂತ ಪರಿಣಾಮಕಾರಿಯಾದುದು; ಕೋಟಿಗಟ್ಟಲೆ ರೂಪಾಯಿಗಳ ವ್ಯವಹಾರ. ನಾವು ಅರ್ಥಮಾಡಿಕೊಳ್ಳಲಿ ಬಿಡಲಿ, ಈ ಕೈಗಾರಿಕೆಯು ಅತ್ಯಂತ ವೇಗವಾಗಿ ಬೆಳೆಯುತ್ತಿದೆ. ಈಗ ಇದು ೨೦ನೇ ಶತಮಾನದ ಅತಿ ಮುಖ್ಯವಾದ ಉದ್ಯಮ. ಇಂದು ಅಧಿಕಾರಕ್ಕಾಗಿ ನಡೆಯುತ್ತಿರುವ ಹೋರಾಟದಲ್ಲಿ ಆಸಕ್ತಿ ಇರುವ ರಾಜಕೀಯ ಮುಖಂಡರು, ಗೂಢಚರ್ಯೆ ವಿಭಾಗದವರು, ಕ್ರಾಂತಿಕಾರಿಗಳು ಎಲ್ಲರೂ ಈ ಮಹತ್ವದ ಸತ್ಯವನ್ನು ಬಹಳ ಚೆನ್ನಾಗಿ ತಿಳಿದುಕೊಂಡಿದ್ದಾರೆ. ಕೈಗಾರಿಕೆಗಳ ದೃಷ್ಟಿಯಿಂದ ಬಹಳ ಮುಂದುವರಿದ ದೇಶವೊಂದನ್ನು ಆಕ್ರಮಿಸಿದಾಗ ಇಲ್ಲವೆ ಬಿಡುಗಡೆ ಮಾಡಿದಾಗ, ಎಲ್ಲೋ ಒಂದು ಕಡೆ ಕ್ರಾಂತಿಯೋ ಪ್ರತಿಕ್ರಾಂತಿಯೋ ನಡೆದಾಗ ಗೆರಿಲ್ಲಾಗಳು, ಕಮ್ಯಾಂಡೋಗಳು ಮೊದಲು ಆಕ್ರಮಿಸುವುದು ನಗರದ ಕೇಂದ್ರ ಬಿಂದುಗಳನ್ನಲ್ಲ, ದೊಡ್ಡ ಕಾರ್ಖಾನೆಗಳನ್ನಲ್ಲ ಅಥವಾ ಚಕ್ರವರ್ತಿಯ ಅರಮನೆಯಂಥ ಸಾಂಕೇತಿಕ ಮಹತ್ವದ ಸ್ಥಳಗಳನ್ನೂ ಅಲ್ಲ. ಅವೆಲ್ಲ ೧೯ನೇ ಶತಮಾನದ ಮಾತಾಯಿತು. ಈಗ ಮೊಟ್ಟಮೊದಲು ಆಕಾಶವಾಣಿ ಮತ್ತು ದೂರದರ್ಶನ ಕೇಂದ್ರಗಳನ್ನು, ದೂರವಾಣಿ ಮತ್ತು ಟೆಲಿಕ್ಸ್ ವಿನಿಮಯ ಕೇಂದ್ರಗಳನ್ನು ಹಾಗೂ ಮುದ್ರಣಾಲಯಗಳನ್ನು ವಶಪಡಿಸಿಕೊಳ್ಳಲಾಗುತ್ತದೆ. ಹೀಗೆ ಬೇರುಬಿಟ್ಟುಕೊಂಡ ನಂತರ, ಅವರು ಮೊದಮೊದಲು ಸಾರ್ವಜನಿಕ ಸೇವೆಗಳಲ್ಲಿ ತೊಡಗಿರುವವರ ತಂಟೆಗೆ ಹೋಗುವುದಿಲ್ಲ; ಬೃಹತ್ ಕೈಗಾರಿಕೆಗಳ ಕಾರ್ಮಿಕರನ್ನು ಬದಲಾಯಿಸುವ ಯೋಚನೆ ಮಾಡುವುದಿಲ್ಲ; ಆದರೆ ಪ್ರಮುಖ ಸುದ್ದಿ ಮಾಧ್ಯಮಗಳಲ್ಲಿ ಕೆಲಸ ಮಾಡುವ ಎಲ್ಲ ಅಧಿಕಾರಿಗಳನ್ನು ತತ್‌ಕ್ಷಣದಿಂದಲೇ ಕಿತ್ತು ಹಾಕಲಾಗುತ್ತದೆ. ಇಂತಹ ನಿರ್ಣಾಯಕ ಸಂದರ್ಭಗಳಲ್ಲಿ ಮಾಧ್ಯಮವೆಂಬ ಉದ್ಯಮದ ಮಹತ್ವವು ನಮಗೆ ಗೊತ್ತಾಗುತ್ತದೆ.

ಈ ಕೈಗಾರಿಕೆಯು ಅಸ್ತಿತ್ವಕ್ಕೆ ನಾಲ್ಕು ಮುಖ್ಯ ಅಗತ್ಯಗಳಿವೆ. ಅವುಗಳನ್ನು ಸಂಕ್ಷಿಪ್ತವಾಗಿ ಹೀಗೆ ವಿವರಿಸಬಹುದು.

೧. ಆ ಮಾತಿನ ಅತ್ಯಂತ ವ್ಯಾಪಕವಾದ ಅರ್ಥದಲ್ಲಿ ಎಲ್ಲವನ್ನು ತಿಳಿದುಕೊಳ್ಳಬೇಕು, ತಿಳಿಸಬೇಕು ಎಂಬ ತಾತ್ತ್ವಿಕ ನಂಬಿಕೆಯು ಮನಸ್ಸಿನ ಕೈಗಾರಿಕೀಕರಣಕ್ಕೆ ಅತ್ಯಂತ ಅಗತ್ಯವಾದುದು. ಧಾರ್ಮಿಕ ನಂಬಿಕೆಗಳಿಗೆ ಅನುಗುಣವಾಗಿ ಬದುಕನ್ನು ರೂಪಿಸಿಕೊಳ್ಳಬೇಕಾದ ಸನ್ನಿವೇಶವು ಇಲ್ಲವಾಗುವವರೆಗೆ ಈ ಉದ್ಯಮವು ಬೆಳೆಯಲಾರದು. ದಿವ್ಯ ದರ್ಶನದಲ್ಲಿ ಹಾಗೂ ದೈವಿ ಮಾರ್ಗದರ್ಶನದಲ್ಲಿ ಜನರಿಗೆ ನಂಬಿಕೆ ಇರುವತನಕ, ಪುರೋಹಿತರಿಂದ ದತ್ತವಾದ ಪವಿತ್ರ ಪುಸ್ತಕಗಳಲ್ಲಿ ಇರುವ ನಂಬಿಕೆಯು ಪುಡಿಪುಡಿಯಾಗುವತನಕ ಈ ಉದ್ಯಮವು ಮುಂದಡಿ ಇಡಲಾರದು. ಇದೊಂದು ಕುತೂಹಲದ ಸಂಗತಿ: ಮನುಷ್ಯರ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುವುದೇ ಮಾಧ್ಯಮ ಕೈಗಾರಿಕೆಯ ಗುರಿ. ಆದರೆ ಮಾಧ್ಯಮವನ್ನು ಸ್ವೀಕರಿಸಲು ಸ್ವತಂತ್ರವಾದ ಮನಸ್ಸುಗಳಿರದಿದ್ದರೆ ಆ ಕೈಗಾರಿಕೆಯು ಅಸ್ತಿತ್ವಕ್ಕೆ ಬರುವುದೇ ಸಾಧ್ಯವಿಲ್ಲ. ನಮ್ಮ ಪ್ರಪಂಚದಲ್ಲಿ ತನ್ನ ದೈವ ನಿರ್ದೇಶಿತ ಸ್ವರೂಪವನ್ನು ಕಳೆದುಕೊಂಡ ಕಟ್ಟಕಡೆಯ ದೇಶವೆಂದರೆ ಟಿಬೇಟ್.

ಅಂದಿನಿಂದ ಇಂದಿನವರೆಗೆ ಜಗತ್ತಿನ ಎಲ್ಲ ಭಾಗಗಳಲ್ಲಿಯೂ ಈ ತಾತ್ವಿಕ ಸನ್ನಿವೇಶವು ನಿರ್ಮಾಣವಾಗಿದೆ.

೨. ಮನಸ್ಸಿನ ಕೈಗಾರಿಕೀಕರಣಕ್ಕೆ ಬೇಕಾದ ರಾಜಕೀಯ ಅಗತ್ಯವು ಈ ರೀತಿಯಿದೆ: ಅಂಥ ದೇಶಗಳಲ್ಲಿ ಮಾನವ ಹಕ್ಕುಗಳ ಪರವಾದ ಘೋಷಣೆಯನ್ನು ಮಾಡಿರಬೇಕು. ಅದರಲ್ಲಿಯೂ ಸಮಾನತೆ ಮತ್ತು ಸ್ವಾತಂತ್ರ್ಯಗಳಂಥ ಮೌಲ್ಯಗಳನ್ನು ಗಟ್ಟಿಯಾಗಿ ಎತ್ತಿಹಿಡಿದಿಡಬೇಕು. ಯುರೋಪಿನಲ್ಲಿ ಫ್ರೆಂಚ್ ಕ್ರಾಂತಿಯ ಮೂಲಕ ಈ ಗಡಿರೇಖೆಯನ್ನು ದಾಟಲಾಯಿತು. ಕಮ್ಯೂನಿಸ್ಟ ದೇಶಗಳಲ್ಲಿ ಅಕ್ಟೋಬರ್ ಕ್ರಾಂತಿಯ ತರುವಾಯ ಮಾನವ ಹಕ್ಕುಗಳ ಘೋಷಣೆಯಾಯಿತು. ಆಫ್ರಿಕಾ, ಅಮೆರಿಕಾ ಮತ್ತು ಏಷ್ಯಾಗಳ ರಾಷ್ಟ್ರಗಳಲ್ಲಿ ಆಡಳಿತದ ವಿರುದ್ಧವಾದ ಹೋರಾಟಗಳೇ ಇಂಥ ಘೋಷಣೆಗಳ ಪ್ರೇರಣೆಯಿಂದ ನಡೆದವು. ಆದರೆ ಈ ಕೈಗಾರಿಕೆಗೆ ಮೇಲೆ ಹೇಳಿದ ಹಕ್ಕುಗಳು, ಘೋಷಣೆಗಳು ವಾಸ್ತವದಲ್ಲಿ ನಿಜವಾಗಬೇಕು ಎಂಬ ಯಾವುದೇ ಆಸಕ್ತಿಯೂ ಇಲ್ಲ. ಹಾಗೆ ನೋಡಿದರೆ ಬಹುಪಾಲು ಜನರಿಗೆ ಈ ಹಕ್ಕುಗಳು, ಘೋಷಣೆಗಳು ಕೇವಲ ನಟನೆಯಾಗಿ ಉಳಿದಿವೆ. ಹೆಚ್ಚೆಂದರೆ ಎಂದೋ ಎಲ್ಲಿಯೋ ನಿಜವಾಗಬಹುದಾದ ದೂರದ ಕನಸುಗಳಾಗಿ ಮಾತ್ರ ಅವುಗಳಿಗೆ ಅಸ್ತಿತ್ವವಿದೆ. ಆದರೆ ಹುಸಿ ಮತ್ತು ನಿಜಗಳ ನಡುವಿನ ಈ ಗಡಿಗೆರೆಯು ಮನಸ್ಸು ಮಿದಿಯುವ ನಮ್ಮ ಉದ್ಯಮಕ್ಕೆ ಅಗತ್ಯವಾದ ವೇದಿಕೆಗಳನ್ನು ದೊರಕಿಸಿಕೊಡುತ್ತದೆ. (ಎಂದಿಗೂ ನಿಜವಾಗದ ಈ ಸಂಗತಿಗಳನ್ನು ಕುರಿತಂತೆ, ನಂಬುವ ಜನ ಸಮುದಾಯವನ್ನು ಮರುಳು ಮಾಡುತ್ತಿರುವುದು ಮಾಧ್ಯಮ ಕೈಗಾರಿಕೆಗಳಿಗೆ ಬಹಳ ಸುಲಭ.) ವ್ಯಕ್ತಿಯದೇ ಇರಲಿ, ಒಟ್ಟು ಸಮುದಾಯದ್ದೇ ಇರಲಿ ಪ್ರಜ್ಞೆ ಎನ್ನುವುದು ರಾಜಕೀಯ ಸಂಗತಿಯಾದದ್ದು ತೀರ ಈಚಿಗೆ. ಯಾವಾಗ ಜನರ ಮನಸ್ಸುಗಳಲ್ಲಿ ಹಾಗೂ ಒಟ್ಟು ಸಮುದಾಯದಲ್ಲಿ ಪ್ರತಿಯೊಬ್ಬ ಮನುಷ್ಯನಿಗೂ ತನ್ನ ಭವಿಷ್ಯವನ್ನು ರೂಪಿಸುವ ಹಕ್ಕು ಇರಬೇಕೆಂಬ ನಂಬಿಕೆಯು ಬೀಜಾರೋಪವಾಯಿತೋ ಆ ಕ್ಷಣದಿಂದ ಪ್ರಜ್ಞೆಯು ರಾಜಕೀಯ ಸಂಗತಿಯಾಯಿತು. ಅದೇ ಕ್ಷಣದಿಂದ ಯಾವುದೇ ಆಡಳಿತ ವ್ಯವಸ್ಥೆಯು ತಾನು ಮಾಡುವ ಕೆಲಸಗಳಿಗೆ ತನ್ನಿಂದ ಆಳಲ್ಪಡುವವರ 'ಅನುಮತಿ' ಪಡೆಯುವುದು ಅಗತ್ಯವಾಯಿತು. ಯಾರು ಆಳಬಯಸುವವನೋ ಅವನು ಜನರ ಮನಸ್ಸನ್ನು ಒಲಿಸಬೇಕು. ಅವರ ಮನಸ್ಸುಗಳ ಮೇಲೆ ಹಿಡಿತ ಪಡೆದು ಅವುಗಳನ್ನು ಬದಲಾಯಿಸಬೇಕು. ಇದು ತಂತ್ರಜ್ಞಾನದ ಯುಗವಾದ್ದರಿಂದ ಅದರ ಎಲ್ಲ ಸಲಕರಣೆಗಳನ್ನು ಉಪಯೋಗಿಸಿ ತನ್ನ ಉದ್ದೇಶವನ್ನು ಸಾಧಿಸಿಕೊಳ್ಳಬೇಕು.

೩. ಆರ್ಥಿಕವಾಗಿ ನೋಡುವುದಾದರೆ ಈ ಮನೋನಿರ್ಮಾಣ ಕೈಗಾರಿಕೆಯು ಪ್ರಬುದ್ಧವಾಗಲು ಒಂದು ಕನಿಷ್ಠ ಪ್ರಮಾಣದ ಸಂಪತ್ತು ಸಮಾಜದಲ್ಲಿ ಉತ್ಪತ್ತಿಯಾಗಿರಲೇಬೇಕು. ಅಗತ್ಯವಾದ ಅಧಿಕ ಬಂಡವಾಳವನ್ನು (Surplus) ಹೊಂದಿರದ ಸಮಾಜವು ಮಾಧ್ಯಮ ಕೈಗಾರಿಕೆಯನ್ನು ನಡೆಸುವ ಶಕ್ತಿ ಹೊಂದಿರುವುದಿಲ್ಲ. ಅದಕ್ಕೆ ಆ

ಕೈಗಾರಿಕೆಯ ಅಗತ್ಯವೂ ಇರುವುದಿಲ್ಲ. ೧೯ನೇ ಶತಮಾನದ ಪೂರ್ವಾರ್ಧದಲ್ಲಿ ಪಶ್ಚಿಮ ಯುರೋಪ್‌ನ ದೇಶಗಳಲ್ಲಿ ಹಾಗೂ ಆ ರೀತಿಯ ಜೀವನ ಮಟ್ಟವನ್ನು ನಿನ್ನೆ ಮೊನ್ನೆಯವರೆಗೆ ಉಳಿಸಿಕೊಂಡಿದ್ದ ಜಗತ್ತಿನ ಹತ್ತು ಹಲವು ರಾಷ್ಟ್ರಗಳಲ್ಲಿ ರೈತರು ಮತ್ತು ಕಾರ್ಮಿಕರು ಹೊಟ್ಟೆಪಾಡನ್ನು ನೋಡಿಕೊಳ್ಳಲಾರದ ಮಟ್ಟದಲ್ಲಿ ಬದುಕಿದ್ದರು. ಆರ್ಥಿಕ ಬೆಳವಣಿಗೆಯ ಈ ಹಂತದಲ್ಲಿ ಶ್ರಮಿಕ ವರ್ಗಕ್ಕೆ ತನ್ನ ಅಸ್ತಿತ್ವವನ್ನು ರೂಪಿಸಿಕೊಳ್ಳುವ ಶಕ್ತಿ ಇದೆ ಎನ್ನುವ ಮಾತಿಗೆ ಯಾವ ಅರ್ಥವೂ ಇಲ್ಲ. ಆ ವರ್ಗಗಳ ಮೇಲೆ ಯಾವುದೇ ಮುಚ್ಚುಮರೆಯಿಲ್ಲದ ಭೌತಿಕ ಒತ್ತಡಗಳನ್ನು ಹೇರಲಾಗುತ್ತದೆ ಮನಸ್ಸುಗಳನ್ನು ತಿರುಚಿಬಿಡುವ, ತಲತಲಾಂತರಗಳಿಂದಲೂ ಬಳಕೆಯಲ್ಲಿರುವ ಮಾರ್ಗೋಪಾಯಗಳನ್ನು ಉಪಯೋಗಿಸಲಾಗುತ್ತದೆ. ಕೈಗಾರಿಕಾ ಪ್ರಗತಿಯ ಮೊದಲ ಘಟ್ಟಗಳಲ್ಲಿ, ಅಲ್ಪಸಂಖ್ಯಾತ ಆಳುವ ವರ್ಗಕ್ಕೆ ಶಾಲೆಗಳು ಮತ ಮಾನ್ಯಗಳು, ಕಾನೂನು, ಸೈನ್ಯ, ಹಳೆಯ ಸಂಪ್ರದಾಯ ಗಳು ಮತ್ತು ನಂಬಿಕೆಗಳು ತಮ್ಮ ಉದ್ದೇಶಗಳನ್ನು ನೆರವೇರಿಸಿಕೊಳ್ಳಲು ಸಾಕಾಗುತ್ತವೆ. ಆದರೆ, ಕ್ರಮೇಣ ಮೂಲಭೂತ ಅಗತ್ಯವನ್ನು ಪೂರೈಸುವ ಕೈಗಾರಿಕೆಗಳು ನೆಲೆಯೂರು ತ್ತವೆ. ಗ್ರಾಹಕರ ಉಪಭೋಗ ವಸ್ತುಗಳ ಸಾಮೂಹಿಕ ಉತ್ಪಾದನೆಯು ಪ್ರಾರಂಭ ವಾಗುತ್ತದೆ. ಅಂಥ ವಸ್ತುಗಳು ಜನ ಸಾಮಾನ್ಯರಿಗೂ ತಲುಪತೊಡಗುತ್ತವೆ. ಆಗ ಆಳುವ ವರ್ಗಗಳ ಮುಂದೆ ಒಂದು ಸಮಸ್ಯೆ ಎದ್ದು ನಿಲ್ಲುತ್ತದೆ. ಉತ್ಪಾದನೆಯ ವಿಧಾನ ಗಳು ವಿಸ್ತಾರವಾದಂತೆಲ್ಲ ಶಿಕ್ಷಣದ ಮಟ್ಟದಲ್ಲಿ ಉನ್ನತಿಯಾಗುವುದು ಅನಿವಾರ್ಯ. ಈ ಉನ್ನತಿಯು ಕೇವಲ ಮೇಲುವರ್ಗಗಳವರಿಗೆ ದೊರೆತರೆ ಸಾಲದು, ಜನಸಾಮಾನ್ಯರಿಗೆ ದೊರಕಬೇಕು. ಹೀಗೆ ಮಾಡುವುದರಿಂದ ಶ್ರಮಿಕ ವರ್ಗದವರನ್ನು ತುಳಿದು ಇಟ್ಟಿರ ಬೇಕು ಎಂಬ ಒತ್ತಡವು ನಿಧಾನವಾಗಿ ಕಡಿಮೆಯಾದಂತೆ ತೋರುತ್ತದೆ ಪ್ರತಿ ದಿನವೂ ಕೆಲಸ ಮಾಡಬೇಕಾದ ಅವಧಿಯು ಕಡಿಮೆಯಾಗುತ್ತದೆ. ಜನರ ಜೀವನ ಮಟ್ಟ ಹೆಚ್ಚು ತ್ತದೆ. ಸಹಜವಾಗಿಯೇ ಜನರಿಗೆ ತಮ್ಮ ಸನ್ನಿವೇಶದ ಅರಿವು ಉಂಟಾಗುತ್ತದೆ. ಮೊಟ್ಟ ಮೊದಲ ಬಾರಿಗೆ ಅವರಿಗೆ ಆ ಮಾತಿನ ನಿಜವಾದ ಅರ್ಥದಲ್ಲಿ ತಮ್ಮತನದ ತಿಳುವಳಿಕೆ ಬರುತ್ತದೆ. ಈ ಪ್ರಕ್ರಿಯೆಯಲ್ಲಿ ಅಪಾರವಾದ ಚೈತನ್ಯವೂ ಬಿಡುಗಡೆಯನ್ನು ಪಡೆಯು ತ್ತದೆ. ಹೀಗೆ ಬಿಡುಗಡೆಯಾದ ಚೈತನ್ಯವು ಅನಿವಾರ್ಯವಾಗಿ, ಪ್ರತಿಷ್ಠಿತವಾಗಿರುವ ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಗಳಿಗೆ ಅಪಾಯಕಾರಿಯಾಗಿರುತ್ತದೆ. ಇಂದು ಜಗತ್ತಿನ ಅನೇಕ ನವವಿಮುಕ್ತ ರಾಷ್ಟ್ರಗಳಲ್ಲಿ ಈ ಕ್ರಾಂತಿಕಾರಿ ಪ್ರಕ್ರಿಯೆಗಳನ್ನು ಗುರುತಿಸ ಬಹುದು. ಇಂತಹ ರಾಷ್ಟ್ರಗಳಲ್ಲಿ ಇದುವರೆಗೆ ಸಾಮ್ರಾಜ್ಯಶಾಹಿ ಶಕ್ತಿಗಳು ಈ ಕ್ರಾಂತಿ ಕಾರಕ ಪ್ರಕ್ರಿಯೆಯನ್ನು ಕೃತಕವಾಗಿ ತಡೆಹಿಡಿದಿದ್ದರು. ಆದ್ದರಿಂದಲೇ ಮನಸ್ಸುಗಳನ್ನು ರೂಪಿಸುವ ಕೈಗಾರಿಕೆಗಳ ಬೆಳವಣಿಗೆಗೆ ಅಗತ್ಯವಾದ ರಾಜಕೀಯ ಸನ್ನಿವೇಶಗಳು ಇಂಥ

ದೇಶಗಳಲ್ಲಿ ರಾತ್ರಿ ಕಳೆದು ಬೆಳಗಾಗುವುದರೊಳಗೆ ಒಡಮೂಡಿಬಿಡುತ್ತವೆ.[೧]

೪. ಆರ್ಥಿಕ ಬೆಳವಣಿಗೆಯು ಒಂದು ಮಟ್ಟ ತಲುಪಿದ ಮೇಲೆ, ಕೈಗಾರಿಕೀರಣವು ಮನೋರಂಜನಾ ಉದ್ಯಮಕ್ಕೆ ಅಗತ್ಯವಾದ ಮತ್ತೊಂದು ಸನ್ನಿವೇಶವನ್ನು ತನ್ನ ಜತೆಗೇ ತರುತ್ತದೆ. ಆ ಕೈಗಾರಿಕೆಯು ಅವಲಂಬಿಸಿರುವ ತಂತ್ರಜ್ಞಾನವೇ ಆ ನಾಲ್ಕನೆಯ ಸನ್ನಿವೇಶ. ವಿದ್ಯುಚ್ಛಕ್ತಿಯನ್ನು ಮೊದಲು ಬಳಸಿದ್ದು ಅಧಿಕಾರಕ್ಕೆ ಸಂಬಂಧಪಟ್ಟ ಕೈಗಾರಿಕೆಗಳಲ್ಲಿಯೇ ಹೊರತು ಸಂವಹನ ಸಂಬಂಧೀ ಕೈಗಾರಿಕೆಯಲ್ಲಿ ಅಲ್ಲ. ಮೊದಲು ಡೈನಮೋಗಳು ಮತ್ತು ವಿದ್ಯುತ್‌ಚಾಲಿತ ಮೋಟಾರುಗಳು ಬಂದವು. ಆಮೇಲೆ ಧ್ವನಿವರ್ಧಕಗಳು ಹಾಗೂ ಚಲನಚಿತ್ರ ಕ್ಯಾಮರಾಗಳು ಬಂದವು. ಈ ಅನುಕ್ರಮಕ್ಕೆ ಖಚಿತವಾದ ಆರ್ಥಿಕ ಕಾರಣಗಳಿವೆ. ದಿನಬಳಕೆಯ ವಸ್ತುಗಳನ್ನು ಸಾಮೂಹಿಕವಾಗಿ ಉತ್ಪಾದನೆ ಮಾಡುವವರೆಗೆ, ವಿದ್ಯುಚ್ಛಕ್ತಿಯು ಎಲ್ಲರಿಗೂ ದೊರೆಯತೊಡಗುವವರೆಗೆ, ಚಲನಚಿತ್ರ, ದೂರದರ್ಶನ ಧ್ವನಿಮುದ್ರಣ ಮುಂತಾದ ಉದ್ಯಮಗಳ ತಳಹದಿಯನ್ನು ಹಾಕುವುದು ಸಾಧ್ಯವಿರಲಿಲ್ಲ.

ನಮ್ಮ ಕಾಲದಲ್ಲಂತೂ, ಮನಸ್ಸುಗಳನ್ನು ಕೈಗಾರಿಕೀಕರಣಗೊಳಿಸಲು ಅಗತ್ಯವಾದ ತಂತ್ರಜ್ಞಾನವು ಜಗತ್ತಿನ ಯಾವ ಮೂಲೆಗೆ ಬೇಕಾದರೂ ಹೋಗಬಲ್ಲುದು. ಆದರೆ ಆರ್ಥಿಕ ಹಾಗೂ ಸಾಮಾಜಿಕ ಸನ್ನಿವೇಶಗಳ ಬಗೆಗೆ ಇಂದು ಅದೇ ಮಾತನ್ನು ಹೇಳಲಾಗುವುದಿಲ್ಲ. ಇಂದಲ್ಲ, ನಾಳೆ ಆ ಕಾಲವೂ ಬರುತ್ತದೆ ಎನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ. ಈ ಪ್ರಕ್ರಿಯೆಯು ಒಮ್ಮುಖವಾದುದು. ಮತ್ತೆ ಹಿಂದಿನ ಸ್ಥಿತಿಗೆ ಹೋಗುವುದು ಸಾಧ್ಯವೇ ಇಲ್ಲ. ಆದ್ದರಿಂದಲೇ ಈ ಉದ್ಯಮವನ್ನು ನಾಶಮಾಡಿಬಿಡಬೇಕೆಂದು ಹೊರಡುವ ಯಾವುದೇ ವಿಮರ್ಶಾ ವಿಧಾನವು ಒಟ್ಟಂದದಲ್ಲಿಯೇ ನಿಷ್ಪ್ರಯೋಜಕವಾಗಿದೆ. ಅದು ಭ್ರಮಾಜನ್ಯವಾಗಿರುತ್ತದೆ. ಏಕೆಂದರೆ ಇಂಥ ಸ್ಥಿತಿಗೆ ಕಾರಣವಾಗಿರುವ ಕೈಗಾರಿಕೀಕರಣವನ್ನು ನಿಲ್ಲಿಸಿಬಿಡಬೇಕು, ಇಲ್ಲವಾಗಿಸಬೇಕು ಎನ್ನುವ ಪೂರ್ವಗ್ರಹಿಕೆಯು ಸಂಪೂರ್ಣವಾಗಿ ಆತ್ಮಹತ್ಯಾಕರವಾದುದು. ಇಂತಹ ಸೂಚನೆಯಲ್ಲಿಯೇ ಒಂದು ಭಯಾನಕ ವ್ಯಂಗ್ಯವಿದೆ. ಏಕೆಂದರೆ ನಮ್ಮ ನಾಗರಿಕತೆಗೆ ತನ್ನನ್ನು ತಾನು ನಾಶಮಾಡಿಕೊಳ್ಳುವುದು ತಾಂತ್ರಿಕ ಸಮಸ್ಯೆಯಾಗಿ ಉಳಿದೇ ಇಲ್ಲ. ಅದು ಏನೇ ಇರಲಿ, ನಮ್ಮ ಸಂಪ್ರದಾಯವಾದೀ ವಿಮರ್ಶಕರು, ಸಮೂಹ ಮಾಧ್ಯಮಗಳ ಬಗ್ಗೆ ದೂರು ಹೇಳುವಾಗ, ಗೊಣಗುವಾಗ ಈ ರೀತಿಯ ಸರ್ವನಾಶದ ಗುರಿಯನ್ನು ಹೊಂದಿರುವುದಿಲ್ಲ. ಅವರು ಮಾಧ್ಯಮಗಳು 'ಮೌಲ್ಯ'ಗಳನ್ನು ಹಾಳುಗೆಡಹುತ್ತಿವೆ ಎನ್ನುತ್ತಾರೆ; ಸಮೂಹ– ನಾಗರಿಕತೆಯು ಅಭಿರುಚಿವಿಹೀನವಾಗಿದೆ ಎನ್ನುತ್ತಾರೆ: ಪಾರಂಪರಿಕ ಸಂಸ್ಕೃತಿಯನ್ನು ಭ್ರಷ್ಟಗೊಳಿಸಲಾಗುತ್ತಿದೆ ಎನ್ನುತ್ತಾರೆ. ಆದರೆ ಅವರ ಅಂತಿಮ ಉದ್ದೇಶವಿರುವುದು, ಈ ಎಲ್ಲ ಸಲಕರಣೆಗಳನ್ನೂ

೧. ಅಲ್ಜೀರಿಯಾದ ಕ್ರಾಂತಿಯಲ್ಲಿ ಟ್ರಾನ್ಸಿಸ್ಟರ್ ರೇಡಿಯೋ ವಹಿಸಿದ ಪಾತ್ರವನ್ನು ಫ್ರಾಂಜ್ ಫೆನಾನ್ ಒತ್ತಿ ಹೇಳಿದ್ದಾರೆ. ಅದೇ ರೀತಿ ಕ್ಯಾಸ್ಟ್ರೋರವರ ಕ್ಯೂಬಾದ ರಾಜಕೀಯ ಜೀವನದಲ್ಲಿ ಟೆಲಿವಿಷನ್ ವಹಿಸಿರುವ ಪಾತ್ರವೂ ಎಲ್ಲರಿಗೂ ಗೊತ್ತಿದೆ.

ತಮ್ಮ ಜೊತೆಗೆ ತೆಗೆದುಕೊಂಡು, ಅವುಗಳ ಜೊತೆಗೆ ಇನ್ನಷ್ಟು ಸುಖಗಳನ್ನು ನೀಡುವ, ಹಳ್ಳಿಯ ಎಸ್ಟೇಟುಗಳಲ್ಲಿ ಸಮೃದ್ಧವಾದ ಪಂಡಿತಜೀವನ ನಡೆಸುವುದರಲ್ಲಿ.

ಇದೆಲ್ಲ ನಿಜವಾದರೂ, ಈ ಮಾಧ್ಯಮ ಕೈಗಾರಿಕೆಯು ಹಿಂದಿನ ಕಾಲದಲ್ಲಿಯೂ ಪ್ರತಿಭಾವಂತರ ವಿಶ್ಲೇಷಣೆಗೆ ಒಳಪಟ್ಟಿವೆ. ಬಂಡವಾಳಶಾಹೀ ರಾಷ್ಟ್ರಗಳ ಮಟ್ಟಿಗೆ ಹೇಳುವುದಾದರೆ, ಟೀಕಾಕಾರರ ಆಕ್ರಮಣವು ಬಹುಮಟ್ಟಿಗೆ ಹೊಸ ಸಂವಹನ ಮಾಧ್ಯಮಗಳು ಹಾಗೂ ವಾಣಿಜ್ಯಪರ ಜಾಹೀರಾತುಗಳ ಮೇಲೆ ನಡೆದಿದೆ. ಸಂಪ್ರದಾಯವಾದಿಗಳು, ಮಾರ್ಕ್ಸ್‌ವಾದಿಗಳು ಇಬ್ಬರೂ ಅವುಗಳ ಕೀಳು ನೆಲೆಯನ್ನು ಟೀಕಿಸಲು ಸದಾಸಿದ್ಧರಾಗಿದ್ದಾರೆ. ಆದರೆ ಈ ಆಕ್ಷೇಪಣೆಯು ಸಮಸ್ಯೆಯ ಹೃದಯ ಕೇಂದ್ರವನ್ನು ಮುಟ್ಟುವುದೇ ಇಲ್ಲ. ಹಾಗೆ ನೋಡಿದರೆ ಸುದ್ದಿ ಮತ್ತು ಸಂಗೀತಗಳನ್ನು ಬೃಹತ್ ಪ್ರಮಾಣದಲ್ಲಿ ಉತ್ಪನ್ನ ಮಾಡಿ, ಮಾರಾಟ ಮಾಡಿ ಲಾಭ ಪಡೆಯುವುದೂ ಅನೈತಿಕವಾಗುತ್ತದೆ. ಒಟ್ಟಿನಲ್ಲಿ ಇಂಥ ಆಕ್ಷೇಪಣೆಗಳು ಮಾಧ್ಯಮ ಕೈಗಾರಿಕೆಯ ಮೂಲ ಲಕ್ಷಣಗಳನ್ನೇ ಗಮನಿಸುವುದಿಲ್ಲ. ಇಂದು ಮಾಧ್ಯಮ ಕೈಗಾರಿಕೆಯ ಮುಂದುವರಿದ ವಿಭಾಗಗಳು, ಯಾವುದೇ ರೀತಿಯ ಮಾರಾಟಮಾಡುವುದನ್ನು ನಿಲ್ಲಿಸಿಬಿಟ್ಟಿವೆ. ತಾಂತ್ರಿಕ ಪ್ರಬುದ್ಧತೆಯು ಬೆಳೆಯುತ್ತ ಹೋದಂತೆ ಕಾಗದ, ಪ್ಲಾಸ್ಟಿಕ್, ಸೆಲ್ಯುಲಾಯ್ಡ್ ಮುಂತಾದ ಭೌತಿಕ ವಸ್ತುಗಳು ಮಾಯವಾಗತೊಡಗುತ್ತವೆ. ಸ್ವಲ್ಪ ಹಳೆಯದಾದ ಪುಸ್ತಕ ಕೈಗಾರಿಕೆಯಲ್ಲಿ ಮಾತ್ರ ಉತ್ಪಾದಿತ ವಸ್ತುವನ್ನು ಮಾರಬೇಕು ಎಂಬ ಒತ್ತಡ ಸ್ವಲ್ಪ ಮಟ್ಟಿಗಾದರೂ ಇರುತ್ತದೆ. ಈ ದೃಷ್ಟಿಯಲ್ಲಿ ಇಂದು ಆಕಾಶವಾಣಿ ಕೇಂದ್ರಕ್ಕೂ, ಬೆಂಕಿ ಪೆಟ್ಟಿಗೆ ಕಾರ್ಖಾನೆಗೂ ಯಾವುದೇ ರೀತಿಯ ಹೋಲಿಕೆಯೂ ಇಲ್ಲ. ಉತ್ಪಾದಿತ ವಸ್ತುವು ತನ್ನ ಭೌತಿಕವಾದ ನೆಲೆಯನ್ನು ಕಳೆದುಕೊಂಡಂತೆ ಹೆಚ್ಚು ಹೆಚ್ಚು ಅಮೂರ್ತವಾಗುತ್ತದೆ. ಆಗ ಕೈಗಾರಿಕೆಗೆ, ಅದನ್ನು ಗಿರಾಕಿಗಳಿಗೆ ಮಾರಬೇಕೆಂಬ ಒತ್ತಡವೂ ಕಡಿಮೆಯಾಗುತ್ತದೆ. ನೀವು ಒಂದು ಪುಸ್ತಕವನ್ನು ಕೊಂಡು ಕೊಂಡರೆ ಅದರ ತಯಾರಿಕೆಗೆ ಎಷ್ಟು ಹಣ ಖರ್ಚಾಗಿರುತ್ತದೆಯೋ ಅದರ ಆಧಾರದ ಮೇಲೆ ಹಣ ಕೊಡುತ್ತೀರಿ. ಅದೇ ಒಂದು ವಾರ ಪತ್ರಿಕೆಯನ್ನು ಕೊಂಡುಕೊಂಡಾಗ ಕೊಡುವ ಹಣ ತಯಾರಿಕೆಯ ವೆಚ್ಚದ ಬಹು ಸ್ವಲ್ಪ ಭಾಗ ಮಾತ್ರ. ಆದರೆ ನೀವು ಒಂದು ಆಕಾಶವಾಣಿ ಕಾರ್ಯಕ್ರಮವನ್ನೋ, ದೂರದರ್ಶನ ಕಾರ್ಯಕ್ರಮವನ್ನೋ ಪಡೆಯಬೇಕಾದರೆ ಯಾವ ಹಣವನ್ನು ಕೊಡಬೇಕಾಗಿಲ್ಲ. ನೇರವಾದ ಜಾಹೀರಾತುಗಳು ಮತ್ತು ರಾಜಕೀಯ ಪ್ರಚಾರಗಳನ್ನು ಯಾರೂ ಹಣಕೊಟ್ಟು ಕೊಂಡುಕೊಳ್ಳುವುದಿಲ್ಲ. ಬದಲಾಗಿ ಅವುಗಳನ್ನು ನಮ್ಮ ಗಂಟಲೊಳಗೆ ತುರುಕಲಾಗುತ್ತದೆ. ಈ ಕೈಗಾರಿಕೆಯ ಉತ್ಪನ್ನಗಳನ್ನು 'ಮಾರುವವರ ಮಾರುಕಟ್ಟೆ', 'ಕೊಳ್ಳುವವರ ಮಾರುಕಟ್ಟೆ' ಅಥವಾ 'ಉತ್ಪಾದನಾ ವೆಚ್ಚ' ಮುಂತಾದ ಪರಿಭಾಷೆಯ ಮೂಲಕ ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ. ಆ ಉತ್ಪನ್ನಗಳು ಒಂದು ಅರ್ಥದಲ್ಲಿ ಬಿಟ್ಟಿಯಾಗಿ ಸಿಗುತ್ತವೆ. ಸಮೂಹ ಮಾಧ್ಯಮಗಳನ್ನು ಬಂಡವಾಳ ಶಾಹಿಯು ಉಪಯೋಗಿಸಿಕೊಳ್ಳುತ್ತಿರುವುದು ಗೌಣವೇ

ಹೊರತು ಅದೇ ಪ್ರಧಾನ ನೆಲೆಯಲ್ಲ. ನಾವು ಮಾಧ್ಯಮಗಳನ್ನು ಕೇವಲ ಆರ್ಥಿಕ ಶೋಷಣೆಗಳ ಸಲಕರಣೆಗಳೆಂದು ತಿಳಿದುಕೊಂಡರೆ ಆಧುನಿಕ ಸಮಾಜಗಳಲ್ಲಿ ಈ ಮನೋ ರೂಪಣ ಉದ್ಯಮವು ಮಾಡುತ್ತಿರುವ ನಿರ್ದಿಷ್ಟ ಕೆಲಸವನ್ನು ಗಮನಿಸಿದಂತೆ ಆಗುವುದೇ ಇಲ್ಲ. ಈ ಕೆಲಸ ಇಡಿ ಜಗತ್ತಿನಲ್ಲಿ ಒಂದೇ ಬಗೆಯದು. ಈ ಉದ್ಯಮವನ್ನು ಸರ್ಕಾರ ನಡೆಸಿದರೂ ಅಷ್ಟೇ, ಸಾರ್ವಜನಿಕರು ನಡೆಸಿದರೂ ಅಷ್ಟೇ. ಖಾಸಗಿ ಸಂಸ್ಥೆಗಳು ನಡೆಸಿದರೂ ಅಷ್ಟೇ. ಬಂಡವಾಳಶಾಹಿ ಆರ್ಥಿಕತೆಯಾದರೂ ಸರಿ, ಸಮಾಜವಾದಿ ಆರ್ಥಿಕತೆಯಾದರೂ ಸರಿ. ಲಾಭದ ಉದ್ದೇಶವಿದ್ದರೂ ಒಂದೇ, ಇಲ್ಲದಿದ್ದರೂ ಒಂದೆ. ಈ ಉದ್ಯಮದ ಮುಖ್ಯ ಗುರಿಯು ತನ್ನ ಉತ್ಪಾದನೆಗಳನ್ನು ಮಾರಾಟ ಮಾಡುವುದಲ್ಲ. ಸದ್ಯದಲ್ಲಿ ಜಾರಿಯಲ್ಲಿರುವ ವ್ಯವಸ್ಥೆಯನ್ನು ಮಾರುವುದು ಅದರ ಗುರಿ. ಮನುಷ್ಯನು ಮನುಷ್ಯನ ಮೇಲೆ ದಬ್ಬಾಳಿಕೆ ನಡೆಸುವ ಯಾವ ವಿಧಾನವನ್ನು, ತನ್ನನ್ನು ನಿಯಂತ್ರಿಸುತ್ತಿರುವ ವ್ಯವಸ್ಥೆ ಅನುಸರಿಸುತ್ತಿದೆಯೋ ಅದನ್ನು ಶಾಶ್ವತಗೊಳಿಸುವುದಷ್ಟೇ ಈ ಉದ್ಯಮದ ಗುರಿ. ಸಮಾಜದ ಹಿತ ಜನರ ಕೈಯಲ್ಲಿದ್ದರೂ ಅಷ್ಟೇ. ಅವರು ಯಾವ ದಾರಿಗಳಲ್ಲಿ ಅಧಿಕಾರ ಚಲಾಯಿಸುತ್ತಿದ್ದರೂ ಅಷ್ಟೇ. ಮಾಧ್ಯಮ ಕೈಗಾರಿಕೆಯು ನಮ್ಮ ಪ್ರಜ್ಞೆಯನ್ನು ಶೋಷಣೆ ಮಾಡುವ ಉದ್ದೇಶದಿಂದಲೇ ಅದನ್ನು ವಿಸ್ತರಿಸುತ್ತದೆ ಹಾಗೂ ಅದಕ್ಕೆ ತರಬೇತಿ ಕೊಡುತ್ತದೆ.

'ವಸ್ತುರಹಿತ ಶೋಷಣೆ' (Immaterial Exploitation) ಎನ್ನುವುದು ಅಷ್ಟೊಂದು ಪರಿಚಿತವಾದ ಪರಿಕಲ್ಪನೆಯಲ್ಲ. ಆದ್ದರಿಂದ ಅದರ ಬಗ್ಗೆ ಸ್ವಲ್ಪ ವಿವರಣೆ ಕೊಡುವುದು ಅಗತ್ಯವಾಗುತ್ತದೆ. ಅಭಿಜಾತ ಮಾರ್ಕ್ಸ್‌ವಾದವು, ಕೈಗಾರಿಕಾ ಕ್ರಾಂತಿಯಾದಾಗಿನಿಂದ ಇಂದಿನವರೆಗೆ ದುಡಿಯುವ ವರ್ಗದವರನ್ನು ಭೌತಿಕವಾಗಿ ಶೋಷಣೆ ಮಾಡುತ್ತ ಬಂದಿರುವ ಬಗೆಯನ್ನು ಬಹಳ ಸ್ಪಷ್ಟವಾಗಿ ವಿವರಿಸಿದೆ. ತನ್ನ ಅತ್ಯಂತ ಒರಟಾದ ರೂಪದಲ್ಲಿ ಅದು ಬಂಡವಾಳದ ಪ್ರಾಥಮಿಕ ನೆಲೆಯ ಒಗ್ಗೂಡುವಿಕೆಯು ನಡೆಯುವ ಕಾಲಾವಧಿಯ ಗುಣಲಕ್ಷಣ. ಈ ಮಾತು ಸಮಾಜವಾದಿ ರಾಷ್ಟ್ರಗಳ ವಿಚಾರದಲ್ಲಿಯೂ ನಿಜ. ಸ್ಟಾಲಿನ್ ಕಾಲದ ರಷ್ಯ ಮತ್ತು ಕೆಂಪು ಚೀನಾದ ಬೆಳವಣಿಗೆಯ ಮೊದಲ ಹಂತಗಳನ್ನು ಈ ಮಾತಿಗೆ ಸಾಕ್ಷಿಯಾಗಿ ಕೊಡಬಹುದು. ಆದರೆ ಕೈಗಾರಿಕೀಕರಣದ ಬುನಾದಿಯು ರೂಪಿತವಾಗುವುದೇ ತಡ ಭೌತಿಕ ಶೋಷಣೆಯಿಂದಲೇ ವ್ಯವಸ್ಥೆಯನ್ನು ಮುಂದುವರೆಸಿಕೊಂಡು ಹೋಗಲು ಸಾಧ್ಯವಿಲ್ಲವೆಂಬ ಸಂಗತಿಯು ಸ್ಪಷ್ಟವಾಗುತ್ತದೆ. ಮನುಷ್ಯನಿಗೆ ಅತ್ಯಂತ ಅಗತ್ಯವಾದ ವಸ್ತುಗಳನ್ನು ಮೀರಿ ಮತ್ತಷ್ಟು ಭೋಗ ವಸ್ತುಗಳು ಉತ್ಪಾದನೆಯಾಗುವುದೇ ತಡ, ಮನುಷ್ಯರ ಮನಸ್ಸಿನಲೆಲ್ಲ ಹೊಸ ಕನಸುಗಳು ಮೂಡತೊಡಗುತ್ತವೆ. ಒಂದೆ ಮಾಡಲಾಗಿದ್ದ ಮಾನವ ಹಕ್ಕುಗಳ ಘೋಷಣೆಯು, ಪ್ರತಿಷ್ಠಿತ ಶಕ್ತಿಗಳ ವಾಗ್ವಿಲಾಸಗಳಲ್ಲಿ ತಮ್ಮ ಅರ್ಥವನ್ನು ಕಳೆದುಕೊಂಡು ನೀರು ನೀರಾಗಿರಬಹುದು ದಶಕಗಳ ಕಷ್ಟ, ಬರಗಾಲ, ಬಡತನ, ಬಲವಂತದ ದುಡಿತ ಮತ್ತು

ರಾಜಕೀಯ ಗೂಂಡಾಗಿರಿಗಳು, ಆ ಮಾತುಗಳನ್ನು ಕ್ಷೀಣವಾಗಿಸಿರಬಹುದು ಆದರೂ ಆ ಬಿಸಿ ಕನಸುಗಳು, ಹುಚ್ಚು ಹಂಬಲಗಳು ಮತ್ತೆ ತಲೆಎತ್ತುತ್ತವೆ. ಮಾನವನ ಕನಸುಗಳ ಲಕ್ಷಣವೇ ಹಾಗೆ. ಒಮ್ಮೆ ಅವುಗಳನ್ನು ಪ್ರಜ್ಞೆಯ ನೆಲೆಗೆ ತಂದುಕೊಂಡ ಮೇಲೆ ಹಿಂತೆಗೆದು ಕೊಳ್ಳುವುದು ಸಾಧ್ಯವೇ ಇಲ್ಲ. ಮತ್ತೆ ಮತ್ತೆ ಜನ ಸಮುದಾಯವು ಆ ಆದರ್ಶಗಳನ್ನು ಅವುಗಳ ಮುಖ ಬೆಲೆಗೆ ಕೊಂಡುಕೊಳ್ಳುತ್ತದೆ. ಅವುಗಳನ್ನು ಸಾಕ್ಷಾತ್ಕಾರಗೊಳಿಸಲೆಂದು ಹೋರಾಟ ನಡೆಸಲು, ಜೀವಬಿಡಲು ತಯಾರಾಗುತ್ತದೆ. ೧೮ನೇ ಶತಮಾನದ ಫ್ರೆಂಚ್ ಕ್ರಾಂತಿಯಲ್ಲಿ ಇಂಥ ಮೌಲ್ಯಗಳನ್ನು ಘೋಷಿಸಿದ ಮೇಲೆ, ಬಹುಸಂಖ್ಯಾತರ ಮೇಲೆ ಅಲ್ಪಸಂಖ್ಯಾತರು ನಡೆಸಿದ ಎಲ್ಲ ಆಡಳಿತಗಳೂ, ಎಷ್ಟೇ ವ್ಯವಸ್ಥಿತವಾಗಿದ್ದರೂ ಕ್ರಾಂತಿಯ ಭಯವನ್ನು ಎದುರಿಸಲೇಬೇಕಾಗಿದೆ. ನಿಜವಾದ ಪ್ರಜಾಪ್ರಭುತ್ವವು ಪ್ರಪಂಚದ ಯಾವ ಭಾಗದಲ್ಲಿಯೂ ಇಂದು ಅಸ್ತಿತ್ವದಲ್ಲಿಲ್ಲ. ಬದಲಾಗಿ ಅದರ ಔಪಚಾರಿಕ ಅಣಕಗಳಾದ ಪಾರ್ಲಿಮೆಂಟರಿ ಪ್ರಜಾಪ್ರಭುತ್ವವು ಹಲವು ದೇಶಗಳಲ್ಲಿ ಇದೆ. ಆದರೆ ನಿಜವಾದ ಪ್ರಜಾಪ್ರಭುತ್ವದ ಭೂತವು ಎಲ್ಲ ಆಡಳಿತ ವ್ಯವಸ್ಥೆಗಳನ್ನೂ ಕಾಡಿಸುತ್ತಿರುತ್ತದೆ.ಆದ್ದರಿಂದಲೇ ಈಗ ಇರುವ ಎಲ್ಲ ಅಧಿಕಾರರಚನೆಗಳು ತಮ್ಮ ಪ್ರಜೆಗಳ ಸಮ್ಮತಿಯನ್ನು ಪಡೆಯಲೇ ಬೇಕು. ಅದು ಎಷ್ಟು ನಿಷ್ಕ್ರಿಯ ಸಮ್ಮತಿಯಾದರೂ ಸರಿಯೆ. ಅಷ್ಟೇಕೆ, ತಮ್ಮ ಅಸ್ತಿತ್ವಕ್ಕಾಗಿ ಆಯುಧಗಳ ಶಕ್ತಿಯನ್ನೇ ಅವಲಂಬಿಸಿರುವ ಆಡಳಿತಗಳೂ ತಮ್ಮನ್ನು ಇಡೀ ಜಗತ್ತಿನ ಕಣ್ಣುಗಳಲ್ಲಿ ಸಮರ್ಥಿಸಿಕೊಳ್ಳುವುದು ಅಗತ್ಯವೆಂದೇ ತಿಳಿಯುತ್ತವೆ. ಬಂಡವಾಳದ ಮೇಲಿನ ನಿಯಂತ್ರಣ, ಉತ್ಪಾದನಾ ಸಾಧನೆಗಳ ಮೇಲಿನ ಹಿಡಿತ ಮತ್ತು ಸೈನ್ಯಶಕ್ತಿ ಇವಿಷ್ಟೇ ಈಗ ಸಾಲದು. ಆಧುನಿಕ ಸಮಾಜಗಳನ್ನು ನಡೆಸಲೆಂದು ತಮ್ಮನ್ನು ತಾವೇ ನೇಮಿಸಿಕೊಂಡಿರುವ ಈ ಮಹನೀಯರಿಗೆ ಮನುಷ್ಯರ ಮನಸ್ಸುಗಳನ್ನು ನಿಯಂತ್ರಿಸದಿದ್ದರೆ ನಿದ್ದೆ ಬರುವುದಿಲ್ಲ. ನಮ್ಮಲ್ಲಿ ಪ್ರತಿಯೊಬ್ಬನೂ ಯಾವುದನ್ನು ಒಪ್ಪಿಕೊಳ್ಳುತ್ತಾನೆ ಅಥವಾ ತಿರಸ್ಕರಿಸುತ್ತಾನೆ, ನಾವು ಯಾವ ವಿಷಯದ ಬಗ್ಗೆ ಹೇಗೆ ಆಲೋಚಿಸಿ ಯಾವ ತೀರ್ಮಾನಕ್ಕೆ ಬರುತ್ತೇವೆ ಎನ್ನುವುದು ರಾಜಕೀಯ ವ್ಯಕ್ತಿಗಳಿಗೆ ಬಹಳ ಮುಖ್ಯವಾದ ವಿಷಯ. ಈ ಸಂಗತಿಯನ್ನು ನಮಗೇ ಬಿಟ್ಟುಕೊಡುವುದು ಅಪಾಯಕಾರಿಯೆಂದು ಅವರಿಗೆ ಚೆನ್ನಾಗಿ ಗೊತ್ತು. ಇಂದು ಭೌತಿಕವಾದ ಶೋಷಣೆಯು ಜೀವಂತವಾಗಿ ಉಳಿಯಬೇಕಾದರೆ ಮಾರುವೇಷ ಹಾಕಿಕೊಳ್ಳುವುದು ಅತ್ಯಗತ್ಯ. ಆದ್ದರಿಂದಲೇ ವಸ್ತುರಹಿತ ಶೋಷಣೆಯು ಅದರ ಅನಿವಾರ್ಯ ಸಂಗಾತಿಯಾಗಿ ಬಿಟ್ಟಿದೆ. ತಾವು ಶೋಷಣೆ ಮಾಡುತ್ತಿರುವ ಅನೇಕರ ಮನಸ್ಸುಗಳನ್ನು, ತಮ್ಮ ಇಷ್ಟಕ್ಕೆ ತಕ್ಕಹಾಗೆ ರೂಪಿಸುವ ಶಕ್ತಿಯನ್ನು ಸಂಪಾದಿಸುವವರೆಗೆ ಎಲ್ಲೋ ಕೆಲವರು ಸಂಪತ್ತು ಕೂಡಿಹಾಕುತ್ತಾ ಹೋಗುವುದು ಸಾಧ್ಯವಿಲ್ಲ. ಮನುಷ್ಯ ಶಕ್ತಿಯನ್ನು ತನ್ನದಾಗಿ ಮಾಡಿಕೊಳ್ಳುವುದೆಂದರೆ ಅವನ ಮೆದುಳಿನ ಮೇಲೆ ಒಡೆತನ ಸಂಪಾದಿಸುವುದು. ಆದ್ದರಿಂದ ಮಾಸ್ಕೋದಿಂದ ಲಾಸ್‌ಏಂಜೆಲ್ಸ್‌ವರೆಗೆ ಇಂದಿನ

ಸಂಪನ್ಭರಿತ ಸಮಾಜಗಳಲ್ಲಿ ನಿರ್ಮೂಲವಾಗುತ್ತಿರುವುದು ಶೋಷಣೆಯಲ್ಲ. ಶೋಷಣೆಯ ಬಗೆಗಿನ ನಮ್ಮ ತಿಳುವಳಿಕೆ.

ವರ್ತಮಾನ ಸ್ಥಿತಿಯನ್ನು ಉಳಿಸಿಕೊಂಡು ಹೋಗಲು ವ್ಯವಸ್ಥೆಯು ಬಹಳ ಪ್ರಯತ್ನ ಪಡಬೇಕು. ಏಕೆಂದರೆ ಈ ಪರಿಸ್ಥಿತಿಗೆ ಹಲವು ಆರೋಗ್ಯಕರ ಪರ್ಯಾಯಗಳಿವೆ. ಆದರೆ ಆ ಪರ್ಯಾಯಗಳೆಲ್ಲವೂ ಖಂಡಿತವಾಗಿ ಇಂದು ಅಧಿಕಾರದಲ್ಲಿರುವ ಶಕ್ತಿಗಳನ್ನು ತಲೆಕೆಳಗು ಮಾಡುತ್ತವೆ. ಆದ್ದರಿಂದಲೇ ಒಂದು ಇಡೀ ಉದ್ಯಮವೇ ಆ ಪರ್ಯಾಯಗಳನ್ನು ನಾಶ ಮಾಡುವ ಕೆಲಸದಲ್ಲಿ ತೊಡಗಿದೆ ಸಾಧ್ಯವಿರುವ ಭವಿಷ್ಯದ ದಾರಿಗಳನ್ನು ಮುಚ್ಚಿ ಬದುಕುವುದು ಮತ್ತು ದಬ್ಬಾಳಿಕೆಯ ಇಂದಿನ ವಿನ್ಯಾಸಕ್ಕೆ ಇನ್ನಷ್ಟು ಶಕ್ತಿ ಕೊಡುವುದು. ಈ ಗುರಿಯನ್ನು ತಲುಪಲು ಅನೇಕ ದಾರಿಗಳಿವೆ. ಒಂದು ಕಡೆ ನೂರಕ್ಕೆ ನೂರರಷ್ಟು ಸೆನ್ಸಾರಶಿಪ್, ಎಲ್ಲ ಸಂವಹನ ಮಾಧ್ಯಮಗಳ ಮೇಲಿನ ಸಂಪೂರ್ಣ ಸರ್ಕಾರಿ ಸ್ವಾಮ್ಯ ಮುಂತಾದ ಉಪಾಯಗಳನ್ನು ಅನುಸರಿಸಬಹುದು. ಇದೇ ಕೆಲಸವನ್ನು ಇನ್ನಷ್ಟು ಸೂಕ್ಷ್ಮವಾಗಿ ಮತ್ತು ಪ್ರತಿಭಟನೆಯಿಲ್ಲದಂತೆ ನಡೆಸಬೇಕೆಂದರೆ ಆರ್ಥಿಕ ಒತ್ತಡಗಳನ್ನು ತರುವುದರ ಮೂಲಕ, ಬಹುಮಾನ ಮತ್ತು ಶಿಕ್ಷೆಗಳನ್ನು ಜಾಣತನದಿಂದ ಹಂಚುವ ಮೂಲಕ ಕಾರ್ಯ ಸಾಧನೆ ಮಾಡಬಹುದು. ಹಿಂದಿನ ಶತಮಾನದಲ್ಲಿ ವಸ್ತುಗಳ ದಿವಾಳಿತನ ಕಂಡುಬಂದಿತು. ಆದರೆ ಈ ಶತಮಾನದಲ್ಲಿ ಆದರ್ಶಗಳು, ರಾಜಕೀಯ ಸಾಧ್ಯತೆಗಳು ದಿವಾಳಿಯಾಗಿ ಹೋಗಿವೆ. ಈ ಮಾತಿಗೆ ಕಣ್ಣಿಗೆ ಕಟ್ಟುವಂತಹ ಸಾಕ್ಷಿಗಳು ಬೇಕಾದರೆ ಜಗತ್ತಿನ ಅತ್ಯಂತ ಮುಂದುವರಿದ ರಾಷ್ಟ್ರಗಳಲ್ಲೂ ಎಷ್ಟೊಂದು ಕಡಿಮೆ ರಾಜಕೀಯ ಆಯ್ಕೆಗಳಿವೆ ಎನ್ನುವುದನ್ನು ಗಮನಿಸಬಹುದು. ಮೂರು ಕಾಸಿನ ಬೆಲೆಯೂ ಇಲ್ಲದ ಅನೇಕ ಚಿಲ್ಲರೆ ರಾಜಕಾರಣಿಗಳಿರುತ್ತಾರೆ. ಇವರೆಲ್ಲರಿಗೂ ಒಟ್ಟಾಗಿ ಆತ್ಮಹತ್ಯೆ ಮಾಡಿಕೊಳ್ಳಿರೆಂದರೆ ಅದನ್ನು ಮಾಡಲು ತಯಾರಿರುತ್ತಾರೆ. ಇವರನ್ನು ಆಳುತ್ತಿರುವವರು ದಿನದಿಂದ ದಿನಕ್ಕೆ ಕಡಿಮೆ ಸಂಖ್ಯೆಯಲ್ಲಿರುವ ರಾಜಕೀಯ ಚಕ್ರವರ್ತಿಗಳು. ಇಂಥ ಒಂದು ಸನ್ನಿವೇಶವನ್ನು ಬಹುಸಂಖ್ಯಾತ ಜನರು ಒಪ್ಪಿಕೊಳ್ಳುತ್ತಾರೆ ಮತ್ತು ಸ್ವಂತ ಇಚ್ಛೆಯಿಂದ ಸಹಿಸುತ್ತಾರೆ ಎನ್ನುವುದೇ ಈ ಮನೋರೂಪಣ ಕೈಗಾರಿಕೆಯ ಅತಿ ದೊಡ್ಡ ಸಾಧನೆ.

ಈ ಉದ್ಯಮವು ಇಂದಿನ ಸಮಾಜದ ಮೇಲೆ ಬೀರಿರುವ ಪರಿಣಾಮಗಳನ್ನು ಹೇಳಿದರೆ ಅದರ ಸಾರಸರ್ವಸ್ವವನ್ನು ವರ್ಣಿಸಿದಂತೆ ಆಗುವುದಿಲ್ಲ. ಬಟ್ಟೆ ಕೈಗಾರಿಕೆಯ ಬೆಳವಣಿಗೆಯು ಭಾರತದ ಕಲಾವಿದ–ನೇಕಾರರ ನಾಶಕ್ಕೆ ಕಾರಣವಾಯಿತು. ಹಾಗೆಯೇ ಅದು ಇಂಗ್ಲೆಂಡಿನಲ್ಲಿ ಚಿಕ್ಕಮಕ್ಕಳ ಜೀವಂತ ದುಡಿಮೆಗೆ ಕಾರಣವಾಗಿದೆ. ಆದರೆ ಇವು ಯಾಂತ್ರೀಕೃತ ಮಗ್ಗದ ಸಂಶೋಧನೆಯಿಂದಲೇ ಹುಟ್ಟುವ ಅನಿವಾರ್ಯ ಪರಿಣಾಮಗಳಲ್ಲ. ಅದೇ ರೀತಿ, ಮನುಷ್ಯನ ಮನಸ್ಸನ್ನು ಕೈಗಾರಿಕೀಕರಣಗೊಳಿಸುವುದರಿಂದ, ಅಮೂರ್ತ ಶೋಷಣೆಯು ನಡೆದೇ ತೀರುವುದೆಂದು ಹೇಳಲು ಕಾರಣಗಳಿಲ್ಲ. ಹಾಗೆ ನೋಡಿದರೆ ಇಂದಲ್ಲ ನಾಳೆ ಈ ಕೈಗಾರಿಕೆಯು ತನ್ನದೇ ತರ್ಕದಿಂದ ತನ್ನ ಇಂದಿನ ಪರಿಣಾಮಗಳನ್ನು

ಇಲ್ಲ ಮಾಡುತ್ತದೆ ಎಂದು ಹೇಳಲೂಬಹುದು. ಏಕೆಂದರೆ ಇದು ಈ ಕೈಗಾರಿಕೆಯ ಅತ್ಯಂತ ಮುಖ್ಯವಾದ ಪರಸ್ಪರ ವಿರೋಧ. ನಿಮಗೆ ಸಮ್ಮತಿಯನ್ನು ಪಡೆಯಬೇಕೆಂಬ ಇಷ್ಟವಿದ್ದರೆ ಆಯ್ಕೆಯ ಅವಕಾಶ ಕೊಡಲೇಬೇಕಾಗುತ್ತದೆ. ಆ ಆಯ್ಕೆ ನಾಮಕಾವಾಸ್ತೆ ಇರಬಹುದು; ಅತ್ಯಲ್ಪ ಇರಬಹುದು. ಮನುಷ್ಯನ ಮನಸ್ಸನ್ನು ಬಳಸಬೇಕಾದರೆ ಅದನ್ನು ಬೆಳೆಸಬೇಕು. ಸಂಕುಚಿತವೇ ಇರಲಿ, ವಿಕೃತವೇ ಇರಲಿ, ಬೆಳೆಸುವುದಂತೂ ಅನಿವಾರ್ಯ. ನಮ್ಮಲ್ಲಿ ಯಾರೂ ಈ ಕೈಗಾರಿಕೆಯ ಪ್ರಭಾವವನ್ನು ತಪ್ಪಿಸಿಕೊಳ್ಳಲಾರೆವೆಂಬುದು ಅದರ ಅಪಾರ ಶಕ್ತಿಗೆ ಸಾಕ್ಷಿಯಾಗಿರಬಹುದು. ನಮಗೆ ಇಷ್ಟವಿರಲಿ, ಬಿಡಲಿ ವ್ಯವಸ್ಥೆಯ ಒಟ್ಟಂದದಲ್ಲಿ ನಾವು ಭಾಗವಹಿಸುವಂತೆ ಮಾಡಲಾಗುತ್ತದೆ. ಆದರೆ ಒಂದಲ್ಲ ಒಂದು ದಿನ ಈ ಭಾಗವಹಿಸುವಿಕೆಯು ಕ್ರಿಯಾರಾಹಿತ್ಯದಿಂದ ಕ್ರಿಯೆಯ ಕಡೆಗೆ ತಿರುಗಬಹುದು. ತಾನು ಕಾಪಾಡಬೇಕಾಗಿರುವ ವ್ಯವಸ್ಥೆಗೆ ಭಂಗ ಬರುವಂತೆ ಅದು ವರ್ತಿಸಬಹುದು. ಈ ಕೈಗಾರಿಕೆಗೆ ತನ್ನದೇ ಆದ ಒಂದು ಚಲನಶೀಲತೆಯಿದೆ. ಆ ಚಲನೆಯ ಮೇಲೆ ಅದಕ್ಕೆ ನಿಯಂತ್ರಣವಿಲ್ಲ. ಹಾಗಾಗಿ ಈ ರೀತಿಯ ಪ್ರಯತ್ನದಲ್ಲಿ, ತಾನು ಏನನ್ನು ಮಾಡ ಹೊರಟಿದೆಯೋ ಅದನ್ನೇ ಅಲ್ಲಗಳೆಯುವ ಸಾಧ್ಯತೆಯಿದೆ. ಯಥಾಸ್ಥಿತಿಯನ್ನು ಶಾಶ್ವತ ಗೊಳಿಸುವ ಪ್ರಯತ್ನದಲ್ಲಿಯೇ, ಅದನ್ನು ಮುರಿಯುವ ಒಳಸುಳಿಗಳು ಕೂಡ ಕಾರ್ಯ ನಿರತವಾಗಿರುತ್ತವೆ. ಇಂತಹ ಗತಿಶೀಲ ಪ್ರಗತಿಯ ಒಂದು ಸಹಜ ಪರಿಣಾಮವೆಂದರೆ, ಈ ಕೈಗಾರಿಕೆಯು ನಿರ್ದಿಷ್ಟ ಕ್ರಿಯೆ ಒಂದನ್ನು ಎಚ್ಚರಿಕೆಯಿಂದ ನಿಯಂತ್ರಿಸಬಹುದಾದರೂ, ಒಟ್ಟು ಪ್ರಕ್ರಿಯೆಯು ಎಂದೆಂದಿಗೂ ಅದರ ಸಂಪೂರ್ಣ ಹಿಡಿತಕ್ಕೆ ಸಿಗುವುದಿಲ್ಲ. ಯಾವಾಗಲೂ ಒಂದಲ್ಲ ಒಂದು ಬಿರುಕು ಇರುತ್ತದೆ. ಅದರ ಕವಚ ಭದ್ರವಾಗಿರುವುದಿಲ್ಲ. ಆದ್ದರಿಂದಲೇ ಯಾವುದೇ ಆಡಳಿತವು ತನ್ನದೇ ಮಾಧ್ಯಮಗಳನ್ನು ಕೂಡ ಸಂಪೂರ್ಣವಾಗಿ ನಂಬುವುದಿಲ್ಲ.[೨] ಜನತೆಯ ಬೌದ್ಧಿಕ, ನೈತಿಕ ಹಾಗೂ ರಾಜಕೀಯ ಮನೋವಲಯಗಳನ್ನು ದುರುಪಯೋಗ ಪಡಿಸಿಕೊಳ್ಳಬೇಕಾದರೆ, ಮೊದಲು ಅವುಗಳ ಬೆಳವಣಿಗೆಗೆ ಅವಕಾಶ ಕೊಡಬೇಕೆಂದು ಈಗಾಗಲೇ ಹೇಳಲಾಗಿದೆ. ಇದು ಇಂದಿನ ಮಾಧ್ಯಮಗಳು ಎದುರಿಸುತ್ತಿರುವ ಮುಖ್ಯ ಸಮಸ್ಯೆ. ನಾವು ನಮ್ಮ ಗಮನವನ್ನು ಮಾಧ್ಯಮಕೈಗಾರಿಕೆಯ ಗ್ರಾಹಕರಾದ

---

೨. ಹೀಗೆ ಭದ್ರವಾಗಿ ಬೇರೂರಿರುವ ರಾಜಕೀಯ ಶಕ್ತಿಗಳು ಅನುಭವಿಸುವ ಅಭದ್ರತೆಯ ಸಾಕ್ಷಿಯಾಗಿ ಅಮೇರಿಕಾದ ಸೆನೇಟರ್ ಆಗಿದ್ದ ಜೋಸೆಫ್ ಮೆಕಾರ್ಥಿ ಅವರನ್ನು ಹೆಸರಿಸಬಹುದು. ಅವರು ಹಾಲಿವುಡ್‌ನ ನಿರ್ಮಾಪಕರು, ನಟರು ಹಾಗೂ ಲೇಖಕರ ವಿರುದ್ಧ ಒಂದು ಹುಚ್ಚು ಧರ್ಮಯುದ್ಧವನ್ನು ಹೂಡಿದರು. ಹಾಗೆ ನೋಡಿದರೆ ಅವರ ಪೈಕಿ ಬಹುಪಾಲು ಜನ ಕೈಗಾರಿಕೆಯ ಒತ್ತಾಯಗಳಿಗೆ ತಮ್ಮ ಜೀವಮಾನವೆಲ್ಲ ಅತ್ಯಂತ ವಿನಯದಿಂದ ತಲೆಬಾಗಿದ್ದರು. ತಮ್ಮ ಪ್ರತಿಭೆಯ ಆ ಪ್ರಮಾಣದ ಗುಲಾಮಗಿರಿ ಕೂಡ ಅವರನ್ನು ಸಂಶಯದ ಕಣ್ಣುಗಳಿಂದ ಮುಕ್ತವಾಗಿಸಲಿಲ್ಲ. ಮೆಕಾರ್ಥಿಯವರ ಹಾಗೆ ಸ್ಟಾಲಿನ್ ಕೂಡ ತನ್ನ ಗುಲಾಮರೇ ಆಗಿದ್ದ ಬೌದ್ಧಿಕ ವ್ಯವಸ್ಥೆಯ ಯಾವ ಸದಸ್ಯನನ್ನೂ ಸಂಪೂರ್ಣವಾಗಿ ನಂಬಿರಲಿಲ್ಲ.

ಜನಸಾಮಾನ್ಯರಿಂದ ಅದರ ಉತ್ಪಾದಕರಾದ ಬುದ್ಧಿಜೀವಿಗಳ ಕಡೆಗೆ ತಿರುಗಿಸಿದಾಗ
ಸಮಸ್ಯೆಯು ಇನ್ನಷ್ಟು ತೀವ್ರವಾಗುತ್ತದೆ ಅಧಿಕಾರದಲ್ಲಿ ಇರುವವರಿಗೆ ಮಾಧ್ಯಮವು
ಯಾರ ಹಿಡಿತದಲ್ಲಿ ಇರಬೇಕೆನ್ನುವುದರ ಬಗ್ಗೆ ಯಾವ ಸಂಶಯವೂ ಇಲ್ಲ. ಖಂಡಿತ
ವಾಗಿಯೂ ಬುದ್ಧಿಜೀವಿಗಳು ಮಾಧ್ಯಮಕೈಗಾರಿಕೆಯನ್ನು ನಿಯಂತ್ರಿಸುತ್ತಿರುವುದಿಲ್ಲ.
ಬದಲಾಗಿ ವ್ಯವಸ್ಥೆಯೇ ಅವರನ್ನು ತನ್ನ ಭದ್ರಮುಷ್ಟಿಯಲ್ಲಿ ಇಟ್ಟುಕೊಂಡಿರುತ್ತದೆ. ನಿಜ
ವಾಗಿಯೂ ಸೃಜನಶೀಲರಾದ ಜನರಿಗೆ ಉತ್ಪಾದನೆಯ ಅವಕಾಶ ಸಿಗುವುದೆಂಬ ಮಾತು
ಸಂಪೂರ್ಣ ಭ್ರಮೆ. ಏಕೆಂದರೆ ಇಡೀ ವ್ಯವಸ್ಥೆಯು ಅಂತಹ ಸಾಧ್ಯತೆಯನ್ನು ತಪ್ಪಿಸ
ಲೆಂದೇ ರೂಪಿತವಾಗಿದೆ. ಏನೇ ಆದರೂ ಇಂದಿನ ಸನ್ನಿವೇಶದಲ್ಲಿ ಸೃಜನಶೀಲ ಬುದ್ಧಿ
ಜೀವಿಗಳು ಮತ್ತು ವ್ಯವಸ್ಥೆಯ ನಡುವಿನ ಸಂಬಂಧವು ಸಂದಿಗ್ಧತೆಯಿಂದ ಕೂಡಿವೆ.
ಏಕೆಂದರೆ ಏನನ್ನಾದರೂ ಸೃಷ್ಟಿಸಬಲ್ಲ ಕೆಲವರಾದರೂ ಅಲ್ಪಸಂಖ್ಯಾತರ ನೆರವು ಇಲ್ಲದೆ ಈ
ಕೈಗಾರಿಕೆಯನ್ನು ನಡೆಸುವುದೇ ಸಾಧ್ಯವಿಲ್ಲ. ಅವರನ್ನು ಕೈಬಿಟ್ಟರೆ ಯಾರೂ ಮಾಧ್ಯಮ
ಗಳನ್ನು ಮೂಸುವುದಿಲ್ಲ. ಹೌದು, ಇನ್ನೊಂದು ದಾರಿಯಿದೆ. ಕಾಲಕಾಲದಿಂದ ಸಂಗ್ರಹ
ವಾಗಿರುವ ಸ್ವೋಪಜ್ಞ ಕೃತಿಗಳನ್ನು ತೆಗೆದುಕೊಂಡು ಅವುಗಳನ್ನು ತಮ್ಮ ಇಷ್ಟಕ್ಕೆ ತಕ್ಕ
ಹಾಗೆ ಬದಲಾಯಿಸಿ, ನೀರು ಬೆರಸಿ ಮಾಧ್ಯಮಗಳಲ್ಲಿ ಉಪಯೋಗಿಸಬಹುದು. ಹಾಗೆ ನೋಡಿ
ದರೆ ಹೊಸದು ಎಂದು ಕರೆಯಲಾಗುವುದರ ಬಹುಭಾಗವು ಹಳೆಯದರ ಒಡಲಿನಿಂದಲೇ
ಮೂಡಿಬಂದಿರುತ್ತದೆ. ಉದಾಹರಣೆಗೆ, ನಾವು ಇಂದು ಬಹಳ ಜನಪ್ರಿಯವಾಗಿರುವ
ಯಾವುದಾದರೊಂದು ಹಾಡಿನ ಸ್ವರಮೇಳ ಹಾಗೂ ನಾದ ರಚನೆಯ ವಿಶ್ಲೇಷಣೆ ಮಾಡಿದರೆ
ಅವು ಶತಮಾನಗಳ ಹಿಂದೆ ಪ್ರತಿಭಾವಂತರಾದ ಸಂಗೀತರಚನಾಕಾರರು ಸೃಷ್ಟಿಸಿರುವ ಕೃತಿ
ಗಳಿಂದ ಮೂಡಿ ಬಂದಿವೆಯೆಂದು ನಮಗೆ ಗೊತ್ತಾಗುತ್ತವೆ. ಮೂರನೆಯ ದರ್ಜೆಯ ಚಲನ
ಚಿತ್ರಗಳಲ್ಲಿ ಬಳಸಲಾಗುವ ನಾಟಕೀಯ ಕ್ಲೀಷೆಗಳ ವಿಷಯವೂ ಹೀಗೆಯೇ. ಅವುಗಳು
ಗತಕಾಲದ ಕಾದಂಬರಿಗಳು ಹಾಗೂ ನಾಟಕಗಳ ವಿನ್ಯಾಸಗಳನ್ನು ಆರಿಸಿಕೊಂಡು ಗುರುತಿಸ
ಲಾರದಷ್ಟು ನೀರು ಬೆರೆಸಿ ಪ್ರಚಾರಕ್ಕೆ ತರುತ್ತವೆ. ಆದರೆ ಕಾಲ ಕಳೆದಂತೆ ಹೀಗೆ ಆನುವಂಶಿಕ
ವಾಗಿ ಬಂದ ಕೃತಿಗಳ ಮೇಲಿನ ಅವಲಂಬನೆಯು ಕೈಗಾರಿಕೆಯ ಪೋಷಣೆಗೆ ಸಾಕಾಗುವುದಿಲ್ಲ.
ಹಳೆಯ ಸರಕು ಎಷ್ಟೇ ವಿಪುಲವಾಗಿದ್ದರೂ ಅದಕ್ಕೆ ಆಗೀಗ ಹೊಸದರ ರಕ್ತದಾನ ಮಾಡ
ಬೇಕಾಗುತ್ತದೆ. ಆದ್ದರಿಂದಲೇ ಮಾಧ್ಯಮವು ಇಂದಲ್ಲ ನಾಳೆ ತನಗೆ ಅಪಾಯವನ್ನು
ಉಂಟುಮಾಡಬಹುದಾದ, ಆದರೆ ಹೊಸತನ್ನು ಸೃಷ್ಟಿಸಬಲ್ಲ ಪ್ರತಿಭಾವಂತರನ್ನು
ಅವಲಂಬಿಸುವುದು ಅನಿವಾರ್ಯವಾಗುತ್ತದೆ ಸೃಜನಶೀಲತೆಯ ಲಕ್ಷಣವೇ ಹಾಗೆ. ಅದರ
ಫಲಿತಾಂಶದ ಬಗ್ಗೆ ಭವಿಷ್ಯ ಹೇಳುವುದು ಯಾರಿಗೂ ಸಾಧ್ಯವಿಲ್ಲ. ಹೀಗೆ, ತಾನು ಶಾಶ್ವತ
ವಾಗಿ ಉಳಿಯಬೇಕೆಂದು ಬಯಸುವ ಯಾವುದೇ ಶಕ್ತಿ ರಚನೆಯು ಬುದ್ಧಿಜೀವಿಗಳನ್ನು
ಭಯಸಂಶಯಗಳಿಂದಲೇ ನೋಡುತ್ತದೆ. ಅವರನ್ನು 'ನಿರ್ವಹಿಸುವುದು', ಅವರ ಕ್ರಾಂತಿ
ಕಾರಕ ಪ್ರಭಾವಗಳು ತುಚ್ಛವಾಗುವಂತೆ ಮಾಡುವುದು ಬಹಳ ಜಾಣತನವನ್ನು ಬಯಸುವ

ಕೆಲಸ. ಈ ಗುರಿಯನ್ನು ತಲುಪಲೆಂದು ತೀರಾ ಒರಟು ಮಾರ್ಗಗಳಿಂದ ಹಿಡಿದು ಅತಿ ಸೂಕ್ಷ್ಮ ತಂತ್ರಗಳವರೆಗೆ ಹಲವು ಹುನ್ನಾರಗಳನ್ನು ಹೂಡಲಾಗಿದೆ. ಮೊದಲನೆಯದಾಗಿ, ಅವರಲ್ಲಿ ಜೀವಭಯ ಹುಟ್ಟಿಸುವುದು, ಅವರನ್ನು ಕಪ್ಪುಪಟ್ಟಿಗೆ ಸೇರಿಸುವುದು, ಅವರ ಮೇಲೆ ಆರ್ಥಿಕ-ನೈತಿಕ ಒತ್ತಡಗಳನ್ನು ತರುವುದು ಮುಂತಾದ ಉಪಾಯಗಳನ್ನು ಹೆಸರಿಸಬಹುದು. ಎರಡನೆಯದಾಗಿ ಅವರಿಗೆ ಅತಿ ಹೆಚ್ಚು ಅವಕಾಶಗಳನ್ನು ಕೊಡುವುದು. ಅವರನ್ನು ಆಕರ್ಷಕ ನಕ್ಷತ್ರಗಳಾಗಿ ಪರಿವರ್ತಿಸುವುದು, ಅವರನ್ನೇ ಅಧಿಕಾರಶಾಹಿಯ ಭಾಗವಾಗಿ ಮಾಡಿಕೊಂಡು ಬಿಡುವುದು ಮುಂತಾದ ಉಪಾಯಗಳಿವೆ. ಇವು ತಂತ್ರಗಳ ಒಟ್ಟು ಮೊತ್ತದಲ್ಲಿ ಕೆಲವು ಮಾತ್ರ. ಈ ರೀತಿಯ ತಂತ್ರಗಳನ್ನು ವಿಶ್ಲೇಷಣೆ ಮಾಡುವ ಒಂದು ಕೈಪಿಡಿಯನ್ನೇ ರಚಿಸಬಹುದು. ಅವೆಲ್ಲದರ ಹಿಂದೆ ಒಂದು ಸಮಾನವಾದ ಅಂಶ ವಿದೆ. ಅವು ಎಂದೆಂದಿಗೂ ಪರಿಹರಿಸಲಾಗದ ಸಮಸ್ಯೆಗಳಿಗೆ, ತಾತ್ಕಾಲಿಕವಾದ ತಂತ್ರ ಗಾರಿಕೆಯ ಉತ್ತರಗಳನ್ನು ಕೊಡುತ್ತವೆ. ಈ ರೀತಿಯ ವ್ಯವಸ್ಥೆಯು ಮಾಧ್ಯಮಗಳಲ್ಲಿ ಕೆಲಸ ಮಾಡುವ ಉತ್ಪಾದಕರನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡ ಹೊರತು, ಗ್ರಾಹಕ ರನ್ನು ಶೋಷಣೆ ಮಾಡಲು ಸಮರ್ಥವಾಗುವುದಿಲ್ಲ. ಅದರ ಸಂಭವನೀಯ ಶತ್ರುಗಳು ಗ್ರಾಹಕರಿಗಿಂತ ಹೆಚ್ಚಾಗಿ ಮಾಧ್ಯಮದ ಕಾರ್ಯಕ್ರಮಗಳನ್ನು ತಯಾರಿಸುವವರ ನಡುವೆಯೇ ಇರುತ್ತಾರೆ. ಮನುಷ್ಯನ ಪ್ರಜ್ಞೆಯನ್ನು ವಿಸ್ತರಿಸುವ ಮಾಧ್ಯಮಗಳು ತಮ್ಮೊಳಗಿನ ಪರಸ್ಪರ ವಿರೋಧಗಳನ್ನು ಬಯಲಿಗೆ ತರುತ್ತಿರುತ್ತವೆ.

ಮಾಧ್ಯಮ ಕೈಗಾರಿಕೆಯ ಕೇಂದ್ರದಲ್ಲಿರುವ ಈ ಸಂದಿಗ್ಧತೆಯನ್ನು ಗ್ರಹಿಸದಿರುವ ವಿಮರ್ಶೆಯು ಸೋಮಾರಿಯಾದುದು, ಇಲ್ಲವೇ ಅಪಾಯಕಾರಿಯಾದುದು. ಮಾಧ್ಯಮಗಳ ವಿಮರ್ಶೆ ಮಾಡುವವರು ಸ್ವತಃ ತಾವು ಎಲ್ಲಿದ್ದೇವೆ ಎನ್ನುವುದರ ಬಗ್ಗೆ ಆಲೋಚನೆ ಮಾಡುವುದಿಲ್ಲವೆಂಬುದು ಅವರ ಪರಿಮಿತಿಗೆ ಸಾಕ್ಷಿಯಾಗಿದೆ. ಏಕೆಂದರೆ ಅವರ ಬರವಣಿಗೆ ಕೂಡ ಅವರು ಟೀಕಿಸುತ್ತಿರುವ ಮಾಧ್ಯಮದ ಭಾಗವಾಗಿಯೇ ಪ್ರಕಟವಾಗುತ್ತಿರುತ್ತದೆ. ಅಂತಿಮ ಸತ್ಯವೆಂದರೆ ಇಂದು ಯಾರೊಬ್ಬರೂ ಕೂಡ ಮಧ್ಯಮ ಕೈಗಾರಿಕೆಯನ್ನು ಉಪಯೋಗಿಸಿಕೊಳ್ಳದೆ, ಅಲ್ಲಲ್ಲಿ ಅದರಿಂದ ಉಪಯೋಗಿಸಲ್ಪಡದೆ ಯಾವುದೇ ಅಭಿಪ್ರಾಯವನ್ನು ವ್ಯಕ್ತಪಡಿಸಲು ಸಾಧ್ಯವಿಲ್ಲ.[೩] ಆದ್ದರಿಂದ ಗತಿಶೀಲ ತರ್ಕದ ಪರಿಚಯವಿಲ್ಲದ ಯಾರೇ ಆಗಲಿ, ಈ ವಿಷಯದ ಬಗೆಗೆ ಬರೆಯತೊಡಗಿದಾಗಲೇ ಅವನ

---

೩ ಹಾಗೆ ತಮ್ಮ ನಿಜವಾದ ಸ್ಥಿತಿಯನ್ನು ಕಣ್ಣುಮುಚ್ಚಿಕೊಂಡು ಮರೆಯುವ ಬುದ್ಧಿಜೀವಿ ಗಳಲ್ಲಿ ಯುರೋಪಿನ ಹಲವು ತತ್ತ್ವಜ್ಞಾನಿಗಳು ಇರುವರೆಂದು ನನಗೆ ತೋರುತ್ತದೆ. ರೋಮಾನೋ ಗಾರ್ಡಿನಿ, ಮ್ಯಾಕ್ಸ ಪಿಕಾರ್ಡ್ ಮತ್ತು ಆರ್ಟಿಗಾ ಗ್ಯಾಸೆ ಇವರಲ್ಲಿ ಕೆಲವರು. ಹಾಗೆಯೇ ಅಮೇರಿಕಾದಲ್ಲಿ ಹೆನ್ರಿಮಿಲ್ಲರ್ ಮತ್ತು ಬೀಟ್ ಪೀಳಿಗೆಯ ಅನೇಕ ಲೇಖಕರು ಈ ಸಾಂಪ್ರದಾಯಿಕ ದೃಷ್ಟಿಕೋನವನ್ನು ಸಮರ್ಥಿಸಿದ್ದಾರೆ.

ಸೋಲು ಶತಃಸಿದ್ಧವಾಗಿರುತ್ತದೆ. ಅವನು ಎಷ್ಟರ ಮಟ್ಟಿಗೆ ಜೋಲಿನಲ್ಲಿ ಸಿಕ್ಕಿಕೊಳ್ಳುತ್ತಾನೆ ಎಂದರೆ ಅದರಿಂದ ಹೊರಬರುವುದು ಕೂಡ ಸಾಧ್ಯವಿಲ್ಲ. ಕೆಲವರಿಗೆ ಆಕಾಶವಾಣಿ ಅಥವಾ ದೂರವಾಣಿ ಕೇಂದ್ರವನ್ನು ಪ್ರವೇಶಿಸುವುದು ಹಾಗೂ ಆ ಸುದ್ದಿ ಜಾಲಗಳನ್ನು ನಡೆಸುವ ಮಹನೀಯರೊಂದಿಗೆ ಮಾತನಾಡುವುದೆಂದರೆ ವಾಂತಿ ಬರುವಂತೆ ಆಗಬಹುದು. ಅವರು ಈ ಕೈಗಾರಿಕೆಯ ಯಂತ್ರಗಳನ್ನೇ ದ್ವೇಷಿಸುತ್ತಾರೆ ಅಥವಾ ದ್ವೇಷಿಸುತ್ತೇವೆಂದು ಹೇಳುತ್ತಾರೆ. ಯಾವುದೋ ಒಂದು ಸುಸಂಸ್ಕೃತವಾದ ಮೂಲೆಯೊಳಗೆ ಸೇರಿಕೊಂಡು ಬಿಡಬೇಕೆಂದು ಅವರ ಆಶೆ. ಆದರೆ ವಾಸ್ತವದಲ್ಲಿ ಅಂತಹ ಮೂಲೆ ಎಲ್ಲಿಯೂ ಇಲ್ಲ. ಆದ್ದರಿಂದ ಒಟ್ಟು ರಾಕ್ಷಸೀ ವ್ಯವಸ್ಥೆಯ ಒಳಗೆ ಉಳಿಯುವುದರಿಂದ ಎಷ್ಟು ಪ್ರಯೋಜನವೋ, ತಾನು ಅದರ ಹೊರಗಿದ್ದು ಸ್ವತಂತ್ರನಾಗಿರುವೆನೆಂದು ತಿಳಿದುಕೊಳ್ಳುವುದರಿಂದಲೂ ಅಷ್ಟೇ ಪ್ರಯೋಜನ.

ಆದ್ದರಿಂದ ನಾವು ಬೌದ್ಧಿಕ ಪ್ರಾಮಾಣಿಕತೆ ಮತ್ತು ಸೋಲುಗುಳಿ ಮನೋಧರ್ಮಗಳ ನಡುವೆ ಗೆರೆಯೆಳೆಯಲು ಪ್ರಯತ್ನಿಸೋಣ. ಈ ಮನೋರೂಪಣ ಕೈಗಾರಿಕೆಯ ಹೊರಗೆ ಉಳಿಯುವುದು, ಅದರೊಂದಿಗೆ ಯಾವುದೇ ವಿಧವಾದ ವ್ಯವಹಾರಗಳನ್ನು ಇಟ್ಟುಕೊಳ್ಳಲು ನಿರಾಕರಿಸುವುದು ಕೂಡ ಸರಿಯಾದ ದಾರಿ ಅಲ್ಲ, ಏಕೆಂದರೆ ಮಾತನಾಡುವುದು ಹಾಗೂ ಪರಿಹಾರಗಳನ್ನು ಹುಡುಕುವುದು ಯಾರ ಕರ್ತವ್ಯವಾಗಿದೆಯೋ ಅವನು ಮೌನಿಯಾಗಿ ತಪೋವನಗಳಲ್ಲಿ ಕುಳಿತಿರಲು ಸಾಧ್ಯವಿಲ್ಲ. ಇಂತಹ ಮಾಧ್ಯಮರಹಿತ ವನವಾಸವು ಬುದ್ಧಿಜೀವಿಯ 'ಪವಿತ್ರ ಆತ್ಮ'ವನ್ನು ಕೂಡ ಭ್ರಷ್ಟತೆಯಿಂದ ಕಾಪಾಡುವುದಿಲ್ಲ. ಬದಲಾಗಿ ಈ ಅಪಾಯಕಾರಿ ಆಟದೊಳಗೆ ನುಗ್ಗುವುದು, ಜಾಣತನದ ಹೆಜ್ಜೆಗಳನ್ನು ಇಡುವುದು ಹೆಚ್ಚು ಉಪಯುಕ್ತವಾಗಬಹುದು. ನಮಗೆ ಬೇಕಾಗಿರುವುದು ಮುಗ್ಧತೆಯಲ್ಲ. ಎಚ್ಚರಿಕೆಯಿಂದ ಕೂಡಿದ ದೃಢ ನಿರ್ಧಾರ. ನಮ್ಮ ಎದುರಿಗಿರುವ ರಾಕ್ಷಸನ ಸಮಗ್ರ ಪರಿಚಯ ನಮಗಿರಬೇಕು. ಅವನು ನಮ್ಮ ಮೇಲೆ ಒಡ್ಡಬಹುದಾದ ಪ್ರಲೋಭನೆಗಳ ಬಗ್ಗೆ, ತರಬಹುದಾದ ಒತ್ತಡಗಳ ಬಗ್ಗೆ ಸದಾ ಸರ್ವದಾ ಎಚ್ಚರದಿಂದಿರಬೇಕು.

ಮನಸ್ಸುಗಳನ್ನು ರೂಪಿಸುವ ಈ ಕೈಗಾರಿಕೆಯ ಅತಿ ವೇಗದ ಬೆಳವಣಿಗೆ ಹಾಗೂ ಆಧುನಿಕ ಸಮಾಜದಲ್ಲಿ ಅದಕ್ಕೆ ಸಿಕ್ಕಿರುವ ನಿರ್ಣಾಯಕ ಸ್ಥಾನಗಳು ಬುದ್ಧಿಜೀವಿಯು ವಹಿಸಬೇಕಾದ ಪಾತ್ರವನ್ನು ಅಪಾರವಾಗಿ ಬದಲಾಯಿಸಿದೆ. ಇಂದು ಅವನ ಎದುರು ಹೊಸ ಭಯಗಳಿವೆ ಮತ್ತು ಹೊಸ ಅವಕಾಶಗಳಿವೆ. ಅವನಿಗೆ ಗೊತ್ತಿರಲಿ ಬಿಡಲಿ, ಇಷ್ಟ ಇರಲಿ ಇಲ್ಲದಿರಲಿ, ಅವನು ಒಂದು ಬೃಹತ್ ಕೈಗಾರಿಕೆಯ ಸಂಗಾತಿಯಾಗಿದ್ದಾನೆ. ಅದು ಅವನನ್ನು ಅವಲಂಬಿಸಿರುತ್ತದೆ. ಅವನು ತನ್ನ ಅಸ್ತಿತ್ವಕ್ಕಾಗಿ ಅದನ್ನು ಅವಲಂಬಿಸಿದ್ದಾನೆ. ಏನೇ ಆಗಲಿ, ಅವನು ಆ ಕೈಗಾರಿಕೆಯನ್ನು ತನ್ನ ಗುರಿಗಳ ಪೂರೈಕೆಗಾಗಿ ಉಪಯೋಗಿಸಿಕೊಳ್ಳುವ ಪ್ರಯತ್ನವನ್ನು ಮಾಡಬೇಕು. ತನ್ನ ಗುರಿಗಳಿಗೂ ಆ ಆ ಕೈಗಾರಿಕೆಯ ಗುರಿಗಳಿಗೂ ಎಣ್ಣೆ ಸೀಗೆಕಾಯಿ ಎಂದು ತಿಳಿದುಕೊಳ್ಳಬೇಕು. ಅದು

ಪ್ರತಿಪಾದಿಸುವುದನ್ನು ಅವನು ಮುರಿಯಬೇಕು. ಈ ಗುರಿಯನ್ನು ತಲುಪಲು ನೇರ ಮಾರ್ಗಗಳಾದರೂ ಸರಿಯೇ, ಅಪಮಾರ್ಗಗಳಾದರೂ ಸರಿಯೇ ಎಲ್ಲವನ್ನು ಅನುಸರಿಸಬೇಕು. ಈ ಆಟದಲ್ಲಿ ಅವನು ಗೆಲ್ಲಬಹುದು ಅಥವಾ ಸೋಲಬಹುದು. ಆದರೆ ಒಂದು ಸಂಗತಿಯನ್ನು ಮಾತ್ರ ಮರೆಯಬಾರದು. ಈ ಆಟದಲ್ಲಿ ಪಣವಾಗಿರುವುದು ಕೇವಲ ಅವನೊಬ್ಬನ ಭವಿಷ್ಯ ಅಥವಾ ಅದೃಷ್ಟ ಮಾತ್ರವಲ್ಲ.



# ಸಂವಹನ: ಜಾನಪದ ಮಾದರಿಗಳು

**ಪುರುಷೋತ್ತಮ ಬಿಳಿಮಲೆ**

### ಪ್ರಸ್ತಾವನೆ

‘ಸಂವಹನ’ ಎಂಬ ಪದದೊಂದಿಗೆ ‘ಮಾಧ್ಯಮ’ ಎಂಬ ಇನ್ನೊಂದು ಪದವನ್ನೂ ಜೊತೆ ಸೇರಿಸಿಯೇ ಈಚೆಗೆ ಪ್ರಯೋಗಿಸಲಾಗುತ್ತಿದೆ. ‘ಸಂವಹನ ಮಾಧ್ಯಮಗಳು’ ಎಂಬುದು ಬಹಳ ಜನಪ್ರಿಯವಾದ ಪ್ರಯೋಗ ಕೂಡಾ ಹೌದು. ಈಚಿನ ದಿನಗಳಲ್ಲಿ ಸಮೂಹ ಮಾಧ್ಯಮಗಳು ಸಮಾಜದ ಮೇಲೆ ಅಪಾರ ಹಿಡಿತ ಸಾಧಿಸಿವೆ ಕೂಡಾ. ‘ಮಾಧ್ಯಮಗಳ’ ಕುರಿತಾಗಿ ಬಗೆ ಬಗೆಯ ಚರ್ಚೆಗಳೂ ನಡೆಯುತ್ತಿವೆ. ಇಲ್ಲಿ ಕುತೂಹಲಕರವಾದ ಒಂದು ಅಂಶವಿದೆ. ‘ಮಾಧ್ಯಮ’ ಪದದ ಆಚೆ ಈಚೆ ಇನ್ನೆರಡು ಪದಗಳು ಸಹಜವಾಗಿ ಕ್ರಿಯಾಶೀಲವಾಗುತ್ತಿರುವುದನ್ನು ಗಮನಿಸಬೇಕು. ಒಂದು ‘ಉತ್ತಮ’, ಇನ್ನೊಂದು ‘ಅಧಮ’, ‘ಕನಿಷ್ಠ’ ಅಥವಾ ‘ಸಾಮಾನ್ಯ’, ‘ಉತ್ತಮ’ ಮತ್ತು ‘ಅಧಮ’ದ ಮಧ್ಯೆ ‘ಮಧ್ಯಮ’ ಇದೆ. ಮಧ್ಯಮದಿಂದ ‘ಮಾಧ್ಯಮ’ ಹುಟ್ಟಿಕೊಂಡಿದೆ. ನಿಘಂಟುಗಳ ಅರ್ಥವೂ ಇದನ್ನು ಸಮರ್ಥಿಸುತ್ತವೆ. ‘ಅತಿ ಹೆಚ್ಚೂ ಅಲ್ಲದ, ಅತಿ ಕಡಿಮೆಯೂ ಅಲ್ಲದ ಮಧ್ಯಸ್ಥ ಗುಣದ್ದು’ ಎಂಬ ವಿವರದಲ್ಲಿ ಇದು ಸ್ಪಷ್ಟವಾಗಿದೆ. “ಪ್ರೇತಗಳಿಂದ ತಿಳಿದುಕೊಂಡ ಸಮಾಚಾರವನ್ನು ಇತರರಿಗೆ ತಿಳಿಸುವ ವ್ಯಕ್ತಿ” ಎಂದು ವಿವರಿಸುವ ಇಂಗ್ಲೀಷ ನಿಘಂಟುಗಳ ನಿರೂಪಣೆಯೂ ಮೇಲಿನ ವಾದಕ್ಕೆ ಪೂರಕವಾಗಿದೆ. “Intermediate between fast and slow, long and short etc”— ಎಂಬಂಥ ವಿವರಗಳು ಸರ್ವೇ ಸಾಮಾನ್ಯವಾಗಿವೆ. ಅಂದರೆ ಸಮಾನಾಂತರ ನೆಲೆಗಟ್ಟಿನ ಮೇಲೆ ನಿಂತಿರುವ ಎರಡು ವಸ್ತುಗಳ ಮಧ್ಯ ‘ಮಾಧ್ಯಮ’ ಇರುವುದಿಲ್ಲ ಎಂದಂತಾಯಿತು ಅಥವಾ ಅಂತಹ ಕಡೆಗಳಲ್ಲಿ ‘ಮಾಧ್ಯಮ’ ಇಲ್ಲದೆಯೇ ಸಂವಹನ ಸಾಧ್ಯವಾಗುತ್ತದೆ. ಹಾಗಾಗಿ ಎರಡು ಅಸಮಾನ ಸ್ಥಿತಿಗಳ ಮಧ್ಯೆ ‘ಮಧ್ಯಮ–ಮಾಧ್ಯಮ’ ಇದೆ ಎನ್ನಬೇಕು. ಈ ಅಸಮಾನತೆಯು ನೆಲೆಗಳು ಆಯಾ ಸಮಾಜವನ್ನು ಗಮನಿಸಿಕೊಂಡು, ಯಾವುದೂ ಆಗಬಹುದು.

ಪತ್ರಿಕೆಯನ್ನು ‘ಸಮೂಹ ಮಾಧ್ಯಮ’ ಎಂದು ನಾವು ಕರೆಯುವುದಾದರೆ, ಅದು ಯಾವ ಎರಡು ಅಸಮಾನ ಸ್ಥಿತಿಗಳ ಮಧ್ಯೆ ಕ್ರಿಯಾಶೀಲವಾಗುತ್ತಿದೆ ಎಂಬ ಪ್ರಶ್ನೆಯನ್ನು ಕೇಳಿಕೊಳ್ಳಬೇಕು. ಬಹುಶಃ ಪತ್ರಿಕೆಯ ಮಾಲೀಕ ವರ್ಗ ಮತ್ತು ಸಂಪಾದಕ ವರ್ಗ ಒಂದು ಸ್ಥಿತಿಯಾದರೆ ಪತ್ರಿಕೆಯನ್ನು ಓದುವ ವರ್ಗ ಇನ್ನೊಂದು ಸ್ಥಿತಿಯನ್ನು ಸೂಚಿಸು

ತ್ತದೆ. ಈ ಎರಡೂ ಸ್ಥಿತಿಯನ್ನು ಮೌಲ್ಯಮಾಪನ ಮಾಡತೊಡಗಿದರೆ, ನಮ್ಮ ಕಾಲದ ಸತ್ಯಗಳ ಬಗೆಗೆ ಇನ್ನಷ್ಟು ಬೆಳಕು ಚೆಲ್ಲಬಹುದು. 'ಪತ್ರಿಕಾ ಮಾಧ್ಯಮ' ಎಂಬ ನಡು ಸ್ಥಿತಿಯು ಯಾರನ್ನು 'ಉತ್ತಮ' ಮತ್ತು ಯಾರನ್ನು 'ಕನಿಷ್ಠ' ಎಂದು ಪರಿಭಾವಿಸುತ್ತವೆ? ಉತ್ತರ ಸ್ಪಷ್ಟವೇ ಇದೆ. ಪತ್ರಿಕಾ ಮಾಲೀಕ ಮತ್ತು ಸಂಪಾದಕ ವರ್ಗ 'ಉತ್ತಮ' ಎಂಬ ಅಭಿದಾನಕ್ಕೂ, ಓದುವ ವರ್ಗ 'ಅಧಮ' ಅಥವಾ 'ಕನಿಷ್ಠ' ಎಂಬ ಅಭಿದಾನಕ್ಕೂ ಪಾತ್ರವಾಗುತ್ತದೆ. ಈ ಮಾತನ್ನು ರೇಡಿಯೋ, ದೂರದರ್ಶನ, ಸಿನಿಮಾಗಳಿಗೂ ಅನ್ವಯಿಸಬಹುದು. ಇಲ್ಲಿ ನೋಡುಗರು ಅಥವಾ ಕೇಳುಗರು 'ಕನಿಷ್ಠ'ರಾಗಿರುತ್ತಾರೆ. ಮತ್ತು ಕಾರ್ಯಕ್ರಮಗಳ ನಿರ್ಮಾಪಕರು 'ಉತ್ತಮ'ರಾಗಿರುತ್ತಾರೆ. 'ಉತ್ತಮ'ರು 'ಕನಿಷ್ಠ'ರಿಗಾಗಿ ಕಾರ್ಯಕ್ರಮವನ್ನು ಸಿದ್ಧಗೊಳಿಸಿ, ಮಾಧ್ಯಮಗಳ ಮೂಲಕ ಅವುಗಳನ್ನು ಸಂವಹಿಸುತ್ತಾರೆ. ಬೇರಾರೋ ಕೊಟ್ಟದ್ದನ್ನು ಇನ್ಯಾರದೋ ಮನೆಗಳಿಗೆ ಒಯ್ಯುವ ಕೆಲಸವನ್ನಷ್ಟೇ ಈ ಮಾಧ್ಯಮಗಳು ಮಾಡುತ್ತವೆ.

ಈ ಒಟ್ಟು ಪ್ರಕ್ರಿಯೆಯನ್ನು ಕೆಳಗಿನಂತೆ ತೋರಿಸಬಹುದು.




ಚಿತ್ರ: ೧. ಆಧುನಿಕ ಮಾಧ್ಯಮಗಳ ಸಂವಹನ ವಿಧಾನ
'ಉತ್ತಮ'ದಿಂದ 'ಅಧಮತ್ವ'ದ ಕಡೆಗೆ ಚಲನೆ?

ಆಧುನಿಕ ಸಮಾಜದ ಸಂವಹನ ಮಾಧ್ಯಮಗಳ ಪರಿಕಲ್ಪನೆಯಲ್ಲಿ ಎರಡು ವರ್ಗಗಳ ಕಲ್ಪನೆ ಪೂರ್ವಗ್ರಹೀತವಾಗಿರುತ್ತವೆ ಮತ್ತು ಮಾಧ್ಯಮಗಳನ್ನು ಈ ಪೂರ್ವಗ್ರಹೀತಗಳ ಹಿನ್ನೆಲೆಯಲ್ಲಿ ರೂಪುಗೊಳಿಸಲಾಗುತ್ತದೆ. ಆಧುನಿಕ ಜಗತ್ತಿಗೆ ಇದರಿಂದ ಬಿಡುಗಡೆ ಇಲ್ಲ. ಈ ಪರಿಸ್ಥಿತಿಯಿಂದ ಉಂಟಾಗುವ ಅನಾಹುತಗಳ ಚರ್ಚೆ ಈ ಪ್ರಬಂಧದ ವ್ಯಾಪ್ತಿಯಿಂದ

ಹೊರತಾದುದಾದರೂ ಕೆಲವು ಅಂಶಗಳನ್ನು ಇಲ್ಲಿ ಉಲ್ಲೇಖಿಸುವುದು ಅಗತ್ಯ. ಮುಖ್ಯ
ವಾಗಿ ಗಮನಿಸಬೇಕಾದುದೆಂದರೆ ಮಾಧ್ಯಮಗಳಿಗೆ ವಿಷಯ ತುರುಕಿಸುವ ಮಂದಿಗಳು ಸದಾ
ಅಲ್ಪಸಂಖ್ಯಾಕರಾಗಿರುತ್ತಾರೆ. ಆದರೆ ಅವರು ಆಳುವ ವರ್ಗವನ್ನು ಪ್ರತಿನಿಧಿಸುತ್ತಾರೆ.
ಮಾಧ್ಯಮಗಳು ಬಹುಸಂಖ್ಯಾಕರನ್ನು ತಲುಪುತ್ತವೆ ಮತ್ತು ಹಾಗೆ ತಲುಪುವಾಗ ಅವು
ಆಳುವ ವರ್ಗದ ಪರವಾದ ತನ್ನ ಒಲವನ್ನು ಪ್ರಕಟಿಸುತ್ತಿರುತ್ತವೆ. ಇಲ್ಲಿ ಬಹುಸಂಖ್ಯಾಕ
ರಿಗೆ ಆಯ್ಕೆಯೇ ಇಲ್ಲ. ಅವರಿಗೆ ಬೇಕಾದ್ದೋ ಬೇಡವಾದ್ದೋ ಏನನ್ನೋ ಸಿದ್ಧಗೊಳಿಸಿ
ಅವರ ತಲೆಯೊಳಗೆ ತುರುಕಲಾಗಿ ಬಿಡುತ್ತದೆ. ಹೀಗೆ ಮಾಧ್ಯಮಗಳು ತಾವು ಸಿದ್ಧ
ಗೊಂಡ ಸ್ಥಿತಿಯಲ್ಲಿಯೇ ಆಳುವ ವರ್ಗದ ಜನರನ್ನು 'ಉತ್ತಮ'ರೆಂದೂ, ಆಳಿಸಿಕೊಳ್ಳುವ
ಜನರನ್ನು 'ಕನಿಷ್ಠ'ರೆಂದೂ ನಿರ್ವಚಿಸಿ ಬಿಡುತ್ತದೆ.

ಆಧುನಿಕ ಸಮಾಜದ ಈ ತಾಂತ್ರಿಕ ಬೆಳವಣಿಗೆಯನ್ನು ಸಮುದಾಯನಿಷ್ಠ ಜಾನಪದದ
ಮೇಲೂ ಆರೋಪಿಸಲಾಗುತ್ತಿದೆ ಮತ್ತು ಜಾನಪದವನ್ನು ಅದರ ಹೊರಗಿನ ತರ್ಕಗಳ
ಮೂಲಕ ಗ್ರಹಿಸಲು ಈಚೆಗೆ ಪ್ರಯತ್ನಿಸಲಾಗುತ್ತಿದೆ. ಮಾನವಕುಲಶಾಸ್ತ್ರಜ್ಞರೂ
ಗ್ರಾಮ ವರ್ತನೆಗಳನ್ನು ಗ್ರಾಮದ ಹೊರಗಿನ ಸಾಂಸ್ಕೃತಿಕ ಪರಿಕಲ್ಪನೆಗಳ ಬೆಳಕಿನಲ್ಲಿ
ವಿಶ್ಲೇಷಿಸುವ ಸಾಹಸವನ್ನು ಮಾಡಿದ್ದಾರೆ. ಉದಾಹರಣೆಗೆ ದೈವಪಾತ್ರಿತ್ವದ ಬಗೆಗೆ
ಭಾರತದಲ್ಲಿ ನಡೆದ ಚರ್ಚೆಗಳನ್ನು ಗಮನಿಸಬೇಕು. ಬಾಬ್ (Babb 1975), ಕಾರ್‌ಸ್ಟೈರ್ಸ್
(Carstairs 1976), ಡ್ಯೂಮೋ (Dumont 1959), ಹಾರ್ಪರ್ (Harper
1957), ಚಿನ್ನಪ್ಪಗೌಡ (1990) ಮೊದಲಾದವರು ದೈವಾವೇಶ ಮತ್ತು ದೈವಪಾತ್ರಿತ್ವ
ಗಳ ಕುರಿತು ಬರೆಯುವಾಗ 'ದೈವ ಮಾಧ್ಯಮ' (Spirit medium) ಎಂಬ ಪದವನ್ನು
ಬಳಸುತ್ತಾರೆ. ಕಥಕ್ಕಳಿ, ಯಕ್ಷಗಾನ, ತೆರುಕೂತ್ತುಗಳಂಥ ಪ್ರದರ್ಶನ ಕಲೆಗಳ ಬಗ್ಗೆ
ಬರೆಯುವಾಗಲೂ 'ಮಾಧ್ಯಮ' ಎಂಬ ಪದವನ್ನು ಬಳಸಲಾಗುತ್ತಿದೆ. ದಕ್ಷಿಣ ಏಷ್ಯಾದ
ಉಪ ಸಂಸ್ಕೃತಿಗಳಲ್ಲಿರುವ ದೈವ ಪಾತ್ರಿತ್ವ, ಪ್ರದರ್ಶನ ಕಲೆಗಳು ಮತ್ತಿತರ ಜಾನಪದ
ಸಾಮಗ್ರಿಗಳ ಬಗ್ಗೆ ಬರೆಯುವಾಗ ಯುರೋಪಿನ ಮತ್ತು ಅಮೇರಿಕಾದ ಮಾನವ
ಶಾಸ್ತ್ರಜ್ಞರು, ಬಹಳ ಬಾರಿ ಈ ಪದವನ್ನು ಬಳಸಿದ್ದಾರೆ. ಈಚಿನ ದಿನಗಳಲ್ಲಿ ಜಾನಪದ
ವಿದ್ವಾಂಸರೂ ಆ ಹಾದಿ ಹಿಡಿದಿದ್ದಾರೆ.

ಕುತೂಹಲದ ಸಂಗತಿ ಎಂದರೆ, ವಿದ್ವಾಂಸರು ಯಾವ ಪದವನ್ನು ಮತ್ತೆ ಮತ್ತೆ
ಬಳಸುತ್ತಿದ್ದಾರೋ, ಆ ಪದ ಅಥವಾ ಅದಕ್ಕೆ ಸಂವಾದಿಯಾದ ಪದ ಜಾನಪದದಲ್ಲಿ
ಇಲ್ಲದಿರುವುದು. ಭೂತಾರಾಧನೆ ಅಥವಾ ಯಕ್ಷಗಾನದಲ್ಲಿ, ನಾನು ಈ ಪ್ರಬಂಧದ
ಆರಂಭದಲ್ಲಿ ಚರ್ಚಿಸಿದ 'ಉತ್ತಮ'–'ಮಧ್ಯಮ'–'ಅಧಮ'ತ್ವದ ಪರಿಕಲ್ಪನೆಗಳೇ
ಇದ್ದಂತಿಲ್ಲ. ಸಂಪೂರ್ಣ ಶರಣಾಗತಿ ಸಾಧ್ಯವಿರುವ ಜನಪದ ಸಮುದಾಯಗಳಲ್ಲಿ ಅಂಥ
ವ್ಯತ್ಯಾಸ ಇರುವುದಕ್ಕೆ ಕಾರಣಗಳೂ ಇಲ್ಲ. ಹಾಗೆ ನೋಡಿದರೆ 'ಮಾಧ್ಯಮ' ಎಂಬ ಪದಕ್ಕೆ
ದೊಡ್ಡ ಇತಿಹಾಸವೂ ಇಲ್ಲ. ಅದು ಈಚಿನ ಕಾಲದ ಪದ ಮತ್ತು ಸಮಾಜ ಸಾಕಷ್ಟು

ಬೆಳೆದು, ವರ್ಗ ವ್ಯತ್ಯಾಸ ಕಾಣಿಸಿಕೊಳ್ಳುತ್ತಿರುವ ಹೊತ್ತಿಗೆ ಸೃಷ್ಟಿಯಾದ ಪದ. ಸಮುದಾಯಗಳು 'ಮಾಧ್ಯಮ'ಗಳನ್ನು ಹೊಂದಿರುವುದಿಲ್ಲ. ಏಕೆಂದರೆ ಮಾಧ್ಯಮಗಳನ್ನು ಸೃಷ್ಟಿಸಿಕೊಳ್ಳುವ ತಾಕತ್ತು ಅಥವಾ ಅಧಿಕ ಉತ್ಪಾದನೆ ಅವಕ್ಕೆ ಇರುವುದಿಲ್ಲ. ಉತ್ಪಾದನೆ ಯಲ್ಲಿ ಮಿಗತೆ ಉಂಟಾಗುವ ಕಾಲ ಘಟ್ಟದಲ್ಲಿ ಮಾಧ್ಯಮಗಳು ಸೃಷ್ಟಿಯಾದವು ಎಂಬುದನ್ನು ನೆನಪಿಟ್ಟುಕೊಳ್ಳಬೇಕು. ಇದಕ್ಕೆ ಈಗ ಪ್ರಚಲಿತದಲ್ಲಿರುವ ಮಾಧ್ಯಮಗಳೇ ಒಳ್ಳೆಯ ಉದಾಹರಣೆಗಳು. ನಮ್ಮ ಹಳ್ಳಿಗಳಲ್ಲಿ ಇಂದಿಗೂ ಮಾಧ್ಯಮಗಳಿಲ್ಲ. ಮೌಖಿಕ ರೂಪದ ಸಂವಹನವೇ ಅಲ್ಲಿ ಅಂತಿಮ. ಆದರೆ ಪೇಟೆಗಳಲ್ಲಿ 'ಮಾಧ್ಯಮ'ಗಳಿವೆ. ಅಲ್ಲಿ ಮೌಖಿಕ ರೂಪದ ಜಾನಪದ ಸಂವಹನಗಳಿಗೆ ಅಷ್ಟಾಗಿ ಮಹತ್ತ್ವ ಇಲ್ಲ

ದೈವ ಪಾತ್ರಿತ್ವದ ಸಂದರ್ಭವನ್ನು ಇಲ್ಲಿ ಪರಿಶೀಲಿಸಬೇಕು. ಅಲ್ಲಿ ದೈವವೆಂದರೆ ಪಾತ್ರಿಯೇ, ಭೂತಾರಾಧನೆಯಲ್ಲಿ ಕಣ್ಣಿಗೆ ಕಾಣುವ ಭೂತವೇ ಅಂತಿಮ. ಮಾತಾಡುವ, ಕುಣಿದಾಡುವ, ಹೂಂಕರಿಸುವ, ಜಿಗಿದು ಕುಪ್ಪಳಿಸುವ ಆ ಭೂತದೊಂದಿಗೆ ಅದನ್ನು ನಂಬುವವನಿಗೆ ನೇರ ಸಂವಾದವೂ ಸಾಧ್ಯವಾಗುತ್ತದೆ. ಭೂತ ಮತ್ತು ಭೂತವನ್ನು ನಂಬುವವನ ಮಧ್ಯ ನೇರ ಸಂಪರ್ಕವೇ ಇದೆ. ಎಷ್ಟೋ ಬಾರಿ ಭೂತ ಕುಣಿಯುವುದನ್ನು ನೋಡುವ ವ್ಯಕ್ತಿ ನೋಡ ನೋಡುತ್ತಿರುವಂತೆ ತಾನೂ ಭೂತವಾಗುತ್ತಾನೆ. ಪಾಡ್ದನಗಳನ್ನು ಹಾಡುತ್ತಿರುವಂತೆ ಮಹಿಳೆಯರು 'ಸಿರಿದೈವ' ಬಳಗದ ಮಾತೃವಂಶೀಯ ಕುಟುಂಬದ ಸದಸ್ಯರಾಗಿ ಮಾರ್ಪಡುತ್ತಾರೆ. ವಿಭಿನ್ನ ಬಗೆಯಲ್ಲಿ ಸಹ ಅಸ್ತಿತ್ವವನ್ನು ಹೊಂದುವ ಈ 'ಸಿರಿ'ಗಳು ಮತ್ತೆ ಜನರೊಡನೆ ಸಂವಾದ ನಡೆಸುತ್ತಾರೆ. ಇಲ್ಲಿ 'ಸಿರಿ'ಗಳನ್ನು ದೈವ ಮಾಧ್ಯಮಗಳೆಂದು ಕರೆಯಕೂಡದು. ಏಕೆಂದರೆ ಕಣ್ಣಿಗೆ ಕಾಣುವ ಈ ಸಿರಿಗಳಿಗಿಂತ ಭಿನ್ನವಾದ ದೈವವೊಂದು ಅಲ್ಲಿ ಇಲ್ಲ. ಸಮುದಾಯದೊಡನೆ ಮಾತಾಡುತ್ತಿರುವುದೇ 'ದೈವ'. ಈ ನಿಟ್ಟಿನಲ್ಲಿ ಜನರು ಬಳಸುವ 'ದರ್ಶನ' ಪದ ಹೆಚ್ಚು ಅರ್ಥಪೂರ್ಣವಾದುದು. 'ಸಿರಿದರ್ಶನ'ವಾಗುವ ಮಹಿಳೆ ದೈವಕ್ಕೆ ಮಾಧ್ಯಮ ಅಲ್ಲ. ಬದಲು ಆಕೆಗೆ ಏನು ದರ್ಶನ ವಾಯಿತೋ ಅದೇ 'ಸಿರಿ'. ಭೂತಾರಾಧನೆಯಲ್ಲೂ 'ದರ್ಶನ' ಪದವೇ ಬಳಕೆಯಲ್ಲಿದೆ. ಜನಪದ ಆರಾಧನೆಗಳಲ್ಲಿ 'ದೈವದರ್ಶನ' ಇದೆಯೇ ಹೊರತು 'ದೈವ ಮಾಧ್ಯಮಗಳು' ಇಲ್ಲ.

ಬಯಲಾಟಗಳನ್ನು ಇನ್ನೊಂದು ಉದಾಹರಣೆಯಾಗಿ ಪರಿಶೀಲಿಸಬಹುದು. ಕರ್ನಾಟಕ ರಂಗಭೂಮಿಯಲ್ಲಿ ಇವು ಬಹಳ ಜನಪ್ರಿಯವಾದ ಪ್ರಕಾರಗಳಾಗಿವೆ. ಇಲ್ಲಿ ರಂಗಭೂಮಿ ಮತ್ತು ಪ್ರೇಕ್ಷಕರ ನಡುವಣ ಸಂಬಂಧ ಬಹಳ ನೇರವಾದುದು ಮತ್ತು ದ್ವಿಮುಖ ಚಲನೆ ಇರುವಂಥದ್ದು. ಯಕ್ಷಗಾನದಲ್ಲಿ ರಂಗದ ಮೇಲೆ ಕಾಣಿಸಿಕೊಳ್ಳುವ 'ರಾವಣ'ನು ವಾಲ್ಮೀಕಿ ರಾಮಾಯಣದಲ್ಲಿ ಕಂಡುಬರುವ ರಾವಣನೋ, ಅವನ ಪ್ರತಿರೂಪವೋ, ಸಾಂಕೇತಿಕ ರೂಪವೋ ಅಲ್ಲ. ಬೇರಾವುದೋ ಪರಿಕಲ್ಪನೆಯನ್ನು ನೋಡುಗರಿಗೆ ದಾಟಿಸುವ ಒಂದು 'ಮಾಧ್ಯಮ' ಆಗಿ ಆತ ಕೆಲಸ ಮಾಡುತ್ತಿಲ್ಲ. ಆತ ಯಕ್ಷಗಾನದ ರಾವಣ ಅಷ್ಟೆ. ಯಕ್ಷಗಾನದ ರಾವಣನಿಗಾಗಲೀ, ಯಕ್ಷಗಾನದ ಪ್ರೇಕ್ಷಕರಿ

ಗಾಗಲೀ, ಅಲ್ಲಿ ಏನು ಇರುತ್ತದೆಯೋ ಅದಕ್ಕಿಂತ ಭಿನ್ನವಾದದ್ದೊಂದರ ಬಗೆಗೆ ತಿಳಿದಿಲ್ಲ. ತಿಳಿಯಬೇಕೆಂಬ ಆಸಕ್ತಿಯೂ ಅವರಿಗಿಲ್ಲ. ಒಂದು ನಿರ್ದಿಷ್ಟ ಕಾಲ ಮತ್ತು ಸ್ಥಳಕ್ಕೆ ಬದ್ಧವಾಗಿರುವ 'ಪ್ರದರ್ಶನ ಸತ್ಯ'ವನ್ನು ಆ ಸಂದರ್ಭದಲ್ಲಿರಿಸಿಯೇ ನೋಡಬೇಕಾದ ಜವಾಬ್ದಾರಿ ನಮ್ಮದು. ರಂಗದಲ್ಲಿ ಕಾಣಿಸಿಕೊಂಡ ರಾವಣ ಏನು ಹೇಳುತ್ತಾನೆಯೋ ಅದೇ ಅಂತಿಮ. ಆತನು ಹೇಳದೇ ಉಳಿಸಿದ ವಿಚಾರಗಳ ಬಗೆಗೆ ಅಲ್ಲಿ ಹುಡುಕಾಟವೂ ಇಲ್ಲ. ಚರ್ಚೆಯೂ ಇಲ್ಲ. ಹೇಳಿದ್ದು ಹಳತಾಯಿತು ಅಂತಾನೂ ಇಲ್ಲ. ಹೀಗೆ ಹೇಳಬೇಕಾದರೆ 'ಪ್ರದರ್ಶನ ಸತ್ಯ'ಕ್ಕಿಂತ ಭಿನ್ನವಾದ ಸತ್ಯದ ಕಲ್ಪನೆಯೊಂದು ಬೇಕಾಗುತ್ತದೆ. ಜನಪದ ರಂಗಭೂಮಿಯಲ್ಲಿ ಅಂಥ ಕಲ್ಪನೆ ಇಲ್ಲ. ಹೀಗಿರುವುದರಿಂದಲೇ ಪ್ರತಿಯೊಂದು ಪ್ರಯೋಗವನ್ನೂ ಹೊಸತೆಂಬಂತೆ ನೋಡಲು ನಮಗೆ ಸಾಧ್ಯವಾಗುತ್ತದೆ. ಜನ ಮತ್ತೆ ಮತ್ತೆ ಅದೇ ಪ್ರಸಂಗವನ್ನು ನೋಡಿದರೂ 'ಹೊಸ ಸತ್ಯ'ವಾಗಿ ಅದನ್ನು ಸ್ವೀಕರಿಸುತ್ತಾರೆ. ಸ್ವತಃ ಕಲಾವಿದನ ಅನುಭವವೂ ಇದುವೆ ಆಗಿದೆ. ಆತ ಬೇರಾವುದೋ ಸ್ವಭಾವವೊಂದರ 'ಮಾಧ್ಯಮ' ಅಲ್ಲ. ಆ ಕ್ಷಣಕ್ಕೆ ಆತ ಏನನ್ನು ಕಂಡುಕೊಂಡನೋ ಅಷ್ಟೇ ಸತ್ಯ. ಹಾಗಾಗಿ ಮಾಡಿದ ಪಾತ್ರವನ್ನೇ ಮತ್ತೆ ಮತ್ತೆ ಮಾಡಿ ಆತ ದಣಿಯುವುದಿಲ್ಲ. ಪ್ರೇಕ್ಷಕರೂ ದಣಿಯುವುದಿಲ್ಲ. ಅದು ನಿಜವಾದ ಅರ್ಥದಲ್ಲಿ 'ನಿಚ್ಚಂ ಪೊಸತು'.

ದೈವ ಪಾತ್ರಿತ್ವದ ಸಂದರ್ಭದಲ್ಲಿ ನಡೆಯುವಂತೆ ಬಯಲಾಟದಲ್ಲಿಯೂ ಕಲಾವಿದ ಮತ್ತು ಪ್ರೇಕ್ಷಕರ ನಡುವೆ ಎಷ್ಟೋ ಬಾರಿ ನೇರ ಸಂವಾದ ನಡೆಯುತ್ತದೆ. ಹಾಗೆ ನೋಡಿದರೆ ಪ್ರೇಕ್ಷಕರ ಪ್ರತಿಕ್ರಿಯೆ ಇಲ್ಲದೆ ಯಕ್ಷಗಾನವೇ ನಡೆಯಲಾರದು. ಸ್ವಲ್ಪ ವಿಷಯಾಂತರವಾದರೂ ಇಲ್ಲಿ ನೆನಪಿಸಿಕೊಳ್ಳಬೇಕಾದ್ದು ಜನಪದ ಕತೆಗಳನ್ನು. 'ಹೂಂ' ಗುಡುವವರಿಲ್ಲದೆ ಕತೆ ಬೆಳೆಯಲು ಸಾಧ್ಯವೇ ಇಲ್ಲ. ಮಗುವಿಗೆ ಕತೆ ಹೇಳುವ ಅಜ್ಜಿಯು ಮಗು ಹೂಂಗುಡುವುದನ್ನು ನಿಲ್ಲಿಸಿದ ತಕ್ಷಣ ಕತೆಯನ್ನೂ ನಿಲ್ಲಿಸಿಬಿಡುತ್ತಾಳೆ. ಇಲ್ಲಿಯೂ ಏಕಮುಖಿ ಚಲನೆ ಇಲ್ಲ. ಬದಲು ದ್ವಿಮುಖಿ ಸಂಚಾರವಿದೆ. ಜಾನಪದದ ಈ ಒಟ್ಟು ಸಂವಹನ ಪ್ರಕ್ರಿಯೆಯನ್ನು ಈ ಕೆಳಗಿನಂತೆ ತೋರಿಸಬಹುದು. (ಚಿತ್ರ ೨ ಮತ್ತು ೩)




ಚಿತ್ರ: ೨ : ಜಾನಪದ ಸಂವಹನ ವಿಧಾನ. ಅಸಮಾನ ನೆಲೆಗಳಲ್ಲಿ ದ್ವಿಮುಖಿ ಚಲನೆ




ಚಿತ್ರ: ೩ : ಜಾನಪದ ಸಂವಹನ ವಿಧಾನ: ಸಮಾನ ನೆಲೆಗಳಲ್ಲಿಯೂ ದ್ವಿಮುಖ ಚಲನೆ

ಚಿತ್ರ: ೩ರಲ್ಲಿ ತೋರಿಸಲಾದ ಮಾಯ ಮತ್ತು ಜೋಗಗಳು ಜನಪದ ಧಾರ್ಮಿಕ ಕ್ಷೇತ್ರದ ಎರಡು ವಲಯಗಳಾಗಿವೆ. ಮಾಯವು ಅಲೌಕಿಕ ಸ್ಥಿತಿಯನ್ನು ಹೇಳಿದರೆ ಜೋಗವು ಲೌಕಿಕ ಸ್ಥಿತಿಯನ್ನು ಹೇಳುತ್ತದೆ. ಮಾಯವು ಜೋಗಕ್ಕಿಂತ ಶ್ರೇಷ್ಠವಾದುದು ಎಂಬ ನಂಬಿಕೆ ಇದ್ದರೂ ಭೂತಾರಾಧನೆಯಲ್ಲಿ ಅವೆರಡರ ಮಧ್ಯೆ ನೇರ ಸಂವಾದ ಸಾಧ್ಯವಾಗುತ್ತದೆ. ಚಿತ್ರ: ೨ರಲ್ಲಿ ಎರಡೂ ಲೋಕಗಳೂ ಸಮಾನ ನೆಲೆಗಟ್ಟಿನಲ್ಲಿದ್ದು ಅಲ್ಲಿಯೂ ದ್ವಿಮುಖ ಚಲನೆ ಇರುತ್ತದೆ. ಎರಡು ಲೋಕಗಳ ಮಧ್ಯೆ ಬಂಧವನ್ನು ಬೆಸೆಯುವ 'ಮಾಧ್ಯಮ'ಗಳು ಅಲ್ಲಿಲ್ಲ.

ಜಾನಪದದ ಮೌಖಿಕ ರೂಪದ ಸಂವಹನ ಪ್ರಕ್ರಿಯೆಯು ಮನುಷ್ಯ ಕೇಂದ್ರಿತವಾಗಿರುತ್ತದೆ. ಕೆಳಗಿನ ಜಾನಪದ ಪ್ರಕಾರಗಳನ್ನು ಗಮನಿಸಬೇಕು.

**ಮೌಖಿಕ ಸಾಹಿತ್ಯ ರೂಪಗಳು:** ಜನಪದ ಕತೆ, ಪುರಾಣ, ಐತಿಹ್ಯ, ಗಾದೆ, ಒಗಟು, ತ್ರಿಪದಿ ಕಥನ ಕಾವ್ಯ, ಲಾವಣಿ, ಶಿಶುಪ್ರಾಸ ಮತ್ತಿತರ ಭಾಷಿಕರೂಪಗಳು ಅಶಾಬ್ದಿಕ ಅಂಶಗಳೊಡನೆ ಸಂವಹನಗೊಳ್ಳುತ್ತವೆ. ಇವು ಮಾಧ್ಯಮಗಳಲ್ಲ. ಬದಲು ಸ್ವತಂತ್ರವಾದ ರೂಪಗಳು. ಮಗು ನಿದ್ದೆ ಮಾಡಿದ ತಕ್ಷಣ ತಾಯಿ ಜೋಗುಳವನ್ನು ನಿಲ್ಲಿಸಿಬಿಡುತ್ತಾಳೆ. ಆದರೆ ರೇಡಿಯೋ ನಿಲ್ಲಬೇಕೆಂದಿಲ್ಲ. ಹಾಗೆಯೇ ರಾತ್ರಿ ಬಹಳ ಹೊತ್ತಿನ ವರೆಗೆ ಹಾಡುಗಳನ್ನು ಕೇಳಬೇಕೆಂದಿದ್ದರೂ ರೇಡಿಯೋದಲ್ಲಿ ಅದಕ್ಕೆ ಅವಕಾಶಗಳಿಲ್ಲ.

ಕೇಳುಗರ ಧ್ವನಿ ನಿರೂಪಣೆಗೆ ಕೇಳುವುದು ಜಾನಪದ ಸಂವಹನಗಳಲ್ಲಿ ಮಾತ್ರ ಸಾಧ್ಯ.

**ಭೌತಿಕ ಜಾನಪದ**: ಆಹಾರಪದ್ಧತಿ, ಮನೆಗಳ ವಿನ್ಯಾಸ, ವೃತ್ತಿಸಂಬಂಧೀ ಸಲಕರಣೆಗಳು, ತಾಳ, ರಣಹಲಗೆ, ಜಾಗಟೆ ಮತ್ತಿತರ ಭೌತಿಕ ವಸ್ತುಗಳೆಲ್ಲ ಜಾನಪದ ಸಂವಹನ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುತ್ತವೆ. ಇವುಗಳಿಗೆ ದೇಶ ಕಾಲಾತೀತವಾದ ಒಂದು ಗುಣವೇನೂ ಇರುವುದಿಲ್ಲ. ಕಾಲ ಮತ್ತು ಸ್ಥಳಕ್ಕೆ ಬದ್ಧವಾದ ಕೆಲವು ಗುಣಲಕ್ಷಣಗಳಿರುತ್ತವೆ ಮತ್ತು ಒಂದು ನಿರ್ದಿಷ್ಟ ಜನ ಸಮುದಾಯವನ್ನು ಅವು ನೇರವಾಗಿ ತಲುಪುತ್ತವೆ. ಬ್ರಾಹ್ಮಣರ ಊಟದ ಎಲೆಯ ಮೇಲೆ ಹಾಕಡಲಾಗುವ ತಿಂಡಿ–ತಿನಿಸುಗಳ ರೀತಿ ಮತ್ತು ಶೂದ್ರರ ಎಲೆಗಳಲ್ಲಿ ತಿಂಡಿ ತಿನಿಸುಗಳನ್ನು ಇರಿಸಲಾಗುವ ರೀತಿ ಬೇರೆ ಬೇರೆಯಾಗಿರುತ್ತದೆ. ಆಯಾ ಸಮುದಾಯಕ್ಕೆ ಅವು ಹೇಗೆ ಬೇಕೊ ಹಾಗೆ ಸಂವಹನಗೊಳ್ಳುತ್ತವೆ.

**ಸಾಮಾಜಿಕ ಆಚರಣೆಗಳು**: ಜಾನಪದ ಸಮುದಾಯಕ್ಕೆ ಎರಡು ರೀತಿಯ ಆವರ್ತನಗಳಿವೆ. ಹುಟ್ಟಿನಿಂದ ಸಾಯುವಲ್ಲಿವರೆಗೂ ಮೊದಲ ಆವರ್ತನದಲ್ಲಿ ಹುಟ್ಟು, ಮುಟ್ಟು, ಮದುವೆ, ಸೀಮಂತ, ಸಾವು ಮೊದಲಾದ ಆಚರಣೆಗಳಿವೆ. ಸುಗ್ಗಿಯಿಂದ ಮುಂದಿನ ಸುಗ್ಗಿಯವರೆಗಿನ ಎರಡನೇ ಆವರ್ತನದಲ್ಲಿ ಕಾಲದ ಪರಿವರ್ತನೆಗೆ ಅನುಗುಣವಾದ ಕೆಲವು ಹಬ್ಬಗಳಿವೆ. ಅಮಾವಾಸ್ಯೆ, ಹುಣ್ಣಿಮೆ, ಸಂಕ್ರಾಂತಿ, ದೀಪಾವಳಿ, ಕಾಮನ ಹಬ್ಬ ಮೊದಲಾದ ಆಚರಣೆಗಳ ಸಂದರ್ಭದಲ್ಲಿ ನಡೆಸುವ ಎಲ್ಲ ಕ್ರಿಯೆಗಳೂ ಸಮುದಾಯಕ್ಕೆ ಸರಳವಾಗಿ ಸಂವಹನಗೊಳ್ಳುತ್ತಿರುತ್ತವೆ. ಹುಡುಗಿಯೊಬ್ಬಳು 'ಹಾಲು ಒಸರುವ ಮರ'ದ ಕೆಳಗೆ ಕುಳಿತರೆ ಆಕೆ ಮೈನೆರೆದಿದ್ದಾಳೆ ಎಂದೇ ಅರ್ಥ. ಇಲ್ಲೆಲ್ಲ ಸಮುದಾಯ ತನಗೆ ಬೇಕಾದ ಅಥವಾ ತನಗೆ ಅರ್ಥವಾಗುವ ಸಂಕೇತ ವ್ಯವಸ್ಥೆಯನ್ನು ರೂಪಿಸಿಕೊಂಡಿರುತ್ತದೆ. ಅದರೊಳಗೆ ಇರುವ ಮಂದಿಗೆ ಅವು ತಕ್ಷಣ ಸಂವಹನಗೊಳ್ಳುತ್ತವೆ.

**ಪ್ರದರ್ಶನ ಕಲೆಗಳು**: ಜಾನಪದ ಕ್ರೀಡೆಗಳು, ಕೃಷ್ಣ ಪಾರಿಜಾತ, ರಾಧನಾಟ, ಬೊಂಬೆಯಾಟ, ಕೋಲಾಟ, ಸುಗ್ಗಿ ಕುಣಿತ, ಮಂಡಲ ಕುಣಿತ, ಪೂಜಾ ಕುಣಿತ, ದುಡಿ ಕುಣಿತ ಮೊದಲಾದ ಜಾನಪದ ಪ್ರಕಾರಗಳು ತಮ್ಮ ಪ್ರೇಕ್ಷಕರೊಡನೆ ನೇರ ಸಂವಹನವನ್ನು ಸಾಧಿಸಿವೆ. ಯಕ್ಷಗಾನದಲ್ಲಿ ದೇವೇಂದ್ರ ಕುಳಿತ ಸಿಂಹಾಸನ (ಮುರುಕು ಕುರ್ಚಿ!)ದಲ್ಲಿಯೇ ತಾರಕಾಸುರನೂ ಕುಳಿತುಕೊಳ್ಳುತ್ತಾನೆಯಾದರೂ ಸಂವಹನ ದೃಷ್ಟಿಯಿಂದ ಅದು ಸಮಸ್ಯೆಯಾಗಿಲ್ಲ. ರಂಗಕ್ಕೆ ಒಂದು ಸುತ್ತು ಬಂದರೆ ಅದು ಪಾತಾಳದಿಂದ ಸ್ವರ್ಗಕ್ಕೆ ಮಾಡಿದ ಪ್ರಯಾಣವಾಗಿ ಬಿಡುತ್ತದೆ.

ಹೀಗೆ, ಮೇಲೆ ಹೇಳಿದ ನಾಲ್ಕು ರೀತಿಗಳಲ್ಲಿಯೂ ಮನುಷ್ಯರೇ ಪ್ರಧಾನವಾದ ಸಂವಹನ ವಿಧಾನವೊಂದು ರೂಪುಗೊಂಡಿದೆ. ಇಲ್ಲಿ ನಿಜವಾಗಲೂ ಮಾಧ್ಯಮಗಳಿಲ್ಲ. ಬದಲು ಪ್ರಕಾರಗಳಿವೆ ಅಥವಾ ಕೆಲವು ರೂಪಗಳಿವೆ. ನೋಡುವವರ ಮೇಲೆ ಅಥವಾ

ಕೇಳುವವರ ಮೇಲೆ ಇಲ್ಲಿ ಆಕ್ರಮಣ ಇಲ್ಲ. ನಿಷ್ಕ್ರಿಯ ಪ್ರೇಕ್ಷಕರೂ ಇಲ್ಲಿ ಇರುವುದಕ್ಕೆ ಸಾಧ್ಯವಿಲ್ಲ.

ಈ ಬಗೆಯ ಸಮುದಾಯ ಸಂವಹನ ವಿಧಾನವು 'ಮಾಧ್ಯಮ'ದ ಪರಿಕಲ್ಪನೆಯನ್ನು ನಿರಾಕರಿಸಿ, ಎಷ್ಟೇ ಪ್ರಭಾವಶಾಲಿಯಾಗಿದ್ದರೂ ಕಾಲ ಮತ್ತು ಸ್ಥಳಕ್ಕೆ ಬದ್ಧವಾಗಿರುವುದರಿಂದ ಕೆಲವು ಮಿತಿಗಳಿಗೆ ತಾನೇ ಒಳಗಾಗಿದೆ. ಒಂದು ನಿರ್ದಿಷ್ಟ ಜನಪದ ಸಮುದಾಯದೊಳಗೆ ಒಂದು ನಿರ್ದಿಷ್ಟಕಾಲದಲ್ಲಿ ಅರ್ಥಪೂರ್ಣವಾಗಿರುವ ಈ ಸಂವಹನ ವಿಧಾನವು, ಆ ಸಮುದಾಯದ ಹೊರಗಡೆಗೆ ತನ್ನ ಅರ್ಥವನ್ನು ಕಳೆದುಕೊಂಡು ಬಿಡುತ್ತದೆ. ಈ ಅರ್ಥದಲ್ಲಿ ಸಾರ್ವದೇಶಿಕವಾದ ಮತ್ತು ಸಾರ್ವಕಾಲಿಕವಾದ ಒಂದು ಸಂವಹನ ವಿಧಾನವನ್ನು ನಾವು ಜಾನಪದದಿಂದ ನಿರೀಕ್ಷಿಸುವಂತಿಲ್ಲ.

ಏನಿದ್ದರೂ ತಂತ್ರಜ್ಞಾನದಲ್ಲಾದ ಪ್ರಗತಿಯ ಪರಿಣಾಮವಾಗಿ ಮಾಧ್ಯಮಗಳು ಹೆಚ್ಚಿ, ಮಾನವ ಸಂಬಂಧಗಳು ಶಿಥಿಲವಾಗಿರುವ ಈ ಹೊತ್ತಿನಲ್ಲಿ ಜಾನಪದ ಸಂವಹನ ವಿಧಾನಗಳ ಬಗ್ಗೆ ಹೆಚ್ಚು ಚರ್ಚೆ ನಡೆಸುವುದು ಉಪಯುಕ್ತ. ಏಕೆಂದರೆ ಇಂಥ ಚರ್ಚೆಗಳಲ್ಲಿ ಯಂತ್ರಗಳಿರುವುದಿಲ್ಲ; ಬದಲು ಮನುಷ್ಯರಿರುತ್ತಾರೆ.

## ಪರಾಮರ್ಶನ ಕೃತಿಗಳು


1. ಚಿನ್ನಪ್ಪಗೌಡ ೧೯೯೦, ಭೂತಾರಾಧನೆ: ಜಾನಪದೀಯ ಅಧ್ಯಯನ; ಮಂಗಳಗಂಗೋತ್ರಿ: ಮದಿಪು ಪ್ರಕಾಶನ.
2. Babb L. A. 1975, The Devine Hierarchy; Newyork: Columbia university press.
3. Carstairs G. M. and R. L. Kapur 1976, The Great universe of Kota; London: The Hogarth press.
4. Dumont L. 1959, Possession and priesthood [In, Contributions to Indian Sociology 3: 55-74]. Delhi; Sage Publications.
5. Harper E.1957, Shamanism in south India In Southwestern journal of Anthropology 13: 267-288).

# ನಮ್ಮ ಸಂಸ್ಕೃತಿ ಮತ್ತು ವಿದ್ಯುನ್ಮಾನ ಮಾಧ್ಯಮಗಳು

ಸಿ. ಪಿ. ರವಿಕುಮಾರ್

ಕಂಪ್ಯೂಟರ್ ಬಳಕೆಯಿಂದ ನಿಮ್ಮ ಜೀವನದ ಮೇಲೆ ಉಂಟಾದ ಪರಿಣಾಮವೇನೆಂದು ನಾನು ನನ್ನ ಅನೇಕ ಮಿತ್ರರನ್ನು ಪ್ರಶ್ನಿಸಿದ್ದೇನೆ, ಕೆಲವರನ್ನು ಮುಖತಃ ಮತ್ತು ಕೆಲವರನ್ನು ಎಲೆಕ್ಟ್ರಾನಿಕ್ ಮೆಯಿಲ್ ಮೂಲಕ. ಈ ಪ್ರಶ್ನಾವಳಿಯಿಂದ ಸ್ವಾರಸ್ಯಕರ ಉತ್ತರಗಳು ಹೊರಬಂದಿವೆ. ಅಮೆರಿಕದಲ್ಲಿ ನೆಲಸಿರುವ ನನ್ನ ಮಿತ್ರರನ್ನು ಕಂಪ್ಯೂಟರ್ ನೆಟ್‌ವರ್ಕ್ ಮೂಲಕ ಸಂಪರ್ಕಿಸಿದಾಗ ಅವರೆಲ್ಲರೂ ಒಕ್ಕೊರಲಿನಲ್ಲಿ ಕಂಪ್ಯೂಟರ್ ಬಳಕೆ ತಮ್ಮ ಕಾರ್ಯರೂಪವನ್ನು ಸುಧಾರಿಸಿದೆಯೆಂದು ಅಭಿಪ್ರಾಯಪಟ್ಟರು. ಇವರೆಲ್ಲರೂ ಆಧುನಿಕ ತಂತ್ರಜ್ಞಾನದ ಮುಂಚೂಣಿಯಲ್ಲಿ ಕೆಲಸ ಮಾಡುತ್ತಿರುವ ಬುದ್ಧಿಜೀವಿಗಳು. ನಾನು ಇದೇ ಪ್ರಶ್ನೆಯನ್ನು ನನ್ನ ಮಾನವ ಶಾಸ್ತ್ರಜ್ಞ ಮಿತ್ರರಿಗೆ ಹಾಕಿದಾಗ ಅವರಿಂದ ಬಂದ ಉತ್ತರದಲ್ಲಿ ಕೆಲವಾದರೂ ಒಡಕು ಧ್ವನಿಗಳಿದ್ದವು.

ನನ್ನ ಪ್ರಶ್ನಾವಳಿಯಲ್ಲಿ ನಾನು ಮುಖ್ಯವಾಗಿ ಎತ್ತಿದ ಪ್ರಶ್ನೆಗಳು: ೧) ಕಂಪ್ಯೂಟರ್ ನಿಮಗೆ ಅತ್ಯಂತ ಪರಿಣಾಮಕಾರಿಯಾದ ರೀತಿಯಲ್ಲಿ ಉಪಯೋಗವಾಗುತ್ತಿರುವುದು ಹೇಗೆ? ೨) ಕಂಪ್ಯೂಟರ್ ಗ್ರಾಫಿಕ್ಸ್, ಮಲ್ಟಿಮೀಡಿಯಾ, ವರ್ಚುಯಲ್ ರಿಯಾಲಿಟಿ ಮೊದಲಾದ ತಂತ್ರಜ್ಞಾನಗಳನ್ನು ನೀವು ಬಳಸುತ್ತಿದ್ದೀರಾ? ಸಾಹಿತ್ಯ ಮತ್ತು ಕಲಾಪ್ರಕಾರಗಳ ಮೇಲೆ ಇವು ಹೇಗೆ ಪರಿಣಾಮ ಬೀರಿವೆ? ೩) ಕಂಪ್ಯೂಟರ್ ಒಟ್ಟಾರೆಯಾಗಿ ನಿಮ್ಮ ಮೇಲೆ ಬೀರಿದ ಪರಿಣಾಮ ಧನಾತ್ಮಕವಾದದ್ದೇ, ಇಲ್ಲವೇ?

ಕಂಪ್ಯೂಟರ್‌ಗೆ ಹೆಚ್ಚು ಕಡಿಮೆ ಗುಲಾಮರಾಗಿಬಿಟ್ಟಿರುವಂತೆ ಕೆಲವು ಮಿತ್ರರು ಉತ್ತರಿಸಿದ್ದಾರೆ. ಇವರೆಲ್ಲರೂ ಕಂಪ್ಯೂಟರ್ ತಮ್ಮ ಜೀವನದ ಅವಿಭಾಜ್ಯ ಅಂಗವೆಂದು ಒಪ್ಪುತ್ತಾರೆ. ಮುಖ್ಯವಾಗಿ ವರ್ಡ್‌ಪ್ರೊಸೆಸಿಂಗ್, ಎಲೆಕ್ಟ್ರಾನಿಕ್ ಮೆಯಿಲ್ ಮತ್ತು ಸ್ಪ್ರೆಡ್‌ಶೀಟ್ ಇವುಗಳಿಲ್ಲದೆ ತಮ್ಮ ದೈನಂದಿನ ಬದುಕು ಸಾಧ್ಯವೇ ಇಲ್ಲವೆಂದು ಇವರ ಖಚಿತ ಅಭಿಪ್ರಾಯ. ತಾವು ಬರೆಯುವ ಸಂಶೋಧನಾತ್ಮಕ ಪ್ರಬಂಧಗಳು ಮಾತ್ರವಲ್ಲ, ಮಿತ್ರರಿಗೆ ಬರೆಯುವ ಪತ್ರಗಳಿಗೂ ಕಂಪ್ಯೂಟರ್ ಬಳಕೆ ಅನಿವಾರ್ಯವೆಂಬ ಘಟ್ಟವನ್ನು ಇವರು ಮುಟ್ಟಿದ್ದಾರೆ. ಈ ಗುಂಪಿಗೆ ನಾನೂ ಸೇರುವುದರಿಂದ ಈ ಅವಲಂಬನವನ್ನು ಅರ್ಥ ಮಾಡಿಕೊಳ್ಳಬಲ್ಲೆ.

ವರ್ಡ್‌ಪ್ರೊಸೆಸಿಂಗ್ ಇಂದು ಅನೇಕ ಘಟ್ಟಗಳನ್ನೇರಿ ಒಂದು ಹಂತವನ್ನು ಮುಟ್ಟಿರುವ ಕಂಪ್ಯೂಟರ್ ಸಾಧನ. ನಾನು ಮೊದಲು ವರ್ಡ್‌ಪ್ರೊಸೆಸರ್ ಬಳಸಿದ್ದು ೧೯೮೪ರಲ್ಲಿ.

ಆಗಿನ ವರ್ಡ್‌ಪ್ರೊಸೆಸರ್ ನಾವು ಬರೆದ ಲೇಖನವನ್ನು ಎರಡೂ ಮಗ್ಗುಲಲ್ಲಿ ನಾವು ಬೇಕೆನ್ನಿಸಿದಷ್ಟು ಖಾಲಿ ಸ್ಥಳ ಬಿಟ್ಟು ಒಪ್ಪವಾಗಿ ತಿದ್ದಿ ಬರೆಯುವ ಸಾಧನ ಮಾತ್ರವಾಗಿತ್ತು. ಇದಲ್ಲದೆ ನಾವು ಕಾಗುಣಿತ ತಪ್ಪಿದರೆ ಅದನ್ನು ಬೆರಳು ಮಾಡಿ ತೋರಿಸುವುದು, ನಾವು ಆರಿಸಿದ ಪದಗಳ ಕೆಳಗೆ ಗೀಟು ಹಾಕಿ ಅವುಗಳನ್ನು ಪ್ರಮುಖವಾಗಿ ತೋರಿಸಲು ನೆರವಾಗುವುದು, ಇಂಥ ಸೌಲಭ್ಯಗಳೂ ಇದ್ದವು. ಆದರೆ ಯಾವುದೇ ಪರಿಶೋಧನಾತ್ಮಕ ಲೇಖನದಲ್ಲೂ ಜರೂರಾಗಿ ಬೇಕಾಗುವ ಈ ಕೆಲವು ಸೌಲಭ್ಯಗಳು ಅದರಲ್ಲಿ ದೊರೆಯುತ್ತಿರಲಿಲ್ಲ.

೧) ಚಿತ್ರಗಳು, ಪಟ್ಟಿಗಳು ಮತ್ತು ಗಣಿತ ಸೂತ್ರಗಳನ್ನು ಲೇಖನದಲ್ಲಿ ಅಳವಡಿಸಿ ಕೊಳ್ಳುವುದು.

೨) ಲೇಖನದ ಕೊನೆಯಲ್ಲಿ ಆಕರಗಳ ಪಟ್ಟಿಯನ್ನು ನಮೂದಿಸುವುದು.

೩) ಗಣಿತದ ಸೂತ್ರಗಳಿಗಾಗಿ ಅಥವಾ ಬೇರಾವ ಸೌಂದರ್ಯ ಪ್ರಜ್ಞೆಗನುಸಾರವಾಗಿ ವಿವಿಧ ಬೆರಳಚ್ಚುಗಳನ್ನು ಬಳಸುವುದು. (ಉದಾಹರಣೆಗೆ ಐಟಾಲಿಕ್ಸ್ ಬಳಕೆ)

ಇಂದು ಬಳಸಲಾಗುತ್ತಿರುವ ವರ್ಡ್‌ಪ್ರೊಸೆಸರ್‌ಗಳಲ್ಲಿ ಮೇಲಿನ ಎಲ್ಲಾ ಸೌಲಭ್ಯಗಳೂ ಉಂಟು. ಹೀಗಾಗಿ ಲೇಖನದ ತಯಾರಿಕೆಯಲ್ಲಿ ಲೇಖಕ ಹೆಚ್ಚಿನ ಆಸಕ್ತಿ ವಹಿಸಿ ಹೆಚ್ಚು ಸೃಜನಶೀಲನಾಗಿ ಕೆಲಸ ಮಾಡುವ ಸಾಧ್ಯತೆಯಿದೆ. ಹಿಂದೆ ತನ್ನ ಲೇಖನದ ವಿನ್ಯಾಸ ಹೇಗೆ ಮೂಡುವುದೋ ಎಂಬುದನ್ನರಿಯದ ಲೇಖಕ ಹೆಚ್ಚೂ ಕಡಿಮೆ ಬೆರಳಚ್ಚು ಗಾರನ ಕೃಪಾಧೀನನಾಗಿ ಬರೆಯಬೇಕಾಗಿದ್ದ ಸಂದರ್ಭ ಇಂದು ತಿರುಗುಮುರುಗಾಗಿದೆ. ಹೀಗಾಗಿ ಇಂದು ಬಹಳಷ್ಟು ಮಂದಿ ಪ್ರಕಾಶಕರು ಲೇಖಕರಿಗೇ ಕಂಪ್ಯೂಟರ್ ಬೆರಳಚ್ಚು ಕಾರ್ಯವನ್ನು ವಹಿಸಿಕೊಡುತ್ತಿದ್ದಾರೆ. ಸ್ಟಾನ್‌ಫೋರ್ಡ್ ಯೂನಿವರ್ಸಿಟಿಯ ಪ್ರೊ|| ಡಾನ್ ಕ್ನೂತ್ (D. E. Knuth) ಕಂಪ್ಯೂಟರ್ ಬೆರಳಚ್ಚು ಪದ್ಧತಿಯೊಂದನ್ನು ರೂಪಿಸಿ ಅದನ್ನು ಕಂಪ್ಯೂಟರ್ ನೆಟ್‌ವರ್ಕ್ ಮೂಲಕ ಜಗತ್ತಿನ ಎಲ್ಲಾ ನೆಟ್‌ವರ್ಕ್ ಬಳಕೆದಾರರಿಗೂ, ಯಾವ ಖರ್ಚು ವೆಚ್ಚವೂ ಇಲ್ಲದಂತೆ ಲಭ್ಯವಾಗುವ ಏರ್ಪಾಟು ಮಾಡಿದರು (ಹೀಗೆ ಲಭ್ಯ ವಾಗುವ ಸಾಫ್ಟ್‌ವೇರ್‌ಗೆ Public Domain ಸಾಫ್ಟ್‌ವೇರ್ ಎಂದೂ ಕರೆಯುತ್ತಾರೆ.) ಕ್ನೂತ್ ಅವರ "Tex" ಪದ್ಧತಿಯು ಒಂದು ಕ್ರಾಂತಿಯನ್ನೇ ಉಂಟುಮಾಡಿತೆಂದರೆ ಅತಿಶಯೋಕ್ತಿಯಾಗಲಾರದು. ಗಣಿತಜ್ಞರಿಗಂತೂ "Tex" ವರದಾನದಂತೆ ಕಂಡು ಬಂತು; ತಮ್ಮ ಗಣಿತ ಸೂತ್ರಗಳು ತಪ್ಪಾಗಿ ಅಚ್ಚಾಗದಂತೆ, ಅವರು ಈಗ ತಾವೇ ಬೆರಳಚ್ಚನ್ನು ಸಂಯೋಜನೆ ಮಾಡಲು ಸಾಧ್ಯ.

ಲೇಸರ್ ಪ್ರಿಂಟಿಂಗ್ ಎಂಬ ಸಾಧನವೂ ಪ್ರಕಾಶನ ಜಗತ್ತಿನಲ್ಲಿ ಒಂದು ಕ್ರಾಂತಿ ಯುಂಟಾಗಲು ಸಹಾಯ ಮಾಡಿತು. ನಾನು ೧೯೮೪ ರಲ್ಲಿ ಗಣಕಗಳನ್ನು ಮೊದಲ ಬಾರಿಗೆ ಉಪಯೋಗಿಸಲು ಪ್ರಾರಂಭಿಸಿದಾಗ ಇದ್ದದ್ದು 'ಲೈನ್ ಪ್ರಿಂಟಿಂಗ್' ಎಂಬ ತಂತ್ರ ಜ್ಞಾನ. ಪ್ರತಿಯೊಂದು ಸಾಲನ್ನೂ ಅಚ್ಚು ಮಾಡಿ ನಂತರ ಮುಂದಿನ ಸಾಲನ್ನು ಅಚ್ಚು

ಮಾಡುವ ನಿಧಾನಗತಿಯು ಈ ತಂತ್ರಜ್ಞಾನಕ್ಕೆ ಸವಾಲಾಗಿ ಬಂದ ಲೇಸರ್ ಮುದ್ರಣವು 'ಪೇಜ್ ಪ್ರಿಂಟಿಂಗ್' ತಂತ್ರಜ್ಞಾನವನ್ನು ಮಾರುಕಟ್ಟೆಗೆ ಸುಲಭ ಬೆಲೆಯಲ್ಲಿ ತಂದಿತು.

ಲೇಸರ್ ಮುದ್ರಣ ಹೆಚ್ಚು ಸುಂದರವಷ್ಟೇ ಅಲ್ಲ, ಚಿತ್ರ ಮತ್ತಿನ್ನಿತರ ಲೇಖನ ಸಾಮಗ್ರಿಗಳನ್ನು ಮುದ್ರಿಸಲು ಸೂಕ್ತ. ಉದಾಹರಣೆಗೆ ಲೇಖನದಲ್ಲಿ ಒಂದು ಛಾಯಾ ಚಿತ್ರವನ್ನು ಬಳಸಿಕೊಳ್ಳುವುದು ಲೇಸರ್ ಮುದ್ರಣದ ಕಾರಣದಿಂದ ಸಾಧ್ಯವಾಗಿದೆ.

ಕಂಪ್ಯೂಟರ್ ಉಪಯೋಗಿಸಿ ಲೇಖನ ಬರೆಯುವುದಕ್ಕೂ (ನಾನು ಈಗ ಬರೆಯು ತ್ತಿರುವ ಹಾಗೆ) ಹಾಳೆಯ ಮೇಲೆ ಲೇಖನಿಯಿಂದ ಬರೆಯುವುದಕ್ಕೂ ಏನಾದರೂ ಮೂಲ ಭೂತ ವ್ಯತ್ಯಾಸಗಳಿವೆಯೆ? ಮುಖ್ಯವಾಗಿ ಲೇಖನವನ್ನು ತಿದ್ದುಪಡಿ ಮಾಡುವುದು ವರ್ಡ್‌ಪ್ರೊಸೆಸರ್ ಸಹಾಯದಿಂದ ಬಹಳ ಸುಲಭವಾದ ಕೆಲಸ. ಹೀಗಾಗಿ ನಾವು ಬರೆ ಯಲು ಕುಳಿತಾಗ ಲೇಖನದ ವಾಕ್ಯಗಳನ್ನು ಕತ್ತರಿಸುವುದೋ, ಸ್ಥಳಾಂತರಿಸುವುದೋ, ತಿದ್ದುವುದೋ ಮಾಡಬೇಕಾದಲ್ಲಿ ಕಿರಿಕಿರಿಯಾಗುತ್ತದೆ. ಪ್ರಸಿದ್ಧ ಚಲನಚಿತ್ರ ಕಥಾಲೇಖಕ ಅರ್ನೆಸ್ಟ್ ಲೆಹ್‌ಮಾನ್–ದಿ ಸೌಂಡ್ ಆಫ್ ಮ್ಯೂಸಿಕ್ ಮೊದಲಾದ ಚಿತ್ರಗಳಿಗೆ ಕತೆ ಗಳನ್ನು ಬರೆದವರು–ಚಿತ್ರಕತೆಯನ್ನು ಟೈಪ್ ಮಾಡುವಾಗ ಒಂದೇ ಒಂದು ತಪ್ಪಾದರೂ ಇಡೀ ಪುಟವನ್ನು ಮರು ಟೈಪು ಮಾಡುತ್ತಿದ್ದರಂತೆ. ಇಂಥ ಕಷ್ಟ ಈಗಿನ ಚಿತ್ರಕಥಾ ಲೇಖಕರಿಗೆ ಇರುವುದಿಲ್ಲ. ಅವರು ಕಂಪ್ಯೂಟರ್ ಬಳಸಿ ಲೀಲಾಜಾಲವಾಗಿ ಕತೆ ತಯಾರಿಸ ಬಹುದು! ಅಷ್ಟೇ ಅಲ್ಲ, ತಮ್ಮ ಕತೆಗೆ ಪೂರಕವಾಗಿ ದೃಶ್ಯದ ವರ್ಣನೆಯನ್ನು ರೇಖಾಚಿತ್ರದ ಮೂಲಕವೋ ಛಾಯಾಚಿತ್ರದ ಮೂಲಕವೋ ತಮ್ಮ ಲೇಖನದಲ್ಲೇ ಅಡಕ ಗೊಳಿಸಬಹುದು.

ನಾವು, ಕಂಪ್ಯೂಟರ್ ಇಲ್ಲದೆ ಬದುಕೇ ಇಲ್ಲವೆಂದು ಭ್ರಮಿಸಿರುವ ಕೆಲವು ಮಿತ್ರರು, ಈ ಬಗ್ಗೆ ಆಗಾಗ ಮಾತಾಡಿಕೊಳ್ಳುತ್ತಿರುತ್ತೇವೆ. ಹಳೆಯ ತಲೆಮಾರಿನ ನಮ್ಮ ಸಹೋದ್ಯೋಗಿಗಳು ಲಾಂಗ್‌ಹ್ಯಾಂಡ್‌ನಲ್ಲಿ ಕಾಗದ ಪತ್ರಗಳನ್ನು ಲೇಖನಗಳನ್ನು ಬರೆದು ಟೈಪ್ ಮಾಡಿಸುವ ಅಭ್ಯಾಸವುಳ್ಳವರು ಒಟ್ಟಾರೆ ನಮಗಿಂತ ಹೆಚ್ಚು ಸಮಯ ತೆಗೆದು ಕೊಳ್ಳುತ್ತಾರೋ ಅಥವಾ ನಾವೇ ಕಂಪ್ಯೂಟರೀಕರಣದ ಕಾರಣ ಹೆಚ್ಚು ಸಮಯ ತೆಗೆದು ಕೊಳ್ಳುತ್ತೇವೋ? ತಾನು ಮಾಡಿದ್ದು ಉತ್ತಮವೆನ್ನುವ ಗಾದೆ ಇಲ್ಲಿ ಸಲ್ಲುತ್ತದೆ. ನಾನೇ ನನ್ನ ರಿಪೋರ್ಟನ್ನು ತಯಾರಿಸಿದಾಗ ಅದರ ಅಚ್ಚುಕಟ್ಟು, ಒಪ್ಪಓರಣವನ್ನು ನಿಯಂತ್ರಿಸು ವುದು ಸಾಧ್ಯ. ಕಂಪ್ಯೂಟರ್ ಸಹಾಯದಿಂದ ಇದು ಇನ್ನೂ ಸುಲಭ. ಟೈಪಿಸ್ಟನ ಕೃಪಾಧೀನರಾಗಿ ಅವನ ಬಳಿ ಕುಳಿತು ತಪ್ಪುಗಳನ್ನು ತಿದ್ದುವ/ತಿದ್ದಿಸುವ ಕೆಲಸ ಕಷ್ಟ ಹಾಗೂ ಸಮಯದ ನಷ್ಟ.

ಎಲೆಕ್ಟ್ರಾನಿಕ್ ಮೆಯಿಲ್ ಒದಗಿಸುವ ಸೌಕರ್ಯವೂ ಬಹಳ ಬೇಗ ಕಂಪ್ಯೂಟರ್‌ಗೆ ಅಂಟಿಕೊಂಡು ಬಿಡುವಂತೆ ಪ್ರೇರಿಸುತ್ತದೆ ಎಂದು ನನ್ನ ಹಾಗೂ ನನ್ನ ಸಹೋದ್ಯೋಗಿಗಳ

ಅಭಿಪ್ರಾಯ. ಟೆಲಿಫೋನ್‌ನಲ್ಲಿ ಅಥವಾ ಕಾಗದ ಪತ್ರಗಳ ಮೂಲಕ ಸಂಭಾಷಣೆ ನಡೆಸುವುದಕ್ಕೂ ಎಲೆಕ್ಟ್ರಾನಿಕ್ ಮೆಯಿಲ್ ಮೂಲಕ ಸಂಭಾಷಿಸುವುದಕ್ಕೂ ಮುಖ್ಯ ವ್ಯತ್ಯಾಸವೆಂದರೆ ಎಲೆಕ್ಟ್ರಾನಿಕ್ ಮೆಯಿಲ್ ಒದಗಿಸುವ ಸೌಕರ್ಯ. ಕಂಪ್ಯೂಟರ್ ಮೇಲೆ ನಾನು ಬಂದು ಕುಳಿತಾಗ ಮೊದಲು ನೋಡುವುದು ನನ್ನ ದೈನಂದಿನ ಎಲೆಕ್ಟ್ರಾನಿಕ್ ಮೆಯಿಲ್ ಬಾಕ್ಸ್‌ನಲ್ಲಿ ಏನಾದರೂ ಪತ್ರಗಳಿವೆಯೇ ಎಂದು. ಇಂಥ ಪತ್ರಗಳ ಉದಾಹರಣೆ–

೧) ನನ್ನ ಮಿತ್ರನೊಬ್ಬ ನನಗೆ ಮುಖ್ಯವಾದ ಕಾನ್ಫರೆನ್ಸ್ ಒಂದರ ಬಗ್ಗೆ ಕಳಿಸಿದ ಮಾಹಿತಿ.

೨) ನಾನು ರೆವ್ಯೂ ಮಾಡುತ್ತಿರುವ ಲೇಖನದ ಬಗ್ಗೆ ಪತ್ರಿಕೆಯ ಸಂಪಾದಕರಿಂದ ವಿಚಾರಣೆ.

೩) ಇತ್ತೀಚೆಗೆ ಪ್ರಕಟವಾದ ನನ್ನ ಯಾವುದೋ ಲೇಖನದ ರೀಪ್ರಿಂಟ್ ಕಳಿಸುತ್ತೀರಾ ಎಂಬ ಯಾಚನೆ.

೪) ನಾನು ಕೋರಿದ ಲೇಖನವನ್ನು 'ಈ ಪತ್ರದೊಂದಿಗೆ ಇರಿಸಿದ್ದೇನೆ' ಎಂಬ ಒಕ್ಕಣಿಕೆಯೊಂದಿಗೆ ಅಡಕಗೊಳಿಸಿದ ಪತ್ರ.

ಮೇಲ್ಕಂಡ ಪತ್ರ ವ್ಯವಹಾರವನ್ನು ಮಾಮೂಲು ಅಂಚೆಯ ಮೂಲಕವೂ ಮಾಡಲು ಸಾಧ್ಯ. ಆದರೆ ಅದು ನಿಧಾನ; ಅಂತರರಾಷ್ಟ್ರೀಯ ಅಂಚೆ. ಎರಡು ವಾರವಾದರೂ ಆದೀತು ತಲುಪುವುದಕ್ಕೆ. ಎಲೆಕ್ಟ್ರಾನಿಕ್ ಮೆಯಿಲ್ ಮೂಲಕ ಎರಡೂ ಕಡೆಯ ಪತ್ರಗಳು ಎರಡೇ ದಿನಗಳಲ್ಲಿ ಅಥವಾ ಅದಕ್ಕೂ ಕಡಿಮೆ ಅವಧಿಯಲ್ಲಿ ವಿಲೇವಾರಿಯಾಗುತ್ತವೆ. ಟೆಲಿಫೋನ್ ಸಂಭಾಷಣೆಗೆ ಹೋಲಿಸಿದರೆ ಇದು ನಿಧಾನವೇ. ಆದರೆ ಲೇಖನಗಳ ವಿಲೇವಾರಿ, ವಿವರವಾದ ಮಾಹಿತಿಗಳ ಪರಸ್ಪರ ಆದಾನ ಪ್ರದಾನ ಇವೆಲ್ಲಾ ಟೆಲಿಫೋನ್ ಮೂಲಕ ಅಸಂಭವ. ಈಚೆಗೆ ಎಲೆಕ್ಟ್ರಾನಿಕ್ ಮೆಯಿಲ್ ಹೊಸ ಸ್ವರೂಪಗಳನ್ನು ಪಡೆದುಕೊಳ್ಳುತ್ತಿದೆ. ಕೇವಲ ಟೆಕ್ಸ್ಟ (Text) ಮಾತ್ರವಲ್ಲದೆ ಧ್ವನಿಯನ್ನೂ ಕಂಪ್ಯೂಟರ್ ನೆಟ್‌ವರ್ಕ್ ಮೂಲಕ ಸಂವಹಿಸುವ ತಂತ್ರಜ್ಞಾನ ರೂಪುಗೊಂಡಿದೆ. ಇದಕ್ಕೆ ವಾಯ್ಸ್ ಮೆಯಿಲ್ ಎಂದೂ ಅನ್ನುತ್ತಾರೆ. ಇದೇ ಪ್ರಕಾರ ಸ್ಥಿರಚಿತ್ರಗಳನ್ನೂ ಚಲಚ್ಚಿತ್ರಗಳನ್ನೂ ಕೂಡಾ ಈಗ ನೆಟ್‌ವರ್ಕ್ ಮೂಲಕ ಸಂವಹಿಸಬಹುದಾಗಿದೆ.

ಲಿಖಿತ ಸಂದೇಶ (Text), ಧ್ವನಿ, ಸ್ಥಿರ ಹಾಗೂ ಚಲನಚಿತ್ರಗಳನ್ನೆಲ್ಲವನ್ನೂ ಒಂದೇ ಮಾಧ್ಯಮದಲ್ಲಿ ಸಮಾವೇಶಗೊಳಿಸಿದಾಗ ಸೃಷ್ಟಿಯಾಗುವುದು 'ಮಲ್ಟಿಮೀಡಿಯಾ' (Multimedia). ಇತ್ತೀಚೆಗೆ ಮಲ್ಟಿಮೀಡಿಯಾ ಅನೇಕ ಹೊಸ ಸಾಧ್ಯತೆಗಳನ್ನು ಕಲಾವಿದರಿಗೆ, ಲೇಖಕರಿಗೆ ತೋರಿಸಿಕೊಟ್ಟಿದೆ. ಕೆಲವು ಉದಾಹರಣೆಗಳನ್ನು ಗಮನಿಸೋಣ.

೧) ನನ್ನ ಮಿತ್ರರಾದ ಪ್ರೊ|| ಡಾನ್ ನ್ಯೂಮನ್ (ಯೂನಿವರ್ಸಿಟಿ ಆಫ್ ವಾಷಿಂಗ್‌ಟನ್, ಸಿಯಾಟಲ್) ಜಾಗತಿಕ ಸಂಗೀತಶಾಸ್ತ್ರದಲ್ಲಿ (Ethnomusicology)

ಅಧ್ಯಯನ ನಡೆಸುತ್ತಿದ್ದಾರೆ. ಭಾರತೀಯ ಸಂಗೀತ, ಅದರಲ್ಲೂ ರಾಜಸ್ಥಾನದ ಪ್ರಾದೇಶಿಕ ಸಂಗೀತವನ್ನು ಕುರಿತು ಅವರಿಗೆ ವಿಶೇಷ ಆಸಕ್ತಿಯಿದೆ. ಈ ಪ್ರಾದೇಶಿಕ ಸಂಗೀತವನ್ನು ಕುರಿತು ಒಂದು ಸೆಮಿನಾರ್ ಕೊಡಬೇಕಾಗಿ ಬಂದಾಗ ರಾಜಸ್ಥಾನೀ ಸಂಗೀತದ ತುಣುಕುಗಳನ್ನು ಕ್ಯಾಸೆಟ್‌ಗಳ ಮೇಲೆ ಧ್ವನಿ ಮುದ್ರಿಸಿಕೊಳ್ಳಬೇಕು. ರಾಜಸ್ಥಾನೀ ವಾದ್ಯಗಳ ಚಿತ್ರಗಳನ್ನು ಸ್ಲೈಡ್‌ಗಳಲ್ಲಿ ಸೆರೆ ಹಿಡಿದಿಡಬೇಕು. ಪ್ರಾದೇಶಿಕ ಸಂಗೀತವನ್ನು ಯಾರು ಹಾಡುತ್ತಾರೆ, ವಾದ್ಯದ ಪ್ರಯೋಗ ಹೇಗೆ ಎಂಬುದನ್ನು ವ್ಯಾಖ್ಯಾನಿಸಲು ವಿಡಿಯೋ ಕ್ಲಿಪಿಂಗ್ಸ್ ಬಳಸಬೇಕು. ಉಪನ್ಯಾಸ ನೀಡಬೇಕಾದಾಗ ಈ ಎಲ್ಲಾ ಮಾಧ್ಯಮಗಳನ್ನೂ ಸಮಯೋಚಿತವಾಗಿ ಮಿಡಿಸಿಕೊಳ್ಳಬೇಕು. ಹೀಗಿರುವಾಗ ಈ ಎಲ್ಲಾ ಮಾಧ್ಯಮಗಳನ್ನೂ ಒಂದೇ ಕಂಪ್ಯೂಟರ್‌ನಲ್ಲಿ ಅಳವಡಿಸುವ ತಂತ್ರಜ್ಞಾನ ಒಂದು ವರದಾನವಾಗಿ ಕಾಣುತ್ತದೆ. "ಮಲ್ಟಿಮೀಡಿಯಾ ಪ್ರೆಸೆಂಟೇಷನ್" ಎಂಬ ಹೆಸರುಳ್ಳ ತಂತ್ರಜ್ಞಾನ ವಿವಿಧ ಮಾಧ್ಯಮಗಳ ಜೊತೆಗಳನ್ನು ಒಂದೇ "Document"ನಲ್ಲಿ ಹಿಡಿದಿಡುವ ಸಾಧ್ಯತೆಯನ್ನು ತೋರಿಸಿಕೊಟ್ಟಿದೆ.

೨) 'ದೃಶ್ಯಕಾವ್ಯ' ಎಂಬ ಮಾತನ್ನು ನಾವು ಆಗಾಗ ಕೇಳುತ್ತಿರುತ್ತೇವೆ. ಕಾವ್ಯವನ್ನೇ ದೃಶ್ಯ ಮತ್ತು ಧ್ವನಿಮಾಧ್ಯಮಗಳೊಂದಿಗೆ ರಚಿಸುವ ಸಾಧ್ಯತೆಯನ್ನು ಮಲ್ಟಿಮೀಡಿಯಾ ಒದಗಿಸುತ್ತದೆ. ಇಂಥ ಸಾಧ್ಯತೆಯೊಂದಿಗೆ "ಹಕ್ಕಿ ಹಾರುತಿದೆ ನೋಡಿದಿರಾ?", "ಜೇಡಮದ್ದಳೆ," "ಕವನ ಹುಟ್ಟುವ ಸಮಯ," "ಬೆಳಗು" ಮುಂತಾದ ಕವನಗಳನ್ನು ಕಂಪ್ಯೂಟರ್ ತೆರೆಯ ಮೇಲೆ ಓದುವುದು ಮಾತ್ರವಲ್ಲ, ಕೇಳುವ ಮತ್ತು ನೋಡುವ ಅವಕಾಶವೂ ಸಿಗಬಹುದು! ವಿವಿಧ ದೃಶ್ಯ ಹಾಗೂ ವಾಕ್ ಪರಿಣಾಮಗಳೊಂದಿಗೆ ಈ ಕವಿತೆಗಳ ಧ್ವನ್ಯ ಪರಿಣಾಮ ಮತ್ತಷ್ಟು ಹೆಚ್ಚುವುದೋ? ಕುತೂಹಲಕಾರೀ ಪ್ರಶ್ನೆ!

೩) ಈಗ ಲಭ್ಯವಾಗುತ್ತಿರುವ ಪತ್ರಿಕೆಗಳಲ್ಲಿ ಸಾಹಿತ್ಯ ಮತ್ತು ವೃತ್ತಾಂತಗಳನ್ನು ಲಿಖಿತ ಹಾಗೂ ಚಿತ್ರ ಮಾಧ್ಯಮಗಳೊಂದಿಗೆ ಮಾತ್ರ ನೋಡಬಹುದು. ಮುಂದೆ ಬರಬಹುದಾದ ಎಲೆಕ್ಟ್ರಾನಿಕ್ ಪತ್ರಿಕೆಗಳಲ್ಲಿ ಧ್ವನಿ ಮತ್ತು ಚಲಚ್ಚಿತ್ರಗಳೂ ಅಡಕಗೊಳ್ಳುವ ವಿಸ್ಮಯಕಾರಿ ಸಾಧ್ಯತೆಯಿದೆ.

* * *

"ಡೇಟಾಬೇಸ್" ಅಥವಾ ವಿಷಯ ಸಂಗ್ರಹಾಲಯ, ಕಂಪ್ಯೂಟರ್ ನೀಡುವ ಅತ್ಯಂತ ಪರಿಣಾಮಕಾರೀ ಉಪಕರಣವೆಂದು ನನ್ನ ಅನೇಕ ಜನ ಸ್ನೇಹಿತರು ಅಭಿಪ್ರಾಯ ಪಟ್ಟಿದ್ದಾರೆ. ಉದಾಹರಣೆಗೆ Ethnomusicology ವಿಭಾಗದಲ್ಲಿ ಕೆಲಸ ಮಾಡುತ್ತಿರುವ ಡಾ|| ಶುಭಾ ಚೌಧುರಿ ತಮ್ಮ ಕೆಲಸದಲ್ಲಿ ಡೇಟಾಬೇಸ್ ಇಲ್ಲದೆ ಏನೂ ಸಾಧಿಸಲಾಗದೆಂದು ಅಭಿಪ್ರಾಯ ಪಡುತ್ತಾರೆ. ಡೇಟಾಬೇಸ್ ಮೂಲಕ ನಾವು ಸಾಧಿಸಬಹುದಾದದ್ದೇನು ಎಂಬುದನ್ನು ಅರ್ಥ ಮಾಡಿಕೊಳ್ಳಲು ಒಂದು ಉದಾಹರಣೆ ನೋಡೋಣ. ಜನಪದ ಕತೆಗಳ ಒಂದು

ಡೇಟಾಬೇಸ್ ತಯಾರಿಸಲಾಗಿದೆ ಎಂದುಕೊಳ್ಳೋಣ. ಕತೆಯ ಜನ್ಮಸ್ಥಾನ, ಯಾರಿಂದ ಈ ಕತೆಯನ್ನು ಕೇಳಿದ್ದು, ಕತೆಯು ಹುಟ್ಟಿಕೊಂಡ ಕಾಲದ ಊಹೆ, ಕತೆಯ ಮುಖ್ಯ ಪಾತ್ರಗಳು, ಕತೆಯ ಮುಖ್ಯ ಲಕ್ಷಣಗಳು ಇವುಗಳನ್ನು ಡೇಟಾಬೇಸ್‌ನಲ್ಲಿ ಸಂಗ್ರಹಿಸಿಡ ಬಹುದು. ಇಂಥ ಸಂಗ್ರಹವಿದ್ದರೆ ಕೆಳಕಂಡ ಪ್ರಶ್ನೆಗಳಿಗೆ ಕಂಪ್ಯೂಟರ್ ಉತ್ತರ ಹುಡುಕಬಲ್ಲುದು:

೧) ಮಾಟಗಾತಿಯ ಪಾತ್ರವುಳ್ಳ ಜಪಾನೀ ಹಾಗೂ ಭಾರತೀಯ ಕತೆಗಳನ್ನು ಹೆಸರಿಸು.

೨) ಪೌರಾಣಿಕ ಅಂಶವುಳ್ಳ ಜಾನಪದ ಕತೆಗಳಲ್ಲಿ ಶಿವನನ್ನು ಕುರಿತ ಕತೆಗಳ ಪಟ್ಟಿ ತಯಾರಿಸು.

೩) ಭಾರತೀಯ ಜನಪದ ಕತೆಗಳಲ್ಲಿ ಹಾಸ್ಯಪ್ರಧಾನ ಕತೆಗಳ ಶತಾಂಶ ಎಷ್ಟೆಂದು ಲೆಕ್ಕ ಹಾಕು.

ಇದೇ ರೀತಿ ಪ್ರಾದೇಶಿಕ ಸಂಗೀತ, ಸಾಹಿತ್ಯ, ಚಿತ್ರಕಲೆ, ನಾಟಕ ಇವುಗಳನ್ನು ಕುರಿತು ಕೂಡಾ ವಿಷಯ ಸಂಗ್ರಹಗಳನ್ನು ಕಲೆಹಾಕುವುದು ಸಾಧ್ಯ. "ಕನ್ನಡದಲ್ಲಿ ಹಾಸ್ಯ ಸಾಹಿತ್ಯ" ಎಂಬುದನ್ನು ಕುರಿತು ಸಂಶೋಧನೆ ನಡೆಸುವುದು ಇಂಥ ಡೇಟಾಬೇಸ್‌ನ ಸಹಾಯದಿಂದ ಎಷ್ಟು ಸುಲಭವಾದೀತೆಂದು ಊಹಿಸಿ. ಪ್ರತಿ ವರ್ಷ ಅಚ್ಚಾಗುವ ಲಕ್ಷಾಂತರ ಲೇಖನಗಳನ್ನು ಕುರಿತ ಮಾಹಿತಿಯನ್ನು ಅಮೆರಿಕಾ ದೇಶದ ಸಂಸ್ಥೆಯೊಂದು "ಡಯಲಾಗ್" ಎಂಬ ಡೇಟಾಬೇಸ್‌ನಲ್ಲಿ ಸಂಗ್ರಹಿಸಿಡುತ್ತದೆ. ಗೊತ್ತಾದ ವಿಷಯವನ್ನು ಕುರಿತು ೧೯೬೯ರ ನಂತರ ಅಚ್ಚಾದ ಲೇಖನಗಳ ವಿವರಗಳನ್ನು ಈ ಡೇಟಾಬೇಸ್ ಕೆಲವೇ ನಿಮಿಷಗಳಲ್ಲಿ ತಯಾರಿಸಿ ಕೊಡುತ್ತದೆ.

"ಮಲ್ಟಿಮೀಡಿಯಾ ಡೇಟಾಬೇಸ್" ಎಂಬುದು ಇತ್ತೀಚೆಗೆ ಸುದ್ದಿ ಮಾಡುತ್ತಿರುವ ನೂತನ ಆವಿಷ್ಕಾರ. ಶೇಖರಿಸಿದ ಮಾಹಿತಿ ಕೇವಲ ಲಿಖಿತ ಮಾಹಿತಿಯೇ ಆಗಬೇಕಾಗಿಲ್ಲ. ಧ್ವನಿ ಅಥವಾ ಚಿತ್ರಗಳನ್ನೂ ಶೇಖರಿಸಿಡಬಹುದು. ಕೊಲಾಜ್ ಮತ್ತಿತರ ಪ್ರಕಾರಗಳ ಮೇಲೆ ಇಂಥ ಡೇಟಾಬೇಸ್ ಸಾಕಷ್ಟು ಪರಿಣಾಮ ಬೀರುತ್ತದೆ.

* * *

ವಿಶ್ವ ದಿನೇ ದಿನೇ ಗಾತ್ರದಲ್ಲಿ ಕುಗ್ಗುತ್ತಿದೆ ಎಂಬ ಮಾತು ಕೇಳುತ್ತಿರುತ್ತೇವೆ. ಇಡೀ ವಿಶ್ವವೇ ಒಂದು ದೊಡ್ಡ ಹಳ್ಳಿಯಾಗಿ (Global village) ಸೇರಿಹೋಗುತ್ತಿದೆಯೆಂಬ ಮಾತನ್ನು ನೀವು ಕೇಳಿರಬಹುದು. ಫ್ಯಾಕ್ಸ್, ಎಲೆಕ್ಟ್ರಾನಿಕ್ ಮೆಯಿಲ್‌ಗಳು ಈ ಮಾತನ್ನು ಸಿದ್ಧೀಕರಿಸಿವೆ. ಜಪಾನ್ ದೇಶದಲ್ಲಿ ಒಂದು ಪ್ರಯೋಗ ನಡೆದಿದೆ: ಟೆಲಿಫೋನ್‌ನಲ್ಲಿ ಒಬ್ಬ ಜಪಾನೀ ಪ್ರಜೆ ಅಮೆರಿಕೆಯ ಮಿತ್ರನೊಂದಿಗೆ ಮಾತಾಡಬೇಕೆನ್ನಿ; ಜಪಾನೀ ಭಾಷೆಯಲ್ಲಿ ಮಾತಾಡಿದ್ದನ್ನು ಈ ಚಾಣಾಕ್ಷ ಟೆಲಿಫೋನ್ ಇಂಗ್ಲಿಷ್‌ಗೆ ತರ್ಜುಮೆ ಮಾಡಿಕಳಿಸುವ

ಅದ್ಭುತವನ್ನು ಜಪಾನ್‌ನಲ್ಲಿ ಸಾಧಿಸಲಾಗಿದೆ. ಭಾಷೆಯ ಗೋಡೆಗಳಿಂದ ವಿಭಜಿತವಾಗದ ವಿಶ್ವದ ಟ್ಯಾಗೋರ್ ಕನಸಿಗೆ ಕಟ್ಟಿದ ಚೌಕಟ್ಟು ಎಂದು ಕರೆಯೋಣವೆ?

ಇಂಗ್ಲಿಷ್‌ನಂಥ ಪ್ರಭಾವಶಾಲೀ ಭಾಷೆಯೊಂದಿಗೆ ಸಹಬಾಳ್ವೆ ನಡೆಸುವುದು ಯಾವುದೇ ಪ್ರಾದೇಶಿಕ ಭಾಷೆಗೂ ಕಷ್ಟವೇ! ಕಂಪ್ಯೂಟರ್ ನೆಟ್‌ವರ್ಕ್‌ನಂಥ ತಂತ್ರಜ್ಞಾನವು ಪ್ರಾದೇಶಿಕ ಭಾಷೆಗಳ ಏಳ್ಗೆಗೆ ಸಾಕಷ್ಟು ಸಹಾಯ ಮಾಡಬಲ್ಲುದು. ಉದಾಹರಣೆಗೆ ಈಗ "Inter net" ಎಂಬ ನೆಟ್‌ವರ್ಕ್ ಮೂಲಕ ಕನ್ನಡ ಮತ್ತಿನ್ನಿತರ ದ್ರಾವಿಡ ಭಾಷೆಗಳನ್ನು ಕುರಿತು ಚರ್ಚಿಸಲು ಒಂದು ಇಡೀ "ನ್ಯೂಸ್ ಗ್ರೂಪ್" ಚಾಲ್ತಿಯಲ್ಲಿದೆ. ಇದೇ ರೀತಿ ಮುಂಬರುವ ದಿನಗಳಲ್ಲಿ ಕಂಪ್ಯೂಟರ್ ತಂತ್ರಜ್ಞಾನ ಬೇರೇನೇನು ಹೊಸ ಸಾಧ್ಯತೆಗಳನ್ನು ತರುತ್ತದೋ? ಈಗ ಲಭ್ಯವಾಗಿರುವ ತಂತ್ರಜ್ಞಾನವೇ ಸಾಕಷ್ಟು ಪರಿಣಾಮಕಾರಿಯಾಗಿದ್ದು ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಈ ತಂತ್ರಜ್ಞಾನದಿಂದ ಬೇಕಾದಷ್ಟು ಲಾಭ ಪಡೆಯಬಹುದಾಗಿದೆ.



# ಸಾಹಿತ್ಯ ಸಂವಹನದ ಭವಿಷ್ಯ

**ನಿರ್ಮಲ್ ವರ್ಮಾ**

ಸಾಹಿತ್ಯವು, ಓದುಗನಿಂದ ಕೇವಲ ಸೌಂದರ್ಯಾನುಭವಕ್ಕೆ ಸೀಮಿತವಾಗಿರದ ತೊಡಗಿ ಕೊಳ್ಳುವಿಕೆಯನ್ನು ಬಯಸುತ್ತದೆ. ಈ ಮಾತು ಉಳಿದ ಕಲೆಗಳ ಸಂದರ್ಭದಲ್ಲಿ ಅಷ್ಟು ನಿಜವಲ್ಲ. ಭಾಷೆಗೆ (ಪದಗಳಿಗೆ) ಸಂಪೂರ್ಣವಾಗಿ ಬದ್ಧವಾಗಿರುವುದರಿಂದ, ಸಾಹಿತ್ಯವು ಸಂಗೀತದ ಹಾಗೆ ಅಂತರ್ಲೀನವಾಗಿರಲಾರದು. 'ಭಾಷೆ' ಎನ್ನುವುದು ತನ್ನ ಸ್ವಭಾವ ದಿಂದಲೇ ಬೇರೆ ಯಾವುದರಲ್ಲಿಯೋ ತನ್ನ ಪರಿಪೂರ್ಣತೆಯನ್ನು ಕಂಡುಕೊಳ್ಳುತ್ತದೆ. ಆದರೂ ಸಾಹಿತ್ಯ ಕೃತಿಯೊಳಗೆ 'ವಿಶಿಷ್ಟವಾದ' ಅನುಭವವು ಹುದುಗಿರುತ್ತದೆ. ಈ ಲಕ್ಷಣಗಳ ಫಲವಾಗಿ ಸಾಹಿತ್ಯ ಕೃತಿಯೊಳಗೆ ಒಂದು ಕುತೂಹಲಕಾರಿಯಾದ ಒತ್ತಡವು ಏರ್ಪಡುತ್ತದೆ. ಸಾಹಿತಿಯು ದಿನ ಬಳಕೆಯಲ್ಲಿ ಇರುವಂಥ ಪದಗಳಿಂದಲೇ, 'ಅನನ್ಯ'ವಾಗಿ ಅನುಭವಿಸಿದ ಸಂಗತಿಯನ್ನು ಹೇಳಬೇಕಾಗುತ್ತದೆ. ವಾಸ್ತವವಾಗಿ ಆದಿಕಾಲದಿಂದಲೂ ಲೇಖಕರು ಈ ರೀತಿಯ ಒತ್ತಡವನ್ನು ಅನುಭವಿಸಿರಬೇಕು. ಏಕೆಂದರೆ ಅಮೂರ್ತವಾದ ಭಾವನೆಗಳ ಜಗತ್ತನ್ನು ಸಂಯೋಜಿತವೂ ಮೂರ್ತವೂ ಆದ ಅಭಿವ್ಯಕ್ತಿಯಾಗಿ ಬದಲಾವಣೆ ಮಾಡುವುದು ಯಾವ ಕಾಲದಲ್ಲಿಯೂ ಸುಲಭವಾಗಿರಲಿಲ್ಲ. ಆದರೆ ಆಗ ಅದು ಲೇಖಕನ ಸ್ವಂತ ಜಗತ್ತಿಗೆ ಬಾಹ್ಯವಾದ ಸಮಸ್ಯೆಯಾಗಿರಲಿಲ್ಲ. ಅವನು ತನ್ನ ಅಂತರಂಗದೊಂದಿಗೆ ಹಾಗೂ ತಾನು ಬಳಸುವ ಭಾಷೆಯೊಂದಿಗೆ ನಡೆಸಲೇಬೇಕಾದ ಹೋರಾಟದ ಒಂದು ಅವಿ ಭಾಜ್ಯ ಅಂಗವಾಗಿ ಮಾತ್ರ ಅದಕ್ಕೆ ಅಸ್ತಿತ್ವ ಇರುತ್ತಿತ್ತು. ಇದರ ಪರಿಣಾಮವಾಗಿ ಕಲಾಕೃತಿ ಯೆಂದು ನಿರ್ಮಾಣವಾದ ವಸ್ತು ಒಂದು ಅನನ್ಯ ಸಂವೇದನೆ ಮತ್ತು ಪ್ರಜ್ಞೆಗಳ ಸೃಷ್ಟಿ ಯಾಗಿರುತ್ತಿತ್ತು. ಆದರೂ ಸೃಷ್ಟಿಯಾದ ಕ್ಷಣದಿಂದಲೇ ಅದಕ್ಕೆ ಸಾಮುದಾಯಿಕವಾದ ಮತ್ತು ಸ್ವಯಂಪ್ರೇರಿತವಾದ ಜನಸಂಪರ್ಕ ದೊರೆಯುತ್ತಿತ್ತು. ಭಾಷೆಯು ಈ ರೀತಿಯ ಸಂಪರ್ಕವನ್ನು ದೊರಕಿಸಿಕೊಳ್ಳಲು ಸೇತುವೆಯಾಗಿತ್ತು.

ನಾನು ಇಲ್ಲಿ ಸ್ವಯಂಪ್ರೇರಿತ ಎಂಬ ಮಾತನ್ನು ಒತ್ತಿ ಹೇಳುತ್ತಿದ್ದೇನೆ. ಏಕೆಂದರೆ ಅಂದು ಸಾಹಿತ್ಯ ಸಂವಹನದ ಕ್ರಿಯೆಯು ಇಂದಿಗಿಂತ ಬಹಳ ಭಿನ್ನವಾದ ರೀತಿಯಲ್ಲಿ ನಡೆಯುತ್ತಿತ್ತು. ಇಂದು ಕಾವ್ಯ ವಾಚನಕ್ಕೆ ಹಾಗೂ ನಾಟಕ ಪ್ರದರ್ಶನಕ್ಕೆ ನಾವು ಪ್ರೇಕ್ಷಕರಿಗೆ ಆಹ್ವಾನ ನೀಡುತ್ತೇವೆ. ಅವರು ಬರುವಂತೆ ಮಾಡಲು ಪ್ರಜ್ಞಾಪೂರ್ವಕ ಪ್ರಯತ್ನ ಮಾಡುತ್ತೇವೆ. ಕೆಳದರ್ಜೆಯ ಜನಪ್ರಿಯ ಬರವಣಿಗೆಯಂತೂ ಜನರು ತಮ್ಮನ್ನು ಓದುವಂತೆ ಮಾಡಲು ಎಲ್ಲ ಬಗೆಯ ರಾಜಿಗಳನ್ನು ಮಾಡಿಕೊಳ್ಳಲು ತಯಾರಾಗಿರುತ್ತದೆ. ಇಂಥ

ಪ್ರಯತ್ನಗಳು ಬಹಳ ಕೃತಕವಾಗಿರುತ್ತವೆ. ಏಕೆಂದರೆ ಅವು, ಈಗ ಕಲಾವಿದನಿಗೂ ಶ್ರೋತೃಗಳಿಗೂ ನಡುವೆ ಮೂಡಿರುವ ಕಂದರವನ್ನು ಗಂಭೀರವಾಗಿ ತೆಗೆದುಕೊಳ್ಳುವುದಿಲ್ಲ. ಅವರಿಬ್ಬರಲ್ಲಿ ಅರ್ಥಪೂರ್ಣವಾದ ಸಂಬಂಧಗಳನ್ನು ರೂಪಿಸಲು ಯಾವ ಪ್ರಯತ್ನವನ್ನೂ ಮಾಡುವುದಿಲ್ಲ. ಬದಲಾಗಿ ಜನರ ಮನವನ್ನು ಸೆಳೆಯಲು, ಕೆಲವು ಅಗ್ಗದ ತಂತ್ರಗಳ ಮೂಲಕ ಅವರನ್ನು ತಲುಪಲು ಯತ್ನಿಸುತ್ತವೆ. ಇಲ್ಲಿ, ಆರ್ಥಿಕಲಾಭ ಪಡೆಯುವ ಉದ್ದೇಶದ ಸ್ವಾರ್ಥ ಮೂಲವಾದ ಬರವಣಿಗೆಗೂ ಹುಸಿ ಕ್ರಾಂತಿಕಾರಕ ಧೋರಣೆಗಳನ್ನು ವ್ಯಕ್ತಪಡಿಸುವ "ಜನಪರತೆ"ಗೂ ಇರುವ ಗಡಿ ಗೆರೆಗಳನ್ನು ಗುರುತಿಸುವುದು ಕಷ್ಟವಾಗುತ್ತದೆ. ಏಕೆಂದರೆ ಇವೆರಡೂ ವ್ಯಕ್ತಿಯ ಖಚಿತವಾಗಿ ನಿರ್ದಿಷ್ಟವಾದ ಅನುಭವ ಲೋಕವನ್ನು ಗಮನದಲ್ಲಿಟ್ಟುಕೊಂಡಿರುವುದಿಲ್ಲ. ಬದಲಾಗಿ ಮುಖರಹಿತವಾದ ಸರಾಸರಿ ವ್ಯಕ್ತಿತ್ವವುಳ್ಳ ಘಟಕಗಳು ಮಾತ್ರ ಅವರ ಗಮನದಲ್ಲಿರುತ್ತವೆ. ಇಂಥ ಘಟಕಗಳನ್ನು ನಾವು ಯಾವ ಸಾಮಾಜಿಕ ವ್ಯವಸ್ಥೆಯಲ್ಲಿ ಬದುಕಿದ್ದೇವೆ ಎಂಬುದನ್ನು ಅವಲಂಬಿಸಿ 'ಜನತೆ'ಯೆಂದೋ 'ಶ್ರೋತೃವರ್ಗ' ಎಂದೋ ಕರೆಯಲಾಗುತ್ತದೆ.

ಇದು ಆಧುನಿಕ ಕಲಾವಿದನ ವಿಚಿತ್ರವಾದ ಬಿಕ್ಕಟ್ಟು. ಈಗ ಸಂವಹನದ ದಾರಿಗಳು ಹಿಂದೆಂದಿಗಿಂತಲೂ ವ್ಯಾಪಕವಾಗಿವೆ, ವಿಶಾಲವಾಗಿವೆ. ಆದರೆ ಈ ರೀತಿಯ ವ್ಯಾಪಕತೆಯು ಸಾಧ್ಯವಾಗಲು ಕಾರಣವಾದ ಸಾರ್ವತ್ರಿಕ ಶಿಕ್ಷಣ, ವೃತ್ತಪತ್ರಿಕೆ ಮತ್ತು ದೂರದರ್ಶನಗಳಂಥ ಸಮೂಹ ಮಾಧ್ಯಮಗಳು ಮುಂತಾದ ಸಂಗತಿಗಳೇ ಕಲಾವಿದ ಮತ್ತು ಅವನ ಕೇಳುಗರ ನಡುವೆ ಯಾವುದೇ ಅರ್ಥಪೂರ್ಣವಾದ ಸಂವಹನ ನಡೆಯುವ ಸಾಧ್ಯತೆಯನ್ನು ಜಟಿಲವಾಗಿ ಮಾಡಿವೆ. ಆಧುನಿಕ ತಂತ್ರಜ್ಞಾನದಿಂದ ರೂಪಿತವಾದ ಸಮಾಜದಲ್ಲಿ ಮನುಷ್ಯನ ಪ್ರತಿದಿನದ ಅನುಭವವನ್ನು ಪತ್ರಿಕೋದ್ಯಮದ ಕ್ಲೀಷೆಗಳು ಮತ್ತು ರಾಜಕಾರಣದ ಹುಸಿ ಪರಿಭಾಷೆಗಳು ತುಂಬಿಕೊಂಡಿರುತ್ತವೆ ಆದ್ದರಿಂದಲೇ ಸರಾಸರಿ ಅನುಭವಗಳ ಸಂತೆಯಂಥ ದಬ್ಬಾಳಿಕೆಯಲ್ಲಿ ಅನನ್ಯ ಅನುಭಾವದ ಕ್ಷೇತ್ರಗಳು ಮುಳುಗಿ ಹೋಗಿವೆ.

ಸರಾಸರಿಗಳ ಲೋಕವು ಸದಾ ಭಾವನೆಗಳು ಮತ್ತು ಅನುಭವಗಳ ಅತಿರೇಕದ ಮೇಲೆ ಅವಲಂಬಿಸಿರುವುದರಿಂದ ಮಾತ್ರ ಉಳಿದುಕೊಳ್ಳುವುದು ಸಾಧ್ಯ. ಇಂದು ಪ್ರತಿಯೊಬ್ಬ ಮನುಷ್ಯನು ಇಂಥ ಕಲಾಕೃತಿಗಳ ಮೂಲಕವೇ ತನ್ನ ಇರುವಿಕೆಯ ನಿಜವನ್ನು, ಅಧಿಕೃತತೆಯನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಾನೆ. ನಿಜವಾಗಿ ನೋಡಿದರೆ ಅಧಿಕೃತವಾಗಿ ಇರುವುದೆಂದರೆ ಸರಾಸರಿ ಜಗತ್ತಿನಲ್ಲಿ ಮುಳುಗಿಹೋಗಲು ಒಪ್ಪಿಕೊಳ್ಳದಿರುವುದು. ಎಲ್ಲರಂತೆ ತಾನೂ ಆಗಬೇಕೆಂಬ ಒತ್ತಡಕ್ಕೆ ಬದಲಾಗಿ ತನ್ನ ಅನನ್ಯತೆಯಿಂದಲೇ ಉಳಿದವರ ಬಗೆಗಿನ ಸಂಬಂಧವನ್ನು ರೂಪಿಸಿಕೊಳ್ಳುವುದು. ಸಂವಹನ ಸಮಸ್ಯೆಯು ಮಹತ್ವಪೂರ್ಣವಾಗುವುದು ಈ ಸಂದರ್ಭದಲ್ಲಿಯೇ ಕಲಾವಿದನ ಅನನ್ಯ ಸಂವೇದನಶೀಲತೆಗೂ ಓದುಗ ಅಥವಾ ಪ್ರೇಕ್ಷಕನ ವೈಯುಕ್ತಿಕ ಪ್ರತಿಕ್ರಿಯೆಗೂ ನಡುವೆ ಪರದಿ

ಕೊಂಡಿರುವ ವಿಸ್ತಾರದಲ್ಲಿ ಈ ಸಂವಹನದ ಕೆಲಸ ನಡೆಯುತ್ತದೆ. ತಾನು ಕಂಡ ಸತ್ಯದ ಅಧಿಕೃತತೆಯ ಬಗ್ಗೆ ಯಾವುದೇ ರಾಜಿಗಳನ್ನು ಮಾಡಿಕೊಳ್ಳದೆ, ಜನರಿಗೆ ತಲುಪಬೇಕೆಂದು ತನ್ನ ಸಂವೇದನೆಗಳನ್ನೇ ಕೆಳಮಟ್ಟಕ್ಕೆ ಇಳಿಸದೆ ಸಂವಹನ ಮಾಡುವುದು ಹೇಗೆ? ಇದು ನಮ್ಮ ಸಂಸ್ಕೃತಿಯ ಸೃಷ್ಟಿಕರ್ತರನ್ನು ತಲ್ಲಣಗೊಳಿಸಿರುವ ಅಥವಾ ತಲ್ಲಣಗೊಳಿಸಬೇಕಾದ ಪ್ರಶ್ನೆ. ಆದರೆ ವಾಸ್ತವ ಪರಿಸ್ಥಿತಿ ಬೇರೆಯಾಗಿದೆ. ಮೇಲುನೋಟಕ್ಕೆ ಕಲಾವಿದನಿಗೆ ತನಗೆ ಇಷ್ಟ ಬಂದುದನ್ನು ಸೃಷ್ಟಿಸುವ ಸಂವಹನ ಮಾಡುವ ಸ್ವಾತಂತ್ರ್ಯವಿದೆ. ಹಾಗೆಯೇ ಜನರಿಗೂ ಕೂಡ ತಮಗೆ ಯಾವುದು ಬೇಕೋ ಅದನ್ನು ತೆಗೆದುಕೊಳ್ಳುವ ಸ್ವಾತಂತ್ರ್ಯ ಇದೆ. ಆದರೆ ವಾಸ್ತವದಲ್ಲಿ ಕಲಾವಿದ ಮತ್ತು ಕೇಳುಗರಿಬ್ಬರೂ ಬೇರೆ ಬೇರೆ ಒತ್ತಡಗಳಿಗೆ ಒಳಪಟ್ಟಿದ್ದಾರೆ. ಈ ಒತ್ತಡಗಳು ಅವರಿಗಿರುವ ಸ್ವಾತಂತ್ರ್ಯವನ್ನು ವಿಕೃತಗೊಳಿಸುತ್ತವೆ. ನಿಜ. ಕಲಾವಿದನಿಗೆ ತನಗೆ ಇಷ್ಟಬಂದಂತೆ ಬರೆಯುವ ಅಧಿಕಾರವಿದೆ. ಆದರೆ ಅವನಿಗೆ ತನ್ನ ಓದುಗರ ಕಡೆಗೆ ಗಮನ ಹರಿಸಿದಾಗ ದಿಗ್ಭ್ರಮೆ ಕಾದಿರುತ್ತದೆ. ಏಕೆಂದರೆ ಅಲ್ಲಿರುವುದು ಓದುಗರ ಮತ್ತು ಪ್ರೇಕ್ಷಕರ ಒಂದು ಗುಂಪು. ಎಲ್ಲರೂ ಸರಾಸರಿಯ ಸಾಕ್ಷಾತ್ಕಾರಿಗಳು. ಅವರಲ್ಲಿ ಬಹುಪಾಲು ಜನರಿಗೆ ತಮಗೆ ಯಾವುದರ ಅಗತ್ಯ ಇದೆಯೆಂದು ಗೊತ್ತಿಲ್ಲ, ಯಾವುದಕ್ಕೆ ಹಾತೊರೆಯುತ್ತೇವೆಂದು ಗೊತ್ತಿಲ್ಲ. ಒಂದು ಮಾತಿನಲ್ಲಿ ಹೇಳುವುದಾದರೆ ಅವರಿಗೆ ತಮ್ಮ ಆಕಾಂಕ್ಷೆಗಳ ಸ್ವರೂಪವೇ ಅಪರಿಚಿತವಾಗಿದೆ. ಪಾಶ್ಚಾತ್ಯ ಸಮಾಜ ಶಾಸ್ತ್ರಜ್ಞರು ಇಡೀ ಸಮಸ್ಯೆಯನ್ನು ಪಕ್ಕಕ್ಕೆ ತಳ್ಳಿಬಿಡುವ ಧೋರಣೆ ತಳೆದುಬಿಟ್ಟಿದ್ದಾರೆ. ಅವರು ಕೇಳುಗರ ಸಮುದಾಯವನ್ನು ಸಂಸ್ಕೃತಿಯ ಗ್ರಾಹಕರೆಂದು ಕರೆದು ಸುಮ್ಮನಾಗಿ ಬಿಡುತ್ತಾರೆ. ನಾವೆಲ್ಲರೂ ಒಂದಲ್ಲ ಒಂದು ಅರ್ಥದಲ್ಲಿ ಗ್ರಾಹಕರೇ ಹೌದು. ಆದರೆ, ತಲ್ಲಣಗೊಳಿಸುವ ವಿಚಾರವೆಂದರೆ ಇದು: ಒಂದು ಟೂಥ್‌ಪೇಸ್ಟ್ ಇರಲಿ ಅಥವಾ ಒಂದು ಚಿತ್ರವೇ ಆಗಿರಲಿ ನಾವು ಉಪಭೋಗಿಸುವ ವಸ್ತುಗಳಿಗೂ, ನಮ್ಮ ವಾಸ್ತವವಾದ ಸ್ಥಿತಿಗೂ ಯಾವ ನಿಜವಾದ ಸಂಬಂಧವೂ ಇಲ್ಲ. ನಮಗೆ ಏನು ಅಗತ್ಯವೆಂದು ಹೇಳಲಾಗಿದೆಯೋ ಅವೇ ನಮ್ಮ ಅಗತ್ಯಗಳೆಂದು ನಾವು ನಂಬಿಬಿಟ್ಟಿದ್ದೇವೆ. ನಮ್ಮ ಅಗತ್ಯಗಳಿಗೂ ಅಸ್ತಿತ್ವಕ್ಕೂ ನಡುವೆ ಅನಿವಾರ್ಯವಾದ ಯಾವ ಸಂಬಂಧವೂ ಉಳಿದಿಲ್ಲ. ಉಪಭೋಗ ಮಾಡುತ್ತಿರುವವನಿಗೆ ತನ್ನ ಅವಶ್ಯಕತೆಗಳು ಏಕೆ ತಿಳಿದಿಲ್ಲವೆಂದರೆ ಅವನಿಗೆ ತನ್ನ ಸ್ವರೂಪವೇ ಸರಿಯಾಗಿ ತಿಳಿದಿಲ್ಲ. ಕಲೆಗಾಗಿ ಮನುಷ್ಯನಲ್ಲಿರುವ ಹಸಿವು ಅವಾಸ್ತವವಲ್ಲ. ಆದರೆ ಈ ಹಸಿವನ್ನು ತೃಪ್ತಿಪಡಿಸಲು ಅವನಿಗೆ ಒದಗಿಸಲಾಗುವ ಸಂಗತಿಗಳು 'ಕಲೆ' ಆಗಿರುತ್ತವೆಂಬ ಯಾವ ಭರವಸೆಯೂ ಇಲ್ಲ. ಬಹುಮಟ್ಟಿಗೆ ಆ ಕಲಾಕೃತಿಗಳು ಅಧಿಕೃತವಾಗಿರುವುದಿಲ್ಲ. ಏಕೆಂದರೆ 'ಕೇಳುಗ', 'ನೋಡುಗ'ರ ಬಳಿ ಕಲೆ ತಮಗೆ ತಲುಪುವ ಮಾರ್ಗವನ್ನು ನಿಯಂತ್ರಿಸುವ ಯಾವ ಸಾಧನವೂ ಇಲ್ಲ. ಇದರಲ್ಲಿ ಆಶ್ಚರ್ಯವೇನೂ ಇಲ್ಲ. ಏಕೆಂದರೆ ನಮ್ಮ ಗುರಿಗಳಿಗೂ ದಾರಿಗೂ ನೇರವಾದ ಸಂಬಂಧವಿದೆ. ಜನರಿಗಾದರೋ ಗುರಿಗಳೇನೆನ್ನುವುದು ತಿಳಿದಿಲ್ಲ, ಸರಿ. ಜೀವನದಿಂದ ತಾತ್ಕಾಲಿಕವಾದ ಪಲಾಯನಕ್ಕೆ ಅವಕಾಶಮಾಡಿ

ಕೊಡುವ ಎಲ್ಲ ಸಂಗತಿಗಳೂ ಅವರಿಗೆ ಚೆನ್ನಾಗಿವೆಯೆಂದೇ ತೋರುತ್ತವೆ.

ಇಲ್ಲಿ ಉನ್ನತ ಮಟ್ಟದ ಪತ್ರಿಕೆಗಳನ್ನು ಓದುವ ಎಲಿಟಿಸ್ಟ್ ಬುದ್ಧಿಜೀವಿಗಳ ವರ್ಗಕ್ಕೂ, ಸದಾ ಅಶ್ಲೀಲತೆಯ ಕಡೆಗೆ ತುಡಿಯುವ ಕೀಳುಮಟ್ಟದ ಓದುಗರಿಗೂ ಯಾವುದೇ ವ್ಯತ್ಯಾಸವನ್ನು ಗುರುತಿಸುವುದು ನಿಷ್ಪ್ರಯೋಜಕ. ಯಾಕೆಂದರೆ ಕೊನೆಗೂ ಅವರಿಬ್ಬರೂ ಜಡವಾಗಿ ತಮಗೆ ಏನನ್ನು ಕೊಡಲಾಗುತ್ತದೆಯೋ ಅದನ್ನು ಸ್ವೀಕರಿಸುತ್ತಾರೆ. ತಮಗೆ ಯಾವುದು ಬೇಕೋ ಅದನ್ನು ಸಕ್ರಿಯವಾಗಿ ಆರಿಸಿಕೊಳ್ಳುವುದಿಲ್ಲ. ನಿಜವಾಗಿ ನಮ್ಮ ಸಮಾಜದಲ್ಲಿ ಪ್ರೌಢ ಅಭಿವ್ಯಕ್ತಿ ಮತ್ತು ಕೀಳು ಅಭಿವ್ಯಕ್ತಿಗಳು ಒಂದೇ ನಾಣ್ಯದ ಎರಡು ಮುಖಗಳು. ಅವರ ಅಗತ್ಯಗಳು ಸಹಜವಾದ ಆಂತರಿಕವಾದ ಪ್ರೇರಣೆಗಳಿಂದ ನಿಯಂತ್ರಿತವಾಗಿರುವುದಿಲ್ಲ. ಬದಲಾಗಿ ಅವರಿಗೆ ಯಾವ ಹತೋಟಿಯೂ ಇಲ್ಲದ ಬಾಹ್ಯ ಒತ್ತಡಗಳು ಅವರ ಬೇಕು ಬೇಡಗಳನ್ನು ತೀರ್ಮಾನಿಸುತ್ತವೆ. ಆದ್ದರಿಂದಲೇ ಸ್ಟೆಂಡಾಲ್‌ರಂಥ ಲೇಖಕರು ಈ ಎರಡು ವರ್ಗಗಳಿಗೆ ಸೇರದ ಆರಿಸಿದ ಕೆಲವರಿಗಾಗಿ ಬರೆಯುತ್ತೇವೆಂದು ಹೇಳಿದ್ದು.

ಆದರೆ ನಮ್ಮ ಕಾಲದಲ್ಲಿ ಈ ಸಂಸ್ಕೃತಿಯ ವಿಚ್ಛಿದ್ರೀಕರಣವೇ ಬಹು ದೊಡ್ಡ ಸಮಸ್ಯೆಯಾಗಿದೆ. ಕಲೆಯ ಸಂವಹನದ ಮೇಲೆ ಅತಿಯಾದ ಒತ್ತಡ ಉಂಟಾಗಿರುವುದು ಇದರಿಂದಲೆ. "ನಾನು ಯಾರಿಗಾಗಿ ಬರೆಯುತ್ತೇನೆ" ಎಂಬ ಪ್ರಶ್ನೆಯನ್ನು ಟಾಲ್‌ಸ್ಟಾಯ್ ಅತ್ಯಂತ ವಿಷಾದ ಹಾಗೂ ತುರ್ತಿನಿಂದ ಕೇಳಿಕೊಂಡನು. ಹಿಂದಿನ ಕಾಲದಲ್ಲಿ ಈ ರೀತಿಯ ಪ್ರಶ್ನೆಯನ್ನು ಊಹಿಸಿಕೊಳ್ಳಲು ಸಾಧ್ಯವಿರಲಿಲ್ಲ. ಆಗ ಜನಪ್ರಿಯ ಮತ್ತು ಪ್ರೌಢಗಳ ನಡುವೆ, ಮೇಲು ನೆಲೆಯವರು ಮತ್ತು ಕೆಳ ನೆಲೆಯುವರ ನಡುವೆ ಇರುವ ಅಡ್ಡಗೋಡೆಗಳು ದಾಟಲಾಗದಷ್ಟು ಗಟ್ಟಿಯಾಗಿರಲಿಲ್ಲ. ಹೋಮರ್ ಆಗಲಿ, ಶೇಕ್ಸ್‌ಪಿಯರ್ ಆಗಲಿ, ಆ ಮಾತಿಗೆ ಬರುವುದಾದರೆ ನಮ್ಮವರೇ ಆದ ಮಧ್ಯಯುಗೀನ ಭಕ್ತ ಕವಿಗಳೇ ಆಗಲಿ ಯಾವ ಗುಂಪಿಗೆ ಸೇರುತ್ತಿದ್ದರೆಂದು ಕಂಡುಕೊಳ್ಳುವುದು ಕಷ್ಟ. ಆಗ ವರ್ಗಗಳಾಗಲಿ, ಭೇದಭಾವಗಳಾಗಲಿ ಇರಲಿಲ್ಲವೆಂದಲ್ಲ. ಆದರೆ ಕೆಲವು ಅನುಭವಗಳಿದ್ದುವು. ಇಲ್ಲೊಬ್ಬ ಕಬೀರ, ಅಲ್ಲೊಬ್ಬ ಸಂತ ಫ್ರಾನ್ಸಿಸ್ ಕಾಣುವ ದರ್ಶನಗಳು ನೀಡುವ ಒಳನೋಟಗಳು ಇದ್ದುವು. ಇವು ಉನ್ನತ ಸಂಸ್ಕೃತಿ ಮತ್ತು ನೀಚ ಸಂಸ್ಕೃತಿಗಳ ನಡುವಿನ ಗೋಡೆಗಳನ್ನು ದಾಟಿಕೊಂಡು ಹೋಗಿ ಇಡೀ ಸಮುದಾಯದ ಚಿಂತನ ಕ್ರಮದ ಮೇಲೆಯೇ ಪ್ರಭಾವ ಬೀರುವ ಶಕ್ತಿಯನ್ನು ಪಡೆದಿದ್ದುವು. ಅಂದಿನ ಸಂವಹನಸಾಧನಗಳು ತೀರ ಸಾಮಾನ್ಯವಾಗಿದ್ದುವು. ಸಮೂಹ ಮಾಧ್ಯಮಗಳಂತೂ ಅಸ್ತಿತ್ವದಲ್ಲಿಯೇ ಇರಲಿಲ್ಲ. ಆದರೂ ಕಲಾವಿದನು ತನ್ನ ಮಾತಿನ ಇಂದ್ರಜಾಲವನ್ನು ಹರಡುವುದರಲ್ಲಿ ಯಶಸ್ವಿಯಾಗುತ್ತಿದ್ದನು. ಏಕೆಂದರೆ ಮಾತು ಇಡೀ ಸಮುದಾಯದಲ್ಲಿ ಸರ್ವಸಾಮಾನ್ಯವಾದ ನೆನಪುಗಳನ್ನು ಜಾಗೃತಗೊಳಿಸುತ್ತಿತ್ತು. ಕಲಾವಿದ ಮತ್ತು ಪ್ರೇಕ್ಷಕರಿಬ್ಬರೂ ಗತಕಾಲದೊಂದಿಗೆ ಜೀವಂತವಾದ ಸಂಪರ್ಕವನ್ನು ಹೊಂದಿರುತ್ತಿದ್ದರು.

ಸಮಸ್ಯೆಯ ಬೇರು ಇಲ್ಲಿದೆಯೆಂದು ನಾನು ತಿಳಿಯುತ್ತೇನೆ. ತಂತ್ರಜ್ಞಾನಿಕ ಮತ್ತು ಅರೆತಂತ್ರ ಜ್ಞಾನಿಕ ಸಮಾಜಗಳ ಮುಖ್ಯ ಲಕ್ಷಣವೆಂದರೆ, ಅಲ್ಲಿ ವ್ಯಕ್ತಿಯ ಸ್ವಂತ ದರ್ಶನಕ್ಕೂ ಒಟ್ಟು ಸಮುದಾಯದ ಅನುಭವಕ್ಕೂ ಬಿರುಕು ಬಿಟ್ಟಿರುತ್ತದೆ. ಆದ್ದರಿಂದಲೇ ಇಂದಿನ ಕಲಾವಿದನು ಅನಾಥಭಾವವನ್ನು ಅನುಭವಿಸುತ್ತಾನೆ. ಅವನಿಗಿರುವ ಎಲ್ಲ ಸಮೂಹ ಸಂಪರ್ಕ ಸಾಧನಗಳಿಂದಲೂ ಒಟ್ಟು ಸಮುದಾಯದೊಂದಿಗೆ ಜೀವಂತವಾದ ಸಂಭಾಷಣೆ ನಡೆಸಲು ಅವನಿಗೆ ಅಸಾಧ್ಯ ಆಗುತ್ತದೆ. ಅವರ ನಡುವೆ ಸಮಾನ ಆಸಕ್ತಿಯ ಬಿಂದುಗಳು ಇಲ್ಲ. ಇದು ತಂತ್ರಜ್ಞಾನದಿಂದ ರೂಪಿತವಾಗಿರುವ ಸಮಾಜದ ಅನಿವಾರ್ಯ ಲಕ್ಷಣವೆಂದೇ ತೋರುತ್ತದೆ. ಇಲ್ಲಿ ಉತ್ತಮ ಅಭಿರುಚಿ ಎನ್ನುವುದು ಒಟ್ಟು ಸಮಾಜದ ಒಂದು ವರ್ಗದ ಲಕ್ಷಣವೆನಿಸಿಕೊಂಡು ಬಿಟ್ಟಿದೆ. ಅದೇ ಸಮುದಾಯದಲ್ಲಿರುವ ಇತರ ಗುಂಪುಗಳು ಈ ಅಭಿರುಚಿಗಳನ್ನು ಹಂಚಿಕೊಂಡಿರುವುದಿಲ್ಲ. ಅಷ್ಟೇಕೆ, ಆ ವರ್ಗದೊಳಗೆ ಕೂಡ ನಿರ್ದಿಷ್ಟ ವ್ಯಕ್ತಿಗಳಿಗೆ ತಮ್ಮ ಅನುಭವಗಳನ್ನು ಗುರುತಿಸಿಕೊಳ್ಳುವ ಮಾನದಂಡ ಗಳಿಲ್ಲ. ಅವರೂ ಸಾಮಾಜಿಕ ವರ್ತನೆಗಳಿಗೆ, ಸರಾಸರಿ ವಿನ್ಯಾಸಗಳಿಗೆ ಅನುಗುಣವಾಗಿ ತಮ್ಮ ಪ್ರತಿಸ್ಪಂದನಗಳಲ್ಲಿ ಹೊಂದಾಣಿಕೆ ಮಾಡಿಕೊಳ್ಳಬೇಕಾಗುತ್ತದೆ. ಹೀಗೆ ನಮ್ಮಲ್ಲಿ ಇರುವುದು ಹೆಸರು ಗುರುತು ಇಲ್ಲದ, ಸ್ವಯಂಚಾಲಿತವಾದ, ಕೇಳುಗರ ನಡುಗಡ್ಡೆಗಳು. ಒಂದು ಕಡೆ ಅವರೆಲ್ಲರ ಅನುಭವಗಳು ಒಂದೇ ಬಗೆಯುವು; ಇನ್ನೊಂದು ಕಡೆ ಅವುಗಳನ್ನು ಹಂಚಿಕೊಳ್ಳುವುದು ಅಸಾಧ್ಯ.

ಈ ಸನ್ನಿವೇಶದಲ್ಲಿಯೂ ಒಂದು ವ್ಯಂಗ್ಯವಿದೆ. ಪ್ರತಿಯೊಬ್ಬ ವ್ಯಕ್ತಿಯ ಅನುಭವ ಗಳು ಸ್ವಲ್ಪ ಹೆಚ್ಚು ಕಡಿಮೆ ಇತರರ ಅನುಭವಗಳಂತೆಯೇ ಇರುವ ಸಮಾಜದಲ್ಲಿ ಸಂವಹನ ಸಮಸ್ಯೆಯನ್ನು ಬಿಡಿಸುವ ಅಗತ್ಯವೇ ಇರುವುದಿಲ್ಲ ಅದು ತನ್ನಷ್ಟಕ್ಕೇ ತಾನೇ ಮಾಯವಾಗಿಬಿಡುತ್ತದೆ. ಎಲ್ಲ ರೀತಿಯ ಅನುಭವಗಳು ಒಂದೇ ಆಗಿಬಿಟ್ಟರೆ ಅಥವಾ ಅನುಭವ ಲೋಕಗಳ ನಡುವೆ ದಾಟಲಾಗದ ಗೋಡೆಗಳು ಉಂಟಾಗಿಬಿಟ್ಟರೆ ಸಂವಹನದ ಅವಶ್ಯಕತೆಯಾದರೂ ಏನಿದೆ? ಒಂದು ಅನುಭವ ತನ್ನ ಅನನ್ಯತೆಯನ್ನು ಕಳೆದುಕೊಳ್ಳು ವುದೇ ತಡ, ಅದು ಎಲ್ಲರಿಗೂ ಸೇರುತ್ತದೆ ಮತ್ತು ಯಾರಿಗೂ ಸೇರುವುದಿಲ್ಲ. ಕಲಾವಿದನು ತನ್ನ ಸಮುದಾಯದೊಂದಿಗಿನ ಕರುಳುಬಳ್ಳಿಯ ಸಂಬಂಧವನ್ನು ಕಳೆದುಕೊಂಡಿರುವನೆನ್ನುವ ಕಳಕಳಿ ಅಥವಾ ವಿವಾದಗಳನ್ನು ಹುಟ್ಟಿಸುವುದಿಲ್ಲ. ಇಲ್ಲೊಂದು ಪರಿಹರಿಸಿಕೊಳ್ಳಬೇಕಾದ ಸಮಸ್ಯೆ ಇದೆಯೆಂದೇ ಯಾರೂ ತಿಳಿಯುವುದಿಲ್ಲ. ಈ ಸನ್ನಿವೇಶವೂ ಒಟ್ಟು ಬದುಕಿನ ಸಹಜ ಲಕ್ಷಣವೆಂದು ಎಲ್ಲರೂ ಒಪ್ಪಿಕೊಂಡು ಬಿಡುತ್ತಾರೆ.

೧೯ನೇ ಶತಮಾನದ ಕೊನೆಯ ಭಾಗದಲ್ಲಿ ಫ್ರೆಂಚ್ ಲೇಖಕ ಗಸ್ತಾವ್ ಫ್ಲಾಬೆಯಂಥ ಕಲಾವಿದರು ತೀವ್ರವಾಗಿ ಆದರೆ ಅಸಹಾಯಕವಾಗಿ ದಂಗೆ ಎದ್ದಿದ್ದು ಇಂಥ 'ಸಹಜ' ಸ್ಥಿತಿಯ ವಿರುದ್ಧವಾಗಿಯೇ. ಆಧುನಿಕ ಪರಂಪರೆಯಲ್ಲಿ ಈ ರೀತಿಯ 'ಸ್ವಯಂ ಅಜ್ಞಾತ ವಾಸ'ಕ್ಕೆ ಒಳಗಾದ ಕಲಾವಿದರ ಸರಣಿಯನ್ನೇ ನೋಡಬಹುದು. ಅವರಲ್ಲಿ ಫ್ಲಾಬೆ

ಮೊದಲಿಗ. ನಮ್ಮ ಕಾಲದಲ್ಲಿ ಈ ರೀತಿಯ ಮಾತುಗಳು ಕ್ಲೀಷೆಯಾಗಿಬಿಟ್ಟಿವೆ. ಆದರೆ ಅವನಿಗೆ ಅಜ್ಞಾತವಾಸವು ಸ್ವತಂತ್ರ ಆಯ್ಕೆಯಾಗಿರಲಿಲ್ಲ. ಅನಿವಾರ್ಯ ಆತಂಕವಾಗಿತ್ತು. ಆದ್ದರಿಂದ ಪಲಾಯನ ಸಾಧ್ಯವಿರಲಿಲ್ಲ. ಫ್ಲಾಬೇ ಏಕಾಂತವನ್ನು ಆರಿಸಿಕೊಂಡಿದ್ದು ತನ್ನ ಸ್ವಂತ ಸಂತೋಷಕ್ಕಾಗಿ ಬರೆಯಬೇಕೆಂದಲ್ಲ. ಆದರೆ ಅವನಿಗೆ ಯಾವ ವರ್ಗ ಅವನ ಪುಸ್ತಕಗಳನ್ನು ಓದುವುದರಿಂದ ಸಂತೋಷಪಡುತ್ತಿತ್ತೋ ಆ ವರ್ಗದ ಅಭಿರುಚಿಗಳಲ್ಲಿ ನಂಬಿಕೆ ಇರಲಿಲ್ಲ. ಅವನಿಗೆ ಭಾಷೆಯ ಸಂವಹನಗುಣದಲ್ಲಿ ನಂಬಿಕೆಯಿತ್ತು. ಆದರೆ ವರ್ತಕರು, ಉತ್ಪಾದಕರು ಮತ್ತು ಮಧ್ಯಮ ವರ್ಗದ ಸ್ನಾಬ್ (Snob)ಗಳಿಂದ ತುಂಬಿದ ತನ್ನ ಸಮಾಜವು ತಾನು ಹೇಳಬಯಸುವ ಮಾತುಗಳನ್ನು ಕೇಳಿಸಿಕೊಳ್ಳಬಲ್ಲುದೆ ಎನ್ನುವುದರ ಬಗ್ಗೆ ಅನುಮಾನವಿತ್ತು. ಉದ್ದೇಶಪೂರ್ವಕವಾಗಿಯೇ ಫ್ಲಾಬೇಯ ಉದಾಹರಣೆಯನ್ನು ತೆಗೆದುಕೊಂಡಿದ್ದೇನೆ. ಯಾಕೆಂದರೆ, ಪಾಶ್ಚಾತ್ಯ ಸಮಾಜದಲ್ಲಿ ಸಾಹಿತ್ಯದ ಸಂವಹನವು ಬಿಕ್ಕಟ್ಟನ್ನು ಎದುರಿಸಿದ ಸಂದರ್ಭವನ್ನು, ಉಳಿದೆಲ್ಲ ಲೇಖಕರಿಗಿಂತ ಚೆನ್ನಾಗಿ ಅವನು ಪ್ರತಿನಿಧಿಸುತ್ತಾನೆ ಆ ಸಮಾಜದಲ್ಲಿ 'ಕೇಳುಗರ ಗುಂಪು' (Mass Audience) ಮೂಡಿ ಬಂದದ್ದು ಅವನ ಕಾಲದಲ್ಲಿಯೇ, ಕಲಾವಿದನು ಅಂಥ ಗುಂಪಿನಿಂದ ಹೊರಗೆ ಇರುತ್ತಿದ್ದನು. ಅವನು ದಂಗೆಕೋರನಾಗಬಹುದಿತ್ತು ಅಥವಾ ಸುಖಭೋಗಗಳಲ್ಲಿ ಮೈ ಮರೆಯುವ ಡ್ಯಾಂಡಿಯಾಗಬಹುದಿತ್ತು. ಏನೇ ಆಗಲಿ ಅಂಥ ಕೇಳುಗರಿಗೆ ಸಂವಹನ ಮಾಡುವ ಆಸಕ್ತಿಯನ್ನು ಹೊಂದಿರಲು ಅವನಿಗೆ ಸಾಧ್ಯವಿರಲಿಲ್ಲ. ಅದನ್ನು ಶ್ರೋತೃ ಸಮುದಾಯವೆಂದು ಕರೆಯುವುದು ಕೂಡ ತಪ್ಪು. ಅದೊಂದು ಮುಖವಿಲ್ಲದ ಗುಂಪು. ಅದು ಆಧುನಿಕ ಮಹಾನಗರಗಳ ವಿಕೃತ ಬೆಳವಣಿಗೆ. ನಮ್ಮ ಕಾಲದಲ್ಲಂತೂ ಅದು ದೈತ್ಯಾಕಾರವನ್ನು ಪಡೆದುಕೊಂಡಿದೆ.

ಈ ಸಂದರ್ಭದಲ್ಲಿ ಸಮಾಜವಾದಿ ರಾಷ್ಟ್ರಗಳಲ್ಲಿ ಬಳಸುವ 'ಜನತೆ' ಎಂಬ ಪಾರಿಭಾಷಿಕದ ಬಗ್ಗೆಯೂ ಕೆಲವು ಮಾತುಗಳನ್ನು ಹೇಳಬಹುದು. ಪಾಶ್ಚಾತ್ಯ ಸಮಾಜಗಳ 'ಗುಂಪುಗಳ' ಹಾಗೆ ಈ ಜನತೆಗೂ ಮುಖ ಎನ್ನುವುದಿಲ್ಲ. ಸೊನ್ನೆತನ ಇವರನ್ನು ಕಾಡುತ್ತದೆ. ಈ ಎರಡೂ ಸಮುದಾಯಗಳಲ್ಲಿ ರಕ್ತಮಾಂಸದ ಮನುಷ್ಯರನ್ನು ನೆರಳು ನೆರಳಾದ ಗ್ರಾಹಕ ಘಟಕಗಳಾಗಿ ಮಾರ್ಪಡಿಸಲಾಗುತ್ತಿದೆ. ಈ ಘಟಕಗಳನ್ನು ಸರಕಾರವಾದರೂ ಸರಿಯೇ, ಮಾರುಕಟ್ಟೆಯಾದರೂ ಸರಿಯೇ ತಮ್ಮ ಇಷ್ಟಕ್ಕೆ ತಕ್ಕಂತೆ ತಿರುಚಿಕೊಳ್ಳಬಹುದು.

ಹೀಗೆ ಮನುಷ್ಯನ ಮನಸ್ಸನ್ನು ತಿರುಚುವ ಕೆಲಸದಲ್ಲಿ ಭಾಷೆಯು ತನ್ನದೇ ಆದ ಭ್ರಷ್ಟಗೊಳಿಸುವ ಪಾತ್ರವನ್ನು ವಹಿಸುತ್ತದೆ. ಅದರ ಪ್ರತಿಫಲವೆಂಬಂತೆ ತಾನು ಕೂಡ ಭ್ರಷ್ಟವಾಗುತ್ತದೆ. ಎರಡನೆಯ ಮಹಾಯುದ್ಧದ ಕಾಲದಲ್ಲಿ ನಾಜಿಗಳು ಪ್ರಚಾರಗಳ ಮೂಲಕ ಜರ್ಮನ್ ಭಾಷೆಯನ್ನು ಅಪಾರ ಕ್ರೌರ್ಯಕ್ಕೆ ಒಳಪಡಿಸಲಾಯಿತು. ಅರ್ಥಕ್ಕೂ ಅಭಿವ್ಯಕ್ತಿಗೂ ಇರುವ ಸಂಬಂಧವೇ ಕಳಚಿಹೋಯಿತು. ಅದ್ದರಿಂದಲೇ

ಯುದ್ಧದ ನಂತರ ಬಂದ ತರುಣ ಜರ್ಮನ್ ಕವಿಗಳಿಗೆ ತಮ್ಮ ಭಾಷೆಯಲ್ಲಿ ಸಂವಹನ ಮಾಡುವುದು ಅತ್ಯಂತ ನೋವಿನ ಸಂಗತಿಯಾಯಿತು. ಭಾಷೆಯ ಮೇಲಿನ ಈ ರೀತಿಯ ಆಕ್ರಮಣಗಳು ಇತರ ದೇಶಗಳಲ್ಲಿಯೂ ನಡೆದಿವೆ. ಹೆಚ್ಚು ಸ್ಪಷ್ಟವಾದ ರೀತಿಯಲ್ಲಿ. ಬಾಂಬ್ ದಾಳಿಯ ನಂತರ ಚೂರುಚೂರಾಗಿ ಬಿದ್ದಿರುವ ನಗರದ ದಾರುಣತೆಯನ್ನು ಎಲ್ಲರೂ ಸುಲಭವಾಗಿ ನೋಡಬಹುದು. ಆದರೆ ವಿಚಾರ ಧಾರೆಗಳ ನಡುವಿನ ಯುದ್ಧದ ಫಲವಾಗಿ ನಾಶವಾಗಿ ಹೋಗಿರುವ ಭಾಷೆಯ ಹಾಳು ಹಂಪೆಯನ್ನು ನೋಡಲು ಎಲ್ಲರಿಗೂ ಸಾಧ್ಯವಿಲ್ಲ. ಅದನ್ನು ನೋಡಲು ಪದಗಳ ಜೊತೆಯಲ್ಲಿಯೇ ವ್ಯವಹಾರ ನಡೆಸುವ ಕವಿಯ, ಸೂಕ್ಷ್ಮವಾದ ಕಣ್ಣುಗಳು ಬೇಕು. ಕಲ್ಲುಗಳನ್ನು ಮತ್ತು ಇಟ್ಟಿಗೆಗಳನ್ನು ಮತ್ತೆ ತಂದು ರಾಶಿ ಹಾಕಬಹುದು. ಹೊಸ ಮನೆಗಳನ್ನು ಕಟ್ಟತೊಡಗಬಹುದು. ಆದರೆ ಸುಳ್ಳುಗಳು ಮತ್ತು ವಂಚನೆಗಳ ಪ್ರವಾಹದಲ್ಲಿ ಮುಳುಗಿಹೋದ ಭಾಷೆಯನ್ನು ಮತ್ತೆ ಸೃಷ್ಟಿಸಲು ಬೇರೇನೋ ಬೇಕು. ಅದಕ್ಕಾಗಿ ನಮ್ಮ ನಾಗರಿಕತೆಯ ತಳಹದಿಯನ್ನೇ ಮತ್ತೆ ಕಟ್ಟಬೇಕು.

ಹೀಗೆ ನಾವು ಒಂದು ವಿಷವೃತ್ತದಲ್ಲಿ ಸಿಕ್ಕಿಬಿದ್ದಿದ್ದೇವೆ. ಲೇಖಕ ಮತ್ತು ಓದುಗ ಇಬ್ಬರೂ, ಒಂದು ಅರ್ಥದಲ್ಲಿ ಅಂಗವಿಕಲವಾದ ಭಾಷೆಯಲ್ಲಿ ಸಂಪರ್ಕ ಪಡೆಯುತ್ತಾರೆ. ಆ ಭಾಷೆಯು ನಮ್ಮ ಜೀವನದ ಕೇವಲ ಮೇಲುಪದರದ ಸಾಮಾನ್ಯೀಕೃತವಾದ ಲಕ್ಷಣಗಳನ್ನು ಮಾತ್ರ ಪ್ರತಿಬಿಂಬಿಸಬಲ್ಲದು. ಅಲ್ಲಿ ಮನುಷ್ಯಾನುಭವದ ಅಪಮೌಲ್ಯೀಕರಣ ನಡೆಯುತ್ತದೆ. ಇದರ ಫಲವಾಗಿ ಭಾಷೆ ಇನ್ನಷ್ಟು ಬಡವಾಗುತ್ತದೆ. ಈಗ ಲೇಖಕ ಮತ್ತು ಓದುಗರ ನಡುವು ಸಂವಹನದ ಕಂದರವು ಉಂಟಾಗಿರುವುದಕ್ಕೆ ಬರಹಗಾರನು ದಂತ ಗೋಪುರದಲ್ಲಿ ವಾಸಿಸುತ್ತಿರುವುದು ಕಾರಣವಲ್ಲ. ಹಾಗೆಯೇ ಓದುಗನು ಕಡಿಮೆ ಸಂವೇದನಶೀಲನಾಗಿರುವುದೂ ನಿಜವಲ್ಲ. ಆದರೆ ಅವರಿಬ್ಬರೂ ದಿನದಿನವೂ ತಾವು ಜೀವನದೊಂದಿಗೆ ನಡೆಸುವ ವ್ಯವಹಾರಗಳಲ್ಲಿ, ಒಂದು ಬಗೆಯ ಪ್ರಮಾಣೀಕೃತವಾದ ಅನುಭವವನ್ನೆ ತನ್ನ ನೆಲೆಯಾಗಿ ಹೊಂದಿರುವ ಭಾಷೆಯನ್ನು ಬಳಸಬೇಕಾಗಿ ಬಂದಿದೆ. ಇಂಥ ಅನುಭವ ಎಲ್ಲರಿಗೂ ತಿಳಿಯುತ್ತದೆ. ಆದರೆ ಅದು ಎಲ್ಲ ಅರ್ಥವನ್ನೂ ಕಳೆದು ಕೊಂಡಿರುತ್ತದೆ. ಅದು ಯಾರಿಗೂ ಅನ್ವಯವಾಗುವುದಿಲ್ಲ. ನಮ್ಮ ವೃತ್ತ ಪತ್ರಿಕೆಗಳು, ಜನಪ್ರಿಯ ಸಾಪ್ತಾಹಿಕಗಳು, ಆಕಾಶವಾಣಿ ಮತ್ತು ದೂರದರ್ಶನಗಳು ಪ್ರತಿದಿನವೂ ಸಾವಿರಾರು ಪದಗಳನ್ನು ಬಳಸುತ್ತವೆ. ನಾವು ಮಾಹಿತಿಗಳು,ಸೂಕ್ತಿಗಳು ಮತ್ತು ವಸ್ತುಸ್ಥಿತಿ ಗಳ ಹುಚ್ಚು ಹೊಳೆಯಲ್ಲಿ ಕೊಚ್ಚಿಕೊಂಡು ಹೋಗುತ್ತಿದ್ದೇವೆ. ಇವೆಲ್ಲವೂ ಇರುವುದು ಮನುಷ್ಯನು ತನ್ನನ್ನು ಮತ್ತು ಇತರರನ್ನು ಅರ್ಥಮಾಡಿಕೊಳ್ಳಲು 'ನೆರವು' ನೀಡಲೆಂದು. ಸೋಜಿಗವೆಂದರೆ ನಿಜವಾಗಿ ಘಟಿಸಿರುವುದು ಇಂಥ ಅರ್ಥಮಾಡಿಕೊಳ್ಳುವಿಕೆಗೆ ವಿರುದ್ಧ ವಾದ ಸಂಗತಿ. ವಾಸ್ತವವಾಗಿ ಮನುಷ್ಯನು ದಿನೇದಿನೇ ಕಡಿಮೆ ಸಂವಹನಶೀಲನಾಗುತ್ತಿದ್ದಾನೆ. ಪ್ರಾಯಶಃ ತನ್ನ ಮನೋವಿಶ್ಲೇಷಣಕಾರರನ್ನು ಬಿಟ್ಟರೆ ಉಳಿದವರೊಂದಿಗೆ

ಅವನು 'ಮಾತನಾಡು'ವುದೇ ಇಲ್ಲ. ಇತರ ಮನುಷ್ಯರ ಜತೆಗೆ ಹಿಂದೆಂದಿಗಿಂತ ಹೆಚ್ಚು ಅಪರಿಚಿತನಾಗಿದ್ದಾನೆ, ಒಂಟಿಯಾಗಿದ್ದಾನೆ. ನಿಷ್ಕ್ರಿಯನಾಗಿದ್ದಾನೆ. ಅವನಿಗೆ ಸ್ವತ್ ತಿಳುವಳಿಕೆ ಸಾಲದು. ವಾಸ್ತವವಾಗಿ ನಮ್ಮ ಸುತ್ತ ಮೌನದ ಹಾಗೂ ಏಕಾಂತದ ಹಲವು ದ್ವೀಪಗಳು ಹರಡಿಕೊಂಡಿವೆ. ಇವುಗಳಿಗೆ ಹೊರಮುಖದ ಸಂವಹನದ ಎಲ್ಲ ಬಾಗಿಲುಗಳೂ ಮುಚ್ಚಿಕೊಂಡಿರುವಂತೆ ತೋರುತ್ತದೆ.

ಆಧುನಿಕ ಸಾಹಿತ್ಯವು ತನ್ನ ಮಹತ್ವದ ಕ್ಷಣಗಳಲ್ಲಿ ನಿಜವಾಗಿಯೂ ಈ ಕೆಲಸವನ್ನು ಮಾಡಲು ಪ್ರಯತ್ನಿಸಿದೆ: ಸಂವಹನ ಮಾಡಲು ಸಾಧ್ಯವಿಲ್ಲದ ಅನುಭವ ಪ್ರದೇಶಗಳನ್ನು ತಮ್ಮೊಳಗೆ ತುಂಬಿಕೊಂಡಿರುವ ಕಲಾಕೃತಿಗಳನ್ನು ರಚಿಸುವುದು. ಮತ್ತೆ ನೋಡಿದರೆ ಅಭಿವ್ಯಕ್ತವಾದ ಯಾವ ಅನುಭವ ಕೂಡ ಸಂಪೂರ್ಣವಾಗಿ ಸಂವಹನದ ಸಾಧ್ಯತೆಗಳನ್ನು ಕಳೆದುಕೊಂಡಿರುವುದಿಲ್ಲ. ಹಾಗೆಯೇ ಅಭಿವ್ಯಕ್ತವಾಗಬೇಕೆಂಬ ಹಂಬಲವಿಟ್ಟುಕೊಂಡಿರುವ ಯಾವುದೇ ಕಲಾಕೃತಿಯೂ ಸಂಪೂರ್ಣವಾಗಿ ಸಂವಹನವಾಗಲು ಸಾಧ್ಯವಿಲ್ಲ. ಆದ್ದರಿಂದ ಆಧುನಿಕ ಲೇಖಕನು ಬಹಳ ಪರಸ್ಪರ ವಿರೋಧವಿರುವಂತೆ ತೋರುವ ಒಂದು ಆಯ್ಕೆಯನ್ನು ಮಾಡಬೇಕಾಗಿ ಬಂದಿತು. ಬಹಳ ಆಳದ ಹಾಗೂ ಅತ್ಯಂತ ಸತ್ಯವಾದ ಅರ್ಥವನ್ನು ಭಾಷೆಯೊಳಗಡೆ ನಿಕ್ಷೇಪ ಮಾಡಿ, ಕಡಿಮೆ ಪ್ರಮಾಣದಲ್ಲಿ ಸಂವಹನವಾದರೂ ಪರವಾಗಿಲ್ಲ ಎಂದುಕೊಳ್ಳುವುದು ಅಥವಾ ಮಾತಿನ ಸಾಚಾತನವನ್ನು ಕೀಳುಗಳೆದು ಅಧಿಕ ಪ್ರಮಾಣದ ಸಂವಹನವನ್ನು ಸಾಧಿಸುವುದು.

ಇಂತಹ, ಅರ್ಥ ಮತ್ತು ಸಂವಹನಗಳ ನಡುವೆ ಮಾಡಬೇಕಾಗಿರುವ ಆಯ್ಕೆ ಆಧುನಿಕ ತಂತ್ರಜ್ಞಾನ ಯುಗದ ಗಮನೀಯ ಲಕ್ಷಣವೆಂದು ತೋರುತ್ತದೆ. ಮೂರನೆಯ ಜಗತ್ತಿನ ರಾಷ್ಟ್ರಗಳಲ್ಲಿ ಪಾರಂಪರಿಕವಾದ ಜೀವನ ಕ್ರಮಗಳು ಹಾಗೂ ಪ್ರತಿಕ್ರಿಯಾ ವಿಧಾನಗಳು ಇನ್ನೂ ಆಧುನಿಕತೆಯ ಆಕ್ರಮಣದಿಂದ ಸಂಪೂರ್ಣವಾಗಿ ನಾಶವಾಗಿಲ್ಲ. ಅಲ್ಲಿ ಕಲಾವಿದನು ತನ್ನ ಕೇಳುಗರೊಂದಿಗೆ ಜೀವಂತ ರೀತಿಯ ಸಂಬಂಧವನ್ನು ರೂಪಿಸಿಕೊಂಡಿರುತ್ತಾನೆ ಅಥವಾ ತೀರ ಇತ್ತೀಚಿನವರೆಗೆ ರೂಪಿಸಿಕೊಳ್ಳುತ್ತಿದ್ದನು. ಅಂತಹ ಸಮಾಜವು ಸರ್ವಸಮಾನ ಸಾಂಸ್ಕೃತಿಕ ನೆಲೆಗಳಿಂದ ಒಗ್ಗೂಡಿರುತ್ತದೆ. ಅಲ್ಲಿ ಮಾತು ಎನ್ನುವುದು ಕೇವಲ ಅರ್ಥವನ್ನು ಮತ್ತೊಬ್ಬ ವ್ಯಕ್ತಿಗೆ ಸಾಗಿಸಲು ಬಳಸುವ ವಾಹಕವಲ್ಲ, ಮಾಧ್ಯಮವಲ್ಲ. ಅಲ್ಲಿ ಮಾತು ಅರ್ಥದೊಂದಿಗೆ ಅವ್ಯಕ್ತ ಸಂಬಂಧವನ್ನು ಪಡೆದುಕೊಂಡಿರುತ್ತದೆ. ಎಲ್ಲಿ ಲೇಖಕ ಮತ್ತು ಓದುಗ ಇಬ್ಬರೂ ಏಕೀಕೃತವಾದ ಸಾಂಸ್ಕೃತಿಕ ಪ್ರಜ್ಞೆಯಲ್ಲಿ ಬೇರುಬಿಟ್ಟಿರುವ ಅನುಭವಗಳನ್ನು ಹೊಂದಿರುವರೋ ಅಲ್ಲಿ ಸಂವಹನವು ಸಮಸ್ಯೆಯಾಗಿ ಉಳಿಯುವುದಿಲ್ಲ. ಭಾಷೆಯು ವ್ಯಕ್ತಿಗಳ ನಡುವೆ ಹೊಸದೊಂದು ಅರ್ಥಸ್ಫುರಣೆಯನ್ನು ತರುವುದಿಲ್ಲ. ಬದಲಾಗಿ ಓದುಗರಲ್ಲಿ ಈಗಾಗಲೇ ಇರುವ ಅರ್ಥದ ಮೇಲೆ ಬೆಳಕು ಚೆಲ್ಲುತ್ತದೆ. ಹೀಗೆ ಬೆಳಕು ತುಂಬಿಕೊಂಡ ಲೇಖಕ ವಾಚಕರ ಸಂಬಂಧದ ನೆಲೆಯಲ್ಲಿ ರೂಪಕವು ಅರಳುತ್ತದೆ. ಇಂಥ ರೂಪಕ ನಿರ್ದಿಷ್ಟ ಮತ್ತು ನಿರಪೇಕ್ಷಗಳನ್ನು

ಏಕಕಾಲದಲ್ಲಿ ತನ್ನ ರಚನೆಯೊಳಗೆ ಒಳಗೊಂಡಿರುತ್ತದೆ. ಒಂದು ರೂಪಕ, ಸಂವಹನ ಮಾಡುವುದಿಲ್ಲ. ಬದಲಾಗಿ ಅದು ಓದುಗನಲ್ಲಿ ಇರುವ ಅರ್ಥವನ್ನು ಹೊರಗೆ ಒಡಮೂಡಿಸುತ್ತದೆ. ಅದು ಲೇಖಕ ಕೇಳುಗ ಇಬ್ಬರೂ ಭಾಷೆಯ ಅನುಪಮ ಶಕ್ತಿಯನ್ನು ಸಂಭ್ರಮದಿಂದ ಸ್ವೀಕರಿಸುವಂತೆ ಮಾಡುತ್ತದೆ.

ಆಧುನಿಕ ತಂತ್ರಜ್ಞಾನದ ಸಮಾಜದಲ್ಲಿ ಭಾಷೆಗೆ ಇರುವ ಈ ಸಾಮರ್ಥ್ಯವನ್ನು ಕಿತ್ತುಕೊಳ್ಳಲಾಗುತ್ತದೆ. ಭಾಷೆಯು ತನ್ನೊಳಗೆ ನೆನಪುಗಳನ್ನು ತುಂಬಿಕೊಂಡಿರುವ ಪಾತ್ರೆಯಾಗುವ ಬದಲು ಮಾಹಿತಿಗಳನ್ನು ಹಂಚುವ ವಾಹಕವಾಗುತ್ತದೆ. ಆ ಮಾಹಿತಿಗಳಾದರೂ ತೀರ ಮೇಲುಪದರದ, ಮಹತ್ವದ್ದಲ್ಲದ ಅನುಭವ ವಿವರಗಳಿಗೆ ಸೀಮಿತವಾಗಿರುತ್ತದೆ. ಇಲ್ಲೊಂದು ವಿಚಿತ್ರ ಇದೆ. ಭಾಷೆಯನ್ನು ಕೇವಲ ಸಂವಹನದ ಉಪಕರಣವಾಗಿ ಉಳಿಸಿದಾಗ ಅದು ಮಾತಿನ ರೂಪಕ ಸಾಧ್ಯತೆಗಳನ್ನು ನಾಶಮಾಡುವುದಷ್ಟೇ ಅಲ್ಲ ಸಂವಹನದ ಪರಿಣಾಮವನ್ನು ನಾಶಮಾಡುತ್ತದೆ. ಆದ್ದರಿಂದಲೇ ನಮ್ಮ ಕಾಲದ ಕೆಲವು ಮಹತ್ವದ ಲೇಖಕರು ಮತ್ತು ಕವಿಗಳು ಗತಕಾಲದ ಮಿಥ್‌ಗಳು, ಪ್ರತೀಕಗಳು ಹಾಗೂ ನೆನಪುಗಳನ್ನು ಶೋಧಿಸುವುದರ ಮೂಲಕ ದಣಿದು ಹೋಗಿರುವ ಭಾಷಿಕ ಆಕರಗಳಿಗೆ ಹೊಸ ಶಕ್ತಿಯನ್ನು ತುಂಬಲು ಯತ್ನಿಸಿದ್ದಾರೆ. ಏಕೆಂದರೆ ಆ ಪುರಾಣ ಪ್ರತೀಕಗಳು ಮತ್ತು ನೆನಪುಗಳು ಬಹಳ ಆಳವಾದ, ಅಧಿಕೃತವಾದ, ಇಡಿ ಸಮುದಾಯದ ಅನುಭವಗಳನ್ನು ತಮ್ಮ ತೆಕ್ಕೆಯೊಳಗೆ ಇಟ್ಟುಕೊಂಡಿರುತ್ತವೆ.

ಹಾಗಾದರೆ ಒಬ್ಬ ಲೇಖಕನು ಭ್ರಷ್ಟವಾಗಿರುವ ಅರ್ಥಗಳ, ಕೈಗೆ ಸಿಕ್ಕದ ಕೇಳುಗರ ಈ ಜಗತ್ತಿನಿಂದ ತಪ್ಪಿಸಿಕೊಳ್ಳಲು ಏನು ಮಾಡಬೇಕು? ಅರ್ಥಪೂರ್ಣ ಸಂವಹನದ ಎಲ್ಲ ಕನಸುಗಳಿಗೂ ವಿದಾಯ ಹೇಳಿ ತನ್ನೊಳಗೆ ಒಳಸರಿದು ಕೈಚೆಲ್ಲಿ ಕುಳಿತುಕೊಳ್ಳಬೇಕೆ? ಆಗ ಫ್ಲಾಬೆಯಷ್ಟು ಹಿಂದೆಯೇ ಪ್ರಾರಂಭವಾದ ಸ್ವಯಂಪ್ರೇರಿತ ಅಜ್ಞಾತವಾಸದ ದಾರಿಯ ತಾರ್ಕಿಕ ಮುಕ್ತಾಯವನ್ನು ತಲುಪಿದಂತಾಯಿತು. ಏಕೆಂದರೆ ಅರ್ಥ ಮತ್ತು ಸಂವಹನದ ನಡುವಿನ ಇಕ್ಕಟ್ಟನ್ನು ಬಗೆಹರಿಸಿಕೊಳ್ಳಲು ಇದಕ್ಕಿಂತ ಸುಲಭವಾದ ದಾರಿ ಯಾವುದು? ಅರ್ಥವೂ ಬೇಕಾಗಿಲ್ಲ, ಸಂವಹನವೂ ಬೇಡ ಎಂದು ತನ್ನ ಅಂತರಂಗದ, ವೈಯಕ್ತಿಕ ದರ್ಶನದ ಪರಿಶುದ್ಧ ಸ್ಥಿತಿಯಲ್ಲಿ ಮುಳುಗಿಹೋದರೆ ಮುಗಿಯಿತು.

ಯಾರೂ ವೈಯಕ್ತಿಕದರ್ಶನದ ಅಧಿಕೃತತೆಯನ್ನು ಪ್ರಶ್ನಿಸಲು ಸಾಧ್ಯವಿಲ್ಲ. ಸಮಸ್ಯೆ ಇರುವುದು ತನ್ನ ಕಲಾತ್ಮಕ, ಕಾವ್ಯಾತ್ಮಕ ಆಕರಗಳನ್ನು ಕಳೆದುಕೊಂಡಿರುವ ಭಾಷೆಯಲ್ಲಿ ಅಂಥ ದರ್ಶನವನ್ನು ಒಡಮೂಡಿಸುವುದರಲ್ಲಿ. ನಮ್ಮೆದುರಿಗೆ ಇರುವುದು ಇದೊಂದೇ ದಾರಿ. ಇಕ್ಕಟ್ಟಿನ ದಾರಿ. ಸತತವಾದ ಹತಾಶೆಯಿಂದ ತುಂಬಿದ ಹೋರಾಟ ನಡೆಸಬೇಕು. ಎಷ್ಟೇ ಅಧಿಕೃತವಾದರೂ ದಿನದಿಂದ ದಿನಕ್ಕೆ ಕುಗ್ಗುತ್ತಿರುವ ತನ್ನ ಸ್ವಂತದ ನಿಜವನ್ನು ತ್ಯಜಿಸಬಾರದು. ಅದಕ್ಕೆ ನೀರು ಬೆರೆಸಬಾರದು. ಅದಕ್ಕೆ ಜನಪ್ರಿಯ ರೂಪಕಗಳ ಕೊಳೆ

ಅಂಟದಂತೆ ನೋಡಿಕೊಳ್ಳಬೇಕು. ಆಗ, ಆಗಮಾತ್ರ ಪದಗಳು ಹೊಸ ಅರ್ಥವನ್ನು, ಸಂವಹನದ ಹೊಸ ಆಯಾಮಗಳನ್ನು ಪಡೆದುಕೊಳ್ಳುತ್ತವೆ. ಎಷ್ಟೋ ಸಲ ಮಾರ್ಕ್ಸಿಸ್ಟ್ ವಿಮರ್ಶಕರಿಗೆ ಈ ಸತ್ಯ ಗೊತ್ತಿರುವುದಿಲ್ಲ. ಕೇವಲ ಸಾಮಾಜಿಕ ಸಂಬಂಧಗಳ ನೆಲೆಯನ್ನು ಬದಲಾಯಿಸುವುದರಿಂದ ಮನುಷ್ಯಸಂವಹನದ ಪ್ರಕ್ರಿಯೆಯಲ್ಲಿ ಹುಟ್ಟಿಕೊಂಡಿರುವ ಕಂದರಗಳಿಗೆ ಸೇತುವೆ ಕಟ್ಟಲು ಸಾಧ್ಯವಿಲ್ಲ. ಮನುಷ್ಯನಿಗೆ, ಹತ್ತು ಹಲವು ಸಾಧ್ಯತೆಗಳಲ್ಲಿ ತನಗೆ ಬೇಕಾದುದನ್ನು ಆರಿಸಿಕೊಳ್ಳಲು ಸಂಪೂರ್ಣ ಸ್ವಾತಂತ್ರ್ಯವು ಸಿಗದ ಹೊರತು ಇದು ಸಾಧ್ಯವಿಲ್ಲ. ಸಾಹಿತ್ಯದ ಕ್ಷೀಣ ಧ್ವನಿ ಇಂತಹ ಸ್ವಾತಂತ್ರ್ಯವನ್ನು ಪ್ರತಿನಿಧಿಸುತ್ತದೆ. ಆಧುನಿಕ ರಾಷ್ಟ್ರವು ತಾನು ಮತ್ತೆ ಮತ್ತೆ ಬಳಸುವ, ಬಲಶಾಲಿಯಾದ ದಮನ ತಂತ್ರಗಳಿಂದ ಈ ಧ್ವನಿಯನ್ನು ಸಂಪೂರ್ಣವಾಗಿ ಕೊಲ್ಲಲಿದ್ದರೂ ಅದರ ಉಸಿರು ಕಟ್ಟಿಸುತ್ತದೆ. ಈ ದಮನದ ಕೆಲಸವು ಸಮಾಜವಾದದ ಹೆಸರಿನಲ್ಲಿ ನಡೆಯಬಹುದು. 'ಮುಕ್ತ ಸಮಾಜ'ದ ಹೆಸರಿನಲ್ಲೂ ನಡೆಯಬಹುದು. ಭಾಷೆಯ ಮೂಲ ಆಕರಗಳೇ ಅಧಿಕಾರಶಾಹಿ ಆಸಕ್ತಿಗಳ ಸ್ಪರ್ಧೆಯಿಂದ ಕಲುಷಿತವಾಗಿರುವುದರಿಂದ, ನೈತಿಕ ಮಾನದಂಡಗಳನ್ನು ಮತ್ತಷ್ಟು ಸಂಪೂರ್ಣವಾಗಿ ಪರಿಶೀಲಿಸುವುದೊಂದೇ ನಮಗಿರುವ ದಾರಿ.

ಆದ್ದರಿಂದ ಮಹತ್ವದ ಕಲಾಕೃತಿಯೊಂದು ತಕ್ಷಣ ಅರ್ಥವಾಗದಿರಬಹುದು. ಹಾಗಾಗಲು ಸಾಹಿತ್ಯರೂಪದ ನಿಗೂಢತೆ ಮತ್ತು ಅಸ್ಪಷ್ಟತೆ ಮಾತ್ರ ಕಾರಣವಲ್ಲ. ಅದಕ್ಕಿಂತ ಮುಖ್ಯವಾಗಿ ಆ ಕೃತಿಯು ಇಡಿ ಜನಸಮುದಾಯವು ಹಂಚಿಕೊಂಡಿರುವ ನಂಬಿಕೆಗಳ, ಭ್ರಮೆಗಳ ನೈತಿಕ ನೆಲೆಗಳನ್ನು ಪ್ರಶ್ನಿಸುತ್ತಿರಬಹುದು. ಸೋವಿಯಟ್ ರಷ್ಯಾದ ಸೊಲ್ಜೆನಿಟ್ಸನ್, ಅವನಿಗಿಂತ ಎಷ್ಟೋ ಮೊದಲೇ ಇಂಗ್ಲೆಂಡಿನ ಜಾರ್ಜ್ ಆರ್‌ವೆಲ್ ಹಾಗೂ ನಾಝಿ ಜರ್ಮನಿಯ ಥಾಮಸ್ ಮ್ಯಾನ್ ಇವರುಗಳನ್ನು ಅನುಮಾನಿಸಿದವರು ಕೇವಲ ಅಧಿಕಾರಿಗಳು ಮಾತ್ರವಲ್ಲ. ವಾಮಪಂಥದ ವಿಮರ್ಶಕರೆಂದು ಕರೆಸಿಕೊಳ್ಳುವವರೂ ಈ ಬರವಣಿಗೆಯನ್ನು ಇಷ್ಟಪಡಲಿಲ್ಲ. ಏಕೆಂದರೆ, ಇಂಥ ಪುಸ್ತಕಗಳನ್ನು ಓದಿ ಆ ಬೆಳಕಿನಲ್ಲಿ ತಮ್ಮ ಭ್ರಮೆಗಳನ್ನು ಕಳೆದುಕೊಳ್ಳುವುದು ಅವರಿಗೆ ಇಷ್ಟವಾಗಲಿಲ್ಲ.

ಈ ಕಾಲದ ಅತ್ಯುತ್ತಮ ಕಲಾತ್ಮಕ ಬರವಣಿಗೆಯು ಸಾಮಾಜಿಕ ಕ್ರಾಂತಿ ಮತ್ತು ಭಾಷಿಕ ಪ್ರಯೋಗಶೀಲತೆಯ ನಿರ್ಣಯ ಧೋರಣೆಗಳನ್ನು ಕೈ ಬಿಟ್ಟಿದೆ ಎನ್ನುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಲೇಖಕನು ತನ್ನ ಅನಾಥ ಸ್ಥಿತಿಯನ್ನು ಒತ್ತಿ ಹೇಳುವುದೇನೂ ದೊಡ್ಡ ಮಾತಲ್ಲ. ಹಾಗೆಯೇ ಹುಸಿ ಜನಪ್ರಿಯತೆಯ ಪರಿಭಾಷೆಯಲ್ಲಿ ತಾನೂ ಮತ್ತು ಸಮುದಾಯ ಒಂದಾಗಿರುವೆನೆಂದು ನಟಿಸುವುದು ಕೂಡ ದೊಡ್ಡ ಮಾತಲ್ಲ. ನಿಜವಾಗಿಯೂ ಕಷ್ಟದ ಕೆಲಸವೆಂದರೆ ಈ ಒಂಟಿತನದ ಪರಿಣಾಮವಾಗಿ ಹುಟ್ಟಿಕೊಂಡಿರುವ ವಿಷಾದ ಮತ್ತು ಹತಾಶೆಗಳ ಸಮಗ್ರ ಕ್ಷೇತ್ರವನ್ನು ಶೋಧಿಸುವುದು. ಈ ಶೋಧನೆಗೆ ಒಟ್ಟು ಸನ್ನಿವೇಶದ, ಗೊಂದಲಗಳಿಲ್ಲದ ಸಮಗ್ರ ತಿಳುವಳಿಕೆ ಬೇಕು. ಭಾಷೆಯನ್ನು ಭ್ರಷ್ಟಗೊಳಿಸಲು ಮತ್ತು ವಿಚಾರಗಳನ್ನು ಅಸ್ಪಷ್ಟಗೊಳಿಸಲು ಪ್ರಯತ್ನಿಸುತ್ತಿರುವ ಶಕ್ತಿಗಳು

ಅತಿ ಪ್ರಬಲವಾಗಿವೆ. ಲೇಖಕನಿಗೆ ಇದು ಗೊತ್ತಾಗಬೇಕು. ಇಂಥ ಭ್ರಷ್ಟತೆಗೆ ಬಲಿಯಾಗಿರುವವರು ಕೇಳುಗರು ಮತ್ತು ಎಲ್ಲ ಲೇಖಕರೂ ಹೌದು. ಆದ್ದರಿಂದಲೇ ಕೇಳುಗರ ಕೀಳು ಅಭಿರುಚಿಗಳ ವಿರುದ್ಧವಾದ ಪ್ರತಿಭಟನೆಯು ಜಾಣತನದ ಉಪಾಯವಾಗಿ ಬಿಡುತ್ತದೆ. ಪ್ರತಿಭಟಿಸಿದ ಹಾಗೆಯೂ ಆಯಿತು ತನ್ನ ಕೈಗಳನ್ನು ಹೊಲಸುಮಾಡಿಕೊಂಡಂತೆಯೂ ಆಗಲಿಲ್ಲ. ಇದು ಸರಿಯಾದ ದಾರಿಯಲ್ಲ. ಬದಲಾಗಿ ನಮ್ಮೆಲ್ಲರನ್ನೂ ಆವರಿಸಿರುವ ಕತ್ತಲನ್ನು ಕಡಿಮೆಮಾಡುವ, ಬೆಳಕು ತುಂಬುವ ಪ್ರಯತ್ನ ಬೇಕು.

ಭಾಷೆ ಮತ್ತು ವಿಚಾರಗಳ ನೆಲೆಯಲ್ಲಿ ಸ್ಪಷ್ಟತೆಯನ್ನು ಸಾಧಿಸಲು ಬರಹಗಾರನು ಮಾಡುವ ಈ ಪ್ರಯತ್ನವು ಒಂದು ಸಮುದಾಯವು ಒಂದು ನಿರ್ದಿಷ್ಟ ಕಾಲ ಬಿಂದುವಿನಲ್ಲಿ ಒಟ್ಟಾಗಿ ಹಂಚಿಕೊಂಡಿರುವ ಭ್ರಮೆಗಳನ್ನು ನಾಶಮಾಡುವಲ್ಲಿ ಸಾಕಷ್ಟು ಕೆಲಸ ಮಾಡುತ್ತವೆ. ನಿಜವಾಗಿ ನೋಡಿದರೆ ಆತ್ಮವಂಚಕ ನಂಬಿಕೆಗಳ ಹಂದರವು ಎಷ್ಟೋ ದುರ್ಬಲವೆಂದರೆ, ಒಂದು ಭ್ರಮೆಗೆ ಸೂಜಿ ಚುಚ್ಚಿದರೆ ಸಾಕು, ಇಡೀ ಕಟ್ಟಡವೇ ಕುಸಿದು ಬೀಳುತ್ತದೆ. ಆದ್ದರಿಂದಲೇ ಸರ್ವಾಧಿಕಾರಿ ಸಮಾಜಗಳಲ್ಲಿ ಈ ರೀತಿಯ ಭ್ರಮೆಗಳನ್ನು ಅತ್ಯಂತ ಎಚ್ಚರದಿಂದ ಕಾಪಾಡಿಕೊಳ್ಳಲಾಗುತ್ತದೆ. ಅಂಥ ಭ್ರಮೆಗಳ ರಕ್ಷಣೆಗಾಗಿ ಅಧಿಕಾರ ಶಾಹಿಯು ಯಾವ ಮೋಸವನ್ನೂ ಮಾಡಲು ತಯಾರಾಗಿರುತ್ತದೆ. ಆ ಭ್ರಮೆಗಳ ಪರಿಣಾಮವಾಗಿ ಬರುವ ನೈತಿಕ ಹಕ್ಕುಗಳನ್ನು ಕಳೆದುಕೊಳ್ಳಲು ವ್ಯವಸ್ಥೆಯು ಸಿದ್ಧವಾಗಿರುವುದಿಲ್ಲ. ಪದವನ್ನು ಅದರ ಅರ್ಥದಿಂದ ವಿಚ್ಛೇದಿಸಿ ಕ್ಲೀಷೆ ಅಥವಾ ಜಾರ್ಗನ್ ಆಗಿ ಬದಲಾಯಿಸುವ ಕೆಲಸವನ್ನು ಎಷ್ಟು ಎಷ್ಟು ಸಂಪೂರ್ಣವಾಗಿ ಮಾಡಲು ಸಾಧ್ಯವೋ ಅಷ್ಟು ಅಷ್ಟು ಪ್ರಮಾಣದಲ್ಲಿ ಅಧಿಕಾರಿಗಳಿಗೆ ಭ್ರಮೆ ಹಾಗೂ ವಾಸ್ತವತೆಗಳನ್ನು ಒಂದುಗೂಡಿಸಲು ಸಾಧ್ಯವಾಗುತ್ತದೆ. ಆಗ ಭಾಷೆಯು ಸಮುದಾಯದಿಂದಲೇ ಸೃಷ್ಟಿಯಾದ ಅರ್ಥರಹಿತ ಅನುಭವಗಳ ಕೋಟೆಯಲ್ಲಿ ಸೆರೆಯಾಗಿ ಬಿಡುತ್ತದೆ. ಮಾತನ್ನು ಈ ಕೋಟೆಯಿಂದ ಬಿಡುಗಡೆ ಮಾಡುವುದು ಲೇಖಕರ ಕೆಲಸ ಮತ್ತು ನೈತಿಕ ಕಾಳಜಿಯಾಗಬೇಕು. ಅವರು ಪ್ರತಿಯೊಂದು ಅನುಭವದಲ್ಲಿ ಹುದುಗಿರುವ ಅನನ್ಯ ಅರ್ಥವನ್ನು ಹುಡುಕಿ ತೆಗೆಯಬೇಕು. ಆಗ ಮಾತ್ರ 'ಶ್ರೋತೃ ವರ್ಗ'ವು ಭಯ ಹಾಗೂ ಅಸಹನೆಯನ್ನು ಹುಟ್ಟಿಸುವುದಿಲ್ಲ. ಲೇಖಕನಿಗೆ ಕೇಳುಗರ ಗುಂಪನ್ನು 'ಮೆಚ್ಚಿಸುವ', ವಿಶ್ಲೇಷಿಸುವ ಅಥವಾ ನಿರ್ಲಕ್ಷಿಸುವ ಅಗತ್ಯ ಉಳಿಯುವುದಿಲ್ಲ. ತಾನು ಬೇರೆ, ಕೇಳುಗರು ಬೇರೆ ಎಂಬ ಸನ್ನಿವೇಶ ಆಗ ಇರುವುದಿಲ್ಲ. ಆಗ ಕೇಳುಗರು ಲೇಖಕನ ಸ್ವಂತದ ಮುಂಚಾಚುವಿಕೆಯೇ ಆಗಿ ಬಿಡುತ್ತಾರೆ. ಲೇಖಕ ತನ್ನೊಂದಿಗೆ ಸಂವಹನ ನಡೆಸುವುದರಿಂದಲೇ ಅವರ ಜತೆಯಲ್ಲಿಯೂ ಸಂವಹನ ಮಾಡುತ್ತಿರುತ್ತಾನೆ. "ಮಾತು" 'ರೂಪಕ'ವಾಗಿ ಪರಿವರ್ತನೆ ಹೊಂದಲು ನಡೆಸುವ ಹೋರಾಟವು, ಹಂಚಿಕೊಂಡ ಅನುಭವಗಳ ಹುಡುಕಾಟವೂ ಹೌದು. ಆ ಹುಡುಕಾಟ ಯಶಸ್ವಿಯಾದಾಗ ಲೇಖಕ ಮತ್ತು ಓದುಗರ ನಡುವಿನ ಕೃತಕವಾದ ಪರಸ್ಪರ ವಿರೋಧಗಳು ಇಲ್ಲವಾಗುತ್ತವೆ. ಆ ಹಂತದಲ್ಲಿ ಸಂವಹನ ಶೀಲತೆಯ ಸಮಸ್ಯೆಯನ್ನು ಕುರಿತು ಚರ್ಚೆಯು ಅನಗತ್ಯವಾಗಿ ಬಿಡುತ್ತದೆ.

# ದೂರದರ್ಶನವೆಂಬ ಸಾಂಸ್ಕೃತಿಕ ಉದ್ಯಮ: ಕೆಲವು ಟಿಪ್ಪಣಿಗಳು

ಟಿ. ಆರ್. ಚಂದ್ರಶೇಖರ್

"Cinema leaves memories: Television manufactures oblivion"
—**Godard**

ದೂರದರ್ಶನವು ಇಂದು ಒಂದು ಸಾಂಸ್ಕೃತಿಕ ಉದ್ಯಮವಾಗಿ (Cultural Industry) ಬೆಳೆಯುತ್ತಿದೆ.* ನಮ್ಮ ಮಧ್ಯೆ ಇದು ಇರಲಿಕ್ಕೆ ಶುರುವಾಗಿ ಒಂದು ದಶಕಕ್ಕೂ ಹೆಚ್ಚು ಕಾಲವಾಗಿದೆ. ಊಳಿಗಮಾನ್ಯ ವ್ಯವಸ್ಥೆ ಇನ್ನೂ ಗಟ್ಟಿಯಾಗಿರುವ, ಆದರೆ ಬಂಡವಾಳಶಾಹಿ ವ್ಯವಸ್ಥೆ ಮೊಳಕೆಯೊಡೆಯುತ್ತಿರುವ 'ಸಂಕ್ರಮಣ' ಸ್ಥಿತಿಯಲ್ಲಿರುವ ನಮ್ಮ ಸಮಾಜದಲ್ಲಿ ಸಾಂಸ್ಕೃತಿಕ ಉದ್ಯಮವು ಯಾವ ಬಗೆಯ ಪಾತ್ರ ನಿರ್ವಹಿಸುತ್ತಿದೆಯೆಂಬುದು ಕುತೂಹಲ ಕಾರೀ ಸಂಗತಿಯಾಗಿದೆ. ದೂರದರ್ಶನವೆಂಬ ಸಾಂಸ್ಕೃತಿಕ ಉದ್ಯಮವು ನಮ್ಮ ಸಮಾಜದ ಮೇಲೆ ಬೀರುತ್ತಿರುವ ಪ್ರಭಾವ ಎಂತಹದ್ದು ಎಂಬ ಪ್ರಶ್ನೆಗಿಂತ ಅದನ್ನು ನಮ್ಮ ಸಮಾಜ ಹೇಗೆ ಸ್ವೀಕರಿಸಿದೆ ಎಂಬ ಪ್ರಶ್ನೆ ನನಗೆ ಮುಖ್ಯವೆನಿಸಿದೆ. ಮೊದಲನೆಯ ಪ್ರಶ್ನೆಗಿಂತ ಎರಡನೆಯ ಪ್ರಶ್ನೆಯು ನಮ್ಮ ಚರ್ಚೆಗೆ ಸರಿಯಾದ ನೆಲೆಯೊದಗಿಸುತ್ತದೆ ಎಂದು ನಾನು ಭಾವಿಸಿದ್ದೇನೆ. ಖಾಸಗೀಕರಣ, ಉದಾರೀಕರಣ, ಗ್ಲೋಬಲೈಸೇಶನ್ ನೀತಿಗಳು ಜಾರಿಗೆ ಬರುತ್ತಿರುವ ಸಂದರ್ಭದಲ್ಲಿ ದೂರದರ್ಶನವು ತಳೆದಿರುವ ಧೋರಣೆ ಎಂತಹದು? ವಾಣಿಜ್ಯ ಕ್ರಾಂತಿ ಹಾಗೂ ಸಮೂಹ ಮಾಧ್ಯಮ-ಸಂಪರ್ಕ ಮಾಧ್ಯಮ ಕ್ರಾಂತಿಗಳು ಜೊತೆ ಜೊತೆಯಲ್ಲಿ ಸಂಭವಿಸುತ್ತಿರುವ ನಮ್ಮ ಸಂದರ್ಭದಲ್ಲಿ ದೂರದರ್ಶನದ ನೆಲೆ ಯಾವುದು? ಸಮಾಜವನ್ನು ದೂರದರ್ಶನವು ಖಾಸಗೀಕರಣಕ್ಕೆ ಮಾನಸಿಕವಾಗಿ ಸಿದ್ಧಪಡಿಸುತ್ತಿಲ್ಲವೆ?

* * *

ದೂರದರ್ಶನವೆಂಬ ಸಾಂಸ್ಕೃತಿಕ ಉದ್ಯಮಕ್ಕೆ ತನ್ನದೇ ಆದ ಧೋರಣೆಯೊಂದಿದೆ ಎಂದು ನನಗನ್ನಿಸುವುದಿಲ್ಲ. ದೂರದರ್ಶನವು ಇಂದು ಸುದ್ದಿ-ಮಾಹಿತಿಗಳನ್ನು ಮುದ್ದೆ ಮುದ್ದೆಯಾಗಿ, ಕಚ್ಚಾ ಸ್ವರೂಪದಲ್ಲಿ ನಮ್ಮ ಮುಂದೆ ಅನಾವರಣಗೊಳಿಸುತ್ತದೆ. ಇದ್ದುದನ್ನು ಇದ್ದ ಹಾಗೆ ವಿವರಿಸುತ್ತಿದೆ. ಸರಳ ಜೀವನ ನಡೆಸುತ್ತಿದ್ದ ಮುಗ್ಧ ಗ್ರಾಮೀಣ ಜನತೆಯ ಮುಂದೆ 'ವಿಶ್ವ'ವನ್ನೇ ತೆರೆದಿಡಲಾಗುತ್ತಿದೆ.

---

* Cultural industry represents an alliance between the forces of culture and communication.

ವಾಸ್ತವಿಕವಾಗಿ 'ವಿವರಣೆ' ನೀಡುವುದು ದೂರದರ್ಶನದ ಕೆಲಸ. ದೂರದರ್ಶನವೆಂಬ ಸಾಂಸ್ಕೃತಿಕ ಉದ್ಯಮದ ಹಿಂದಿರುವುದು ಮೂಲಭೂತವಾಗಿ 'Positivist' ಧೋರಣೆಯಾಗಿದೆ. ಮೌಲ್ಯ–ನಂಬಿಕೆಗಳ ದೃಷ್ಟಿಯಿಂದ ದೂರದರ್ಶನವು ಅಲಿಪ್ತ ಧೋರಣೆಯನ್ನು ತುಂಬಾ ಎಚ್ಚರಿಕೆಯಿಂದ ಕಾಯ್ದುಕೊಂಡು ಬರುತ್ತಿದೆ. ಮೌಲ್ಯಗಳ ಬಗೆಗಿನ 'ಅಲಿಪ್ತ' ನೀತಿಯು ದೂರದರ್ಶನಕ್ಕೆ ಪವಿತ್ರವಾದ ನಿಯಮವಾಗಿಬಿಟ್ಟಿದೆ. ಅಭಿವೃದ್ಧಿ ಹಾಗೂ ಸಾಮಾಜಿಕ ಬದಲಾವಣೆಗಳ ಪ್ರಶ್ನೆಗಳು ಬಂದಾಗ ಯಾವ ವರ್ಗದ ಹಿತಾಸಕ್ತಿಗಳನ್ನು ಪ್ರತಿನಿಧಿಸಬೇಕೆಂಬುದರ ಬಗ್ಗೆ ದೂರದರ್ಶನಕ್ಕೆ ಗೊಂದಲವಿದ್ದಂತೆ ಕಾಣುತ್ತದೆ. ಇಂತಹ ಪ್ರಶ್ನೆಗಳು ಬಂದಾಗ ದೂರದರ್ಶನವು ತಟಸ್ಥ ಧೋರಣೆ ತಳೆದು ಬಿಡುತ್ತದೆ. ಆದರೆ ಸಾಹಿತ್ಯ, ಕಲೆ, ನಾಟಕ, ಸಿನಿಮಾಗಳಲ್ಲಿ ಹೀಗಾಗುವುದಿಲ್ಲ. ಸೃಜನಶೀಲತೆ ಹಾಗೂ ಆವಿಷ್ಕಾರ ಗುಣ ಹೊಂದಿರುವ ಅವು ನಿರ್ದಿಷ್ಟ ಧೋರಣೆಯನ್ನು ಹಾಗೂ ಅವು ಪ್ರತಿನಿಧಿಸುವ ಹಿತಾಸಕ್ತಿಗಳನ್ನು ಸ್ಪಷ್ಟವಾಗಿ ತಿಳಿಸಿಬಿಡುತ್ತವೆ. ಅಭಿವೃದ್ಧಿಶೀಲ ಆರ್ಥಿಕತೆಯ ಸಂದರ್ಭದಲ್ಲಿ ದೂರದರ್ಶನದ ತಟಸ್ಥ ಧೋರಣೆಯು ತುಂಬಾ ಅಪಾಯಕಾರಿಯಾಗಿ ಬಿಡುತ್ತದೆ.

*   *   *

'ಇದ್ದುದನ್ನು ಇದ್ದ ಹಾಗೆ' ಮೂಡಿಸುವ–ಈ Positivist ಧೋರಣೆಯಿಂದಾಗಿ ದೂರದರ್ಶನವು ಅಸ್ತಿತ್ವದಲ್ಲಿರುವ ಉತ್ಪಾದನಾ ಸಂಬಂಧಗಳನ್ನು, ನಂಬಿಕೆ–ಮೌಲ್ಯಗಳನ್ನು, ವಿಚಾರಗಳನ್ನು ಮತ್ತಷ್ಟು ಗಟ್ಟಿಗೊಳಿಸಿ ಬಿಡುತ್ತದೆ ಹಾಗೂ ಸಮರ್ಥಿಸುತ್ತದೆ. ಆಳುವ ವರ್ಗದ ಹಿತಾಸಕ್ತಿಗಳನ್ನು ಮಾತ್ರ ಅದು ಪೋಷಿಸುತ್ತದೆ. ಅಭಿವೃದ್ಧಿಯ ವಿಕಲತೆಯು ಸೃಷ್ಟಿಸಿರುವ ಸಾಮಾಜಿಕ ಆರ್ಥಿಕ–ತಾಂತ್ರಿಕ 'ದ್ವಂದ್ವಮಾನತೆ' (Dualism) ಯನ್ನು ದೂರದರ್ಶನವೆಂಬ ಸಾಂಸ್ಕೃತಿಕ ಉದ್ಯಮ ದೃಢೀಕರಿಸುತ್ತದೆ. ಊಳಿಗಮಾನ್ಯ–ಜಮೀನ್ದಾರಿ ವ್ಯವಸ್ಥೆಯ ಸಂಪ್ರದಾಯವಾದಿ ನಂಬಿಕೆ–ಮೌಲ್ಯಗಳನ್ನು ವಿವೇಚನಾರಹಿತವಾಗಿ ರೂಕ್ಷ ರೂಪದಲ್ಲಿ ನಮ್ಮ ಮುಂದೆ ದೂರದರ್ಶನವು ಮಂಡಿಸುತ್ತದೆ.

ಮಹಿಳೆಯನ್ನು ನಮ್ಮ ದೂರದರ್ಶನವು ಚಿತ್ರಿಸುತ್ತಿರುವ ರೀತಿಯ ಬಗ್ಗೆ ಏನನ್ನೂ ಹೇಳದಿರುವುದೆ ವಾಸಿ. Sanitary napkin ಪ್ರಚಾರಕ್ಕೆ, ಸೋಪಿನ ಪ್ರಚಾರಕ್ಕೆ ಮಹಿಳೆ ಇದ್ದಾಳೆ ಎನ್ನುವಂತಾಗಿದೆ. ಮಹಿಳೆ ಸಾಮಾಜಿಕವಾಗಿ ಪಡೆದಿರುವ ಹೀನಾಯವಾದ ಸ್ಥಾನಮಾನವನ್ನು ದೂರದರ್ಶನವು ಸಮರ್ಥಿಸುತ್ತಿದೆ. ಹೆಣ್ಣು 'ಅಬಲೆ', ಅವಳಿಗೆ 'Stay free' ಬೇಕು ಎಂಬ ನಂಬಿಕೆಗಳನ್ನು ಅದು ಗಟ್ಟಿಗೊಳಿಸುತ್ತದೆ. ರಾಷ್ಟ್ರಪತಿಭವನದಲ್ಲಿ ಅಥವಾ ಕ್ರೀಡಾ ಉತ್ಸವಗಳಲ್ಲಿ ನಡೆಯುವ ಪದಕ–ಪದವಿ ಪ್ರದಾನ ಸಮಾರಂಭಗಳಲ್ಲಿ ಸುಂದರವಾಗಿ ಸೀರೆ ಉಟ್ಟುಕೊಂಡು, ತಟ್ಟೆಯಲ್ಲಿ ಪದಕಗಳನ್ನು, ಪದವಿ ಪತ್ರಗಳನ್ನು ಇಟ್ಟುಕೊಂಡು ಗೊಂಬೆಗಳಂತೆ ನಿಲ್ಲುವುದು ಹೆಣ್ಣಿನ ಸ್ಥಾನ ಎಂದು ದೂರದರ್ಶನವು ಭಾವಿಸಿದಂತಿದೆ.

ಸಮಾಜ ವಿಜ್ಞಾನದ ಸೀಮಿತ ಚೌಕಟ್ಟಿನಲ್ಲಿ ನಮ್ಮ ಸಂದರ್ಭಕ್ಕೆ ಮುಖ್ಯವೆನಿಸಿದ 'ಅಭಿವೃದ್ಧಿ ಅಧ್ಯಯನ', 'ಮಹಿಳಾ ಅಧ್ಯಯನ' ಎಂಬ ನೂತನ ಜ್ಞಾನಶಿಸ್ತುಗಳು ಬೆಳೆಯಲು ಸಾಧ್ಯವಾಗಿದೆ. ಪಾಶ್ಚಿಮಾತ್ಯ-ಬಂಡವಾಳಶಾಹೀ ನವವಸಾಹತುಶಾಹೀ ಅಭಿವೃದ್ಧಿ ಮಾದರಿಗಳಿಗೆ ಪರ್ಯಾಯವಾದ 'ದೇಶೀಯ ಮಾದರಿ'ಗಳು ರೂಪುಗೊಳ್ಳಲು ಸಾಧ್ಯವಾಗಿದೆ. ಆದರೆ ದೂರದರ್ಶನವು ಅಭಿವೃದ್ಧಿ ಬಗ್ಗೆ ದಿವ್ಯ ನಿರ್ಲಕ್ಷ್ಯವನ್ನು ತಳೆದಂತೆ ಭಾಸವಾಗುತ್ತಿದೆ. ದೂರದರ್ಶನಕ್ಕೆ ಅಭಿವೃದ್ಧಿ ಎಂದರೆ ಓಬಿರಾಯನ ಕಾಲದಲ್ಲಿ ನಿರ್ಮಾಣವಾದ 'ಜೈವಿಕ ಅನಿಲಯಂತ್ರ', ಇಲ್ಲದಿದ್ದರೆ ಉದ್ಘಾಟನೆ ದಿನ ಮಾತ್ರ ಚಾಲೂ ಆಗಿದ್ದ ಸೌರಶಕ್ತಿ ಚಾಲಿತ 'ಬೀದಿ ದೀಪ'ಗಳನ್ನು ಬಿಟ್ಟರೆ ಬೇರೇನಿಲ್ಲ.

ತಟಸ್ಥ ಧೋರಣೆಯನ್ನು, Positivist ಧೋರಣೆಯನ್ನು ಗಟ್ಟಿಯಾಗಿ ಹಿಡಿದುಕೊಂಡಿರುವ ದೂರದರ್ಶನವು ಅಭಿವೃದ್ಧಿಯ ಬಗೆಗಿನ ಪರ್ಯಾಯಗಳನ್ನು ಕುರಿತು ಯೋಚಿಸುವುದು ಸಾಧ್ಯವಿಲ್ಲ. ದೇಶೀಯ ಅಭಿವೃದ್ಧಿ ಮಾದರಿಗಳ ಬಗ್ಗೆ ಚರ್ಚಿಸುವುದೆಂದರೆ ಮೌಲ್ಯ ನಿರ್ಣಯ ನೀಡುವುದೆಂದೇ ಅರ್ಥ,

* * *

ದೂರದರ್ಶನವು ಬಂಡವಾಳಶಾಹಿ ವ್ಯವಸ್ಥೆಯ-ಪಾಶ್ಚಿಮಾತ್ಯ ತಂತ್ರಜ್ಞಾನದ ಮಹೋನ್ನತ ಕೊಡುಗೆಯಾಗಿದೆ. ಸಂಸ್ಕೃತಿ ಹಾಗೂ ಸಂಪರ್ಕ ಮಾಧ್ಯಮಗಳ ಸಹಯೋಗವಾಗಿರುವ ದೂರದರ್ಶನವು ವಾಣಿಜ್ಯ ಕ್ರಾಂತಿಯ ಸಾಧನವೂ ಆಗಿದೆ. ಇವೆಲ್ಲವೂ ನಿಜ. ಆದರೆ ಸಮಾಜವು ದೂರದರ್ಶನವೆಂಬ ಸಾಂಸ್ಕೃತಿಕ ಉದ್ಯಮವನ್ನು ಬಂಡವಾಳಶಾಹಿ ಸ್ವರೂಪದಲ್ಲಿ ಸ್ವೀಕರಿಸುತ್ತಿಲ್ಲ. ದೂರದರ್ಶನವು ಆಧುನಿಕತೆಯ ಸಾಧನವಾಗಿರಬಹುದು. ಆದರೆ ಸಮಾಜವು ಆ ಸ್ಥಿತಿಯಲ್ಲಿಲ್ಲವಲ್ಲ!

ಬಹಳ ಅದ್ಧೂರಿಯಾಗಿ-ವೈಭವೋಪೇತವಾಗಿ ದೂರದರ್ಶನವು ಪ್ರಸಾರ ಮಾಡಿದ ರಾಮಾಯಣ-ಮಹಾಭಾರತಗಳನ್ನು ನಮ್ಮ ಸಮಾಜವು ಸ್ವೀಕರಿಸಿದ ರೀತಿಯ ನೆನಪು ಇನ್ನೂ ಹಸಿಹಸಿಯಾಗೇ ಇದೆ. ರಾಮಾಯಣ-ಮಹಾಭಾರತಗಳ ಬಗ್ಗೆ ಸಮಾಜವು ನಂಬಿಕೊಂಡು ಬಂದಿದ್ದ ಅಖಿಲಭಾರತ ಸ್ವರೂಪದ ಮೆಗಾ ಸಂಸ್ಕೃತಿಯ ಸ್ವರೂಪವನ್ನೇ ದೂರದರ್ಶನದ ಪ್ರಸಾರವು ಗಟ್ಟಿಗೊಳಿಸಿತು. ಆದರೆ ಕುವೆಂಪುರವರ 'ಶ್ರೀ ರಾಮಾಯಣ ದರ್ಶನಂ' ಇಂತಹ ಕೆಲಸ ಮಾಡಲಿಲ್ಲ. ಅದು ಸೃಷ್ಟಿಸಿದ ಪ್ರಪಂಚಕ್ಕೂ-'ರಾಮ'ನಿಗೂ ದೂರದರ್ಶನದಲ್ಲಿನ ರಮಾನಂದ ಸಾಗರ್‌ರವರ ರಾಮಾಯಣದ ಪ್ರಪಂಚಕ್ಕೂ 'ರಾಮ'ನಿಗೂ ಇರುವ ವ್ಯತ್ಯಾಸವನ್ನು ನಾವು ಗಮನಿಸಬೇಕು. (ಎರಡು ಮಾಧ್ಯಮಗಳ ಭಿನ್ನತೆಯ ಅರಿವಿದ್ದೂ, ಈ ಹೋಲಿಕೆಯು ಕುವೆಂಪುರವರ ಶ್ರೀ ರಾಮಾಯಣದರ್ಶನಂ ಗೆ ಎಸಗುವ ಅನ್ಯಾಯದ ಅರಿವಿದ್ದೂ ನಾನು ಈ ಸಾಹಸಕ್ಕೆ ಕೈಹಾಕುತ್ತಿದ್ದೇನೆ.)

'ಶ್ರೀ ರಾಮಾಯಣ ದರ್ಶನಂ' ಸೃಷ್ಟಿಸುವ ಪ್ರಪಂಚವನ್ನು ನಾವು ದೂರದರ್ಶನದಿಂದ ಬಯಸುವುದು ತಪ್ಪು. ಏಕೆಂದರೆ ದೂರದರ್ಶನವು ಕಲೆಯನ್ನು ಸೃಷ್ಟಿಸುವುದಿಲ್ಲ.

ಸಿನಿಮಾ ಕಲೆಯಂತೆ ದೂರದರ್ಶನದ ಕಲೆ ಎಂಬುದೇನೂ ಇಲ್ಲ. ("Television does not make works of art, it only makes hours of Programmes Often very good hours, but not many hours": Godard) ದೂರದರ್ಶನವು ಕೇವಲ ಕಾರ್ಯಕ್ರಮಗಳನ್ನು ನೀಡುತ್ತದೆ. ಕಾವ್ಯ–ಸಿನಿಮಾ-ನಾಟಕಗಳು ಸೃಷ್ಟಿಸುವ ಪ್ರತಿಮಾಧ್ವನಿಯನ್ನು ದೂರದರ್ಶನದಿಂದ ಸೃಷ್ಟಿಸಲು ಸಾಧ್ಯವಿಲ್ಲ.

* * *

ದೂರದರ್ಶನವು ಒಂದು ದೃಶ್ಯ-ಶ್ರವ್ಯ ಮಾಧ್ಯಮ. ಆದರೆ ದೂರದರ್ಶನದ ದೃಶ್ಯಕ್ಕೆ, ಪ್ರತಿಮೆಗಳಿಗೆ ಸ್ವತಂತ್ರ ಅಸ್ತಿತ್ವವಿರುವುದಿಲ್ಲ. 'ದೃಶ್ಯಕಾವ್ಯ' ಎಂಬ ಆಯಾಮ ದೂರದರ್ಶನಕ್ಕೆ ಇಲ್ಲವೇ ಇಲ್ಲ. ಇದಕ್ಕೆ ಕಾರಣಗಳನ್ನು ಹುಡುಕುವುದು ಕಷ್ಟವೇನಲ್ಲ. ದೂರದರ್ಶನದಲ್ಲಿ ಪರದೆಗೂ ವೀಕ್ಷಕನಿಗೂ ನಡುವೆ ಯಾವುದೇ 'ದೂರ'ವಿರುವುದಿಲ್ಲ. ದೂರದರ್ಶನವು ಸದಾಕಾಲ ವೀಕ್ಷಕರನ್ನೇ ಸಂಬೋಧಿಸುತ್ತಿರುತ್ತದೆ. ದೂರದರ್ಶನವನ್ನು ಅತಿಯಾಗಿ ಆಕ್ರಮಿಸಿಕೊಂಡಿರುವ ಸುದ್ದಿ–ಸಮಾಚಾರ–ಸಂದರ್ಶನ–ಚರ್ಚೆ ಮುಂತಾದವು ಗಳ ಪ್ರಸಾರವು ಅದನ್ನು ಕೇವಲ ಶ್ರವ್ಯ ಸಾಧನವನ್ನಾಗಿ ಮಾಡಿಬಿಟ್ಟಿದೆ. ದೂರದರ್ಶನ ದಲ್ಲಿನ ಎಲ್ಲಾ ಕಾರ್ಯಕ್ರಮಗಳಿಗೂ 'ನೇರ ಪ್ರಸಾರ'ದ ಗುಣವಿರುತ್ತದೆ. ಆದ್ದರಿಂದ ದೂರದರ್ಶನದಲ್ಲಿ ಖಾಸಗೀತನಕ್ಕೆ, ಏಕಾಂತತೆಗೆ ಅವಕಾಶವಿಲ್ಲ. 'ಸಾರ್ವಜನಿಕತೆ'ಯು ದೂರದರ್ಶನದ ಮುಖ್ಯ ಲಕ್ಷಣವಾಗಿದೆ. ದೂರದರ್ಶನಕ್ಕೆ ಸಾಮುದಾಯಿಕ ಗುಣವಾಗಲಿ (Community) ಅಥವಾ ವ್ಯಕ್ತಿಗತ ಗುಣವಾಗಲಿ (Individualistic) ಇಲ್ಲ. ಅದಕ್ಕಿರುವುದು 'ಸಾರ್ವಜನಿಕ' (Public) ಗುಣ.

ದೂರದರ್ಶನದಲ್ಲಿ, ಮಾತಾಡುವ ಸಲುವಾಗಿ ಪ್ರತಿಮೆ–ದೃಶ್ಯಗಳಿವೆ, ಮಾತಾಡುವುದ ಕ್ಕಿಂತ ಹೆಚ್ಚಿನದೇನನ್ನೂ ಅವು ಮಾಡುವುದಿಲ್ಲ. ದೂರದರ್ಶನದಲ್ಲಿ 'ವಿವರಣೆ' ಮಾತ್ರ ಸಾಧ್ಯ. ಅದರಲ್ಲಿ ನಿರೂಪಣೆ ಸಾಧ್ಯವಿಲ್ಲ. ನಿರೂಪಕನೂ ಅಲ್ಲಿರಲು ಸಾಧ್ಯವಿಲ್ಲ. ನಿರೂಪಣೆ ಅಥವಾ ನಿರೂಪಕ ಒಂದು ಕಲಾಕೃತಿಯ ಅವಿಭಾಜ್ಯ ಅಂಗವಾಗಿ ಬಿಡಬಹುದು. ಕಲಾಕೃತಿಯಲ್ಲಿ ಕಲಾವಿದ ನಿರೂಪಕನನ್ನು ಒಂದು ತಂತ್ರವಾಗಿ ಬಳಸಬಹುದು. ನಿರೂಪಕನಿಗೆ ಒಂದು ಕಲಾತ್ಮಕ ಅಸ್ತಿತ್ವವಿರುತ್ತದೆ. ಆದರೆ ದೂರದರ್ಶನದ 'ವಿವರಣೆ'ಗೆ ಇಂತಹ ನೆಲೆ ಸಾಧ್ಯವಿಲ್ಲ. ದೂರದರ್ಶನವೆಂದರೆ ಕೇವಲ ಮಾತು, ಮಾತು, ಮಾತು! ದೂರದರ್ಶನಕ್ಕೆ ಸ್ವಪ್ನಲೋಕವೆಂಬುದಿರುವುದಿಲ್ಲ. ಅದು ಸದ್ಯದ ವರ್ತಮಾನದ–ವಾಸ್ತವದ ಲೋಕದಲ್ಲಿ ತೆರೆದುಕೊಳ್ಳುತ್ತದೆ.

* * *

ದೂರದರ್ಶನವು ಕೇವಲ ಒಂದು ಉಪಯುಕ್ತ ಸರಕು. ದೂರವಾಣಿಯಂತೆ, ಸ್ಕೂಟರ್ ನಂತೆ, ಯಾಕೆ ಮನೆಯಲ್ಲಿನ ಕುರ್ಚಿ-ಟೇಬಲ್‌ಗಳಂತೆ ಅದೊಂದು ಸರಕು. ಸರಕಿಗಿಂತ ಹೆಚ್ಚಿನ

ದೇನನ್ನೂ ದೂರದರ್ಶನವು ಧ್ವನಿಸುವುದಿಲ್ಲ. ಸಮಾಜವು ದೂರದರ್ಶನವನ್ನು ಸ್ವೀಕರಿಸಿರುವ ಬಗೆಯೂ ಇದೇ ಆಗಿದೆ. ದೂರದರ್ಶನವು ಸುದ್ದಿ ಮಾಹಿತಿ ಒದಗಿಸುವ ಒಂದು ಮಾಯಾ ಪೆಟ್ಟಿಗೆ ಅಲ್ಲಿ ನಮಗೆ ಸುದ್ದಿಯೇ ಮುಖ್ಯ. ದೂರದರ್ಶನವೆಂಬ ಸಾಂಸ್ಕೃತಿಕ ಉದ್ಯಮವು ಸರಬರಾಜು ಮಾಡಿದ್ದನ್ನು ಸ್ವೀಕರಿಸುವ ಉಪಭೋಗಿ ವೀಕ್ಷಕ. ಇಲ್ಲಿ ವೀಕ್ಷಕನು ಸಹೃದಯನೂ ಅಲ್ಲ, ದೂರದರ್ಶನವು ಒಂದು ಕಲೆಯ ಮಾಧ್ಯಮವೂ ಅಲ್ಲ. ಇಲ್ಲಿ ವೀಕ್ಷಕನಿಗೆ ಆಯ್ಕೆಯ ಸ್ವಾತಂತ್ರ್ಯವಿಲ್ಲ. ದೂರದರ್ಶನದಲ್ಲಿ ಆಸ್ವಾದಿಸಲು ಏನೂ ಇರುವುದಿಲ್ಲ. ಅಲ್ಲಿ ರಾರಾಜಿಸುವುದು ಕೇವಲ ಉಪಭೋಗಿಗುಣ. ಸಿನಿಮಾ-ಸಾಹಿತ್ಯ-ಕಲೆಗಳಂತೆ ದೂರದರ್ಶನದಲ್ಲಿ ವೀಕ್ಷಕನಿಗೆ ಉದ್ದೇಶವೆಂಬುದಿರುವುದಿಲ್ಲ. ದೂರದರ್ಶನವು ಚಾಲೂ ಇರುತ್ತದೆ ಅದರ ಮುಂದೆ ಮಕ್ಕಳು ಆಡುತ್ತಿರುತ್ತವೆ-ಅಳುತ್ತಿರುತ್ತವೆ. ಒಬ್ಬರ ಕೈಯಲ್ಲಿ ಪತ್ರಿಕೆ ಇದ್ದರೆ, ಮತ್ತೊಬ್ಬರು ಉಪಾಹಾರ ಸ್ವೀಕರಿಸುತ್ತಿರಬಹುದು, ಅಡುಗೆ ಮನೆಯಿಂದಲೇ 'ಕತೆಯಲ್ಲಿ ಏನಾಯಿತು' ಎಂಬ ಪ್ರಶ್ನೆಗಳ ಸುರಿಮಳೆಯಾಗುತ್ತಿರುತ್ತದೆ. ಇದು ದೂರದರ್ಶನ.

* * *

ದೂರದರ್ಶನ ಯಾರಿಗಾಗಿ? ಅದರ ಉದ್ದೇಶವೇನು? ಈ ಪ್ರಶ್ನೆಗಳಿಗೆ ಉತ್ತರ ದೊರೆಯುವುದಿಲ್ಲ. ದೂರದರ್ಶನದ ಉದ್ದೇಶ ಮನರಂಜನೆಯೇ? ಅಥವಾ ಕೇವಲ ಸುದ್ದಿ-ಸಮಾಚಾರಗಳನ್ನು ಹರಿಸುವುದೇ? ಅಭಿವೃದ್ಧಿ, ಸಾಮಾಜಿಕ ಬದಲಾವಣೆಗಳ ಬಗ್ಗೆ ದೂರದರ್ಶನದ ಹೊಣೆ, ಜವಾಬ್ದಾರಿ ಏನೂ ಇಲ್ಲವೆ? ಇಂದು ದೂರದರ್ಶನವು 'ಸರಕು ಸಂಸ್ಕೃತಿ'ಯನ್ನು ತಾರತಮ್ಯ ಪ್ರಜ್ಞೆ ಇಲ್ಲದೆ ಪ್ರಸಾರ ಮಾಡುತ್ತಿದೆ. ಭೂಕಂಪದಿಂದ ಕಿಲಾರಿಯಲ್ಲಿ ಸಂಭವಿಸಿದ ಅನಾಹುತಗಳ ಬಗೆಗಿನ ಕಾರ್ಯಕ್ರಮವನ್ನು ಅನುಸರಿಸಿ, ಏಷಿಯನ್ ಪೇಂಟ್ಸ್‌ನ ಅಂದವಾದ ಮನೆಯ ಜಾಹೀರಾತು ದೂರದರ್ಶನದಲ್ಲಿ ಬರುತ್ತದೆ. ಪರಿಹಾರ ಶಿಬಿರಗಳಲ್ಲಿ ಆಹಾರ ಹಂಚುತ್ತಿರುವ ದೃಶ್ಯದ ಹಿಂದೆಯೇ 'ಮ್ಯಾಗಿ ಸಾಸ್'ನ ಜಾಹೀರಾತು ಬರುತ್ತದೆ. ಈಗಾಗಲೇ ರೋಗಗ್ರಸ್ತವಾಗಿರುವ, ಸೂಕ್ಷ್ಮತೆಯ ಗುಣವನ್ನೇ ಕಳೆದುಕೊಂಡಿರುವ ಸಮಾಜದಲ್ಲಿ ದೂರದರ್ಶನವು ವಿಷಯವನ್ನು ಬಿತ್ತುವ ಕೆಲಸವನ್ನು ಮಾತ್ರ ಮಾಡುತ್ತಿದೆ ಸೆಟಲೈಟ್ ಟಿ. ವಿ.ಯ ವಿವಿಧ ಛಾನೆಲ್‌ಗಳೂ ಚಾಲನೆಗೊಂಡಿರುವ ಈ ದಿನಮಾನಗಳಲ್ಲಿ ದೂರದರ್ಶನವು ಜನತೆಯಿಂದ, ಜನರ ಜೀವನದಿಂದ, ಸಂಸ್ಕೃತಿಯಿಂದ ದೂರಾಗುವ ಸಾಧ್ಯತೆಯೇ ಹೆಚ್ಚು. ಇಂದು ದೂರದರ್ಶನ ಬಂದಿದೆ. ಬಣ್ಣದ ದೂರದರ್ಶನ ಬಂದಿದೆ. S. T. D. ಬಂದಿದೆ. ಸಣ್ಣ-ಪುಟ್ಟ ನಗರಗಳಿಗೂ ಬಂದಿದೆ. Fax ಬಂದಿದೆ. 'FM' ರೇಡಿಯೋಗಳು ಬಂದಿವೆ. ವಿಡಿಯೊ ಲೈಬ್ರರಿ ಬಂದಿದೆ. ವಾರಪತ್ರಿಕೆ-ದಿನಪತ್ರಿಕೆಗಳ ಮಹಾಪೂರವೇ ಹರಿದಿದೆ. ನಿಜಕ್ಕೂ ಇಂದು ನಾವು 'ಸಂಪರ್ಕ-ಸಮೂಹ ಮಾಧ್ಯಮ ಕ್ರಾಂತಿ'ಯನ್ನು ಅನುಭವಿಸುತ್ತಿದ್ದೇವೆ. ಈ ಕ್ರಾಂತಿ-ಉತ್ಪಾತದ ಫಲ ಮಾತ್ರ ಸಮಾಜದ 'ಹಾಲಿನ ಕೆನೆ' ವರ್ಗಕ್ಕೆ ಸೀಮಿತವಾಗಿದೆ.

ಈ ಕ್ರಾಂತಿಯ ಫಲ ಅನುಭವಿಸುತ್ತಿರುವವರಿಗೆ 'ಕಾಲ–ದೂರ'ದ ಸಮಸ್ಯೆಯಿಲ್ಲ. ಆದರೆ ಕಾಲ–ದೂರದ ದೃಷ್ಟಿಯಿಂದ ೧೮ನೇ ಶತಮಾನದಲ್ಲಿ ಬದುಕುತ್ತಿರುವ ಹಳ್ಳಿಗರು–ಹಳ್ಳಿಗಳೂ ನಮ್ಮ ಸಮಾಜದಲ್ಲಿವೆ. ದೂರದರ್ಶನವು ಸೃಷ್ಟಿಸುತ್ತಿರುವ-ತೀವ್ರಗೊಳಿಸುತ್ತಿರುವ ಈ ಕಂದರ ನಮ್ಮನ್ನು ಎಲ್ಲಿಗೊಯ್ಯಬಹುದು!

* * *

ದೂರದರ್ಶನದ ಬಗ್ಗೆ ಚಿಂತಿಸಿದಂತೆಲ್ಲಾ ಕೇವಲ ಪ್ರಶ್ನೆಗಳು ನಮ್ಮ ಎದುರಾಗುತ್ತವೆ. ಉತ್ತರಗಳು ಗೋಚರಿಸುವುದಿಲ್ಲ. ದೂರದರ್ಶನವನ್ನು ಕುರಿತು ತೀವ್ರವಾದ ಚರ್ಚೆ–ಸಂವಾದ ಪಾಶ್ಚಿಮಾತ್ಯ ದೇಶಗಳಲ್ಲೂ ಪ್ರಾರಂಭವಾಗಿವೆ. ಹಾಗೆ ನೋಡಿದರೆ ನಮ್ಮ ಸಂದರ್ಭದಲ್ಲಿ ದೂರದರ್ಶನದ ಬಗ್ಗೆ ಚರ್ಚೆ–ಅಧ್ಯಯನಗಳು ಕಡಿಮೆಯೆಂದೇ ಹೇಳಬೇಕು. ಈ ಬಗ್ಗೆ ಗಂಭೀರವಾದ ಚರ್ಚೆ–ಸಂವಾದ ನಡೆಯಬೇಕಾದ ಆವಶ್ಯಕತೆ ಇದೆ. 'ಸಾಂಸ್ಕೃತಿಕ ನೀತಿ'ಯೊಂದರ ಆವಶ್ಯಕತೆಯ ಬಗ್ಗೆ ಮಾತಾಡುತ್ತಿರುವ ಇಂದಿನ ದಿನಮಾನಗಳಲ್ಲಿ 'ಸಾಂಸ್ಕೃತಿಕ ಉದ್ಯಮ' ಎಂಬ ಪರಿಕಲ್ಪನೆಯು ದೂರದರ್ಶನದ ನಿಜವಾದ ಸ್ವರೂಪವನ್ನು ಹಿಡಿದಿವೆ ಎಂದು ನಾನು ಭಾವಿಸಿದ್ದೇನೆ. ಖಾಸಗೀಕರಣ, ಉದಾರವಾದೀಕರಣ ಮತ್ತು ಗ್ಲೊಬಲೈಸೇಶನ್‌ಗಳ ಹಿನ್ನೆಲೆಯಲ್ಲಿ 'ಸಂಸ್ಕೃತಿ'ಯು ಉದ್ಯಮವಾಗುವ ಸಾಧ್ಯತೆಯೇ ಹೆಚ್ಚು. ಸಂಸ್ಕೃತಿಯ ಮೂಲ ಲಕ್ಷಣವೆಂದರೆ ಅದರ ವೈವಿಧ್ಯ ಹಾಗೂ ನಮ್ಮ ಸಂದರ್ಭದಲ್ಲಿ ಅದರ 'ಬಹುತ್ವ' ಗುಣ ಆದರೆ ಉದ್ಯಮವು ಏಕರೂಪತೆಯನ್ನು ಬಯಸುತ್ತದೆ. ದೊಡ್ಡ ಪ್ರಮಾಣದ ಸಾಂಸ್ಕೃತಿಕಉದ್ಯಮವಾದ ದೂರದರ್ಶನವೂ ಸಹ ಇಂದು ಇಂತಹ ಏಕರೂಪತೆ ರೋಗಕ್ಕೆ ತುತ್ತಾಗಿದೆ. ಈ ಎಲ್ಲಾ ಬೆಳವಣಿಗೆಗಳು ಭಾರತದಲ್ಲಿ 'ದೇಶೀಯ ಸಂಸ್ಕೃತಿ'ಯನ್ನು ಅಪಾಯಕ್ಕೆ ಸಿಲುಕಿಸಿವೆ. ಈಬಗ್ಗೆ ನಾವು ತೆರೆದ ಮನಸ್ಸಿನಿಂದ ಯೋಚಿಸುವ ಆವಶ್ಯಕತೆ ಇದೆ.

## ಗ್ರಂಥ ಋಣ


೧. Jacques kersuabon and Kumar Sahani (Eds) 'Cinema and Television' (1991) (Fifty years of reflection in France) orient lougsuah-New Delhi.

೨. P.C. Joshi. 'Communication and Social change', in Social Action, No 2. Vol 41, April-June 1991. PP 121-155.

# ಪ್ರಾದೇಶಿಕ ಭಾಷಾ ಪತ್ರಿಕೋದ್ಯಮ ಹೊಸ ಸವಾಲುಗಳು

**ಡಿ. ವಿ. ರಾಜಶೇಖರ**

ಸಂಪರ್ಕ ಮಾಧ್ಯಮಗಳಲ್ಲಿ ಹೊಸ ಕ್ರಾಂತಿಯೇ ಆಗಿದೆ. ಮಾಹಿತಿಹಸಿವಿನ ಮಧ್ಯೆ ಈಗ ನಾವು ಸಿಕ್ಕಿಕೊಂಡಿದ್ದೇವೆ. ಈ ಶತಮಾನವನ್ನು ಕೆಲವರು ಮಾಹಿತಿ ಸ್ಫೋಟ ಯುಗವೆಂದೇ ಕರೆಯುತ್ತಿದ್ದಾರೆ. ಹೊಸ ವ್ಯವಸ್ಥೆಯೊಂದರ ಆಗಮನದ ಮೊದಲ ಅಧ್ಯಾಯವೆಂದೇ ಈ ಬೆಳವಣಿಗೆಗಳನ್ನು ಗುರುತಿಸಲಾಗುತ್ತಿದೆ. ಮಾಹಿತಿ ಸಂವಹನದ ದೃಷ್ಟಿಯಿಂದ ಇಡೀ ಪ್ರಪಂಚ ಈಗ ಒಂದು ಹಳ್ಳಿಯಾದಂತಾಗಿದೆ. ವಿಶ್ವದ ಯಾವುದೇ ಮೂಲೆಯಲ್ಲಿ ಏನೇ ನಡೆಯಲಿ, ನಮ್ಮ ಪಕ್ಕದ ಬೀದಿಯಲ್ಲೇ ಅದು ನಡೆದಂತೆ ಸಂಪರ್ಕ ಮಾಧ್ಯಮಗಳು ಆ ಘಟನೆಗಳನ್ನು ನಮ್ಮ ಮುಂದೆ ತೆರೆದಿಡುತ್ತಿವೆ. ಕಾಲದೇಶಗಳ ಅಂತರ ಊಹೆಗೂ ನಿಲುಕದಷ್ಟು ಕಡಿಮೆಯಾಗಿದೆ. ಸಂವಹನವು ಮಾನವ ಚಟುವಟಿಕೆಯ, ಅಭಿವೃದ್ಧಿಯ ಅವಿಭಾಜ್ಯ ಅಂಗವಾಗಿ ಈಗ ರೂಪು ತಳೆದಿದೆ.

ಈ ಬೆಳವಣಿಗೆಗಳು ಸಹಜವಾಗಿಯೇ ಭಾರತೀಯ ಪತ್ರಿಕೋದ್ಯಮದ ಮೇಲೆ ಪ್ರಭಾವ ಬೀರಿವೆ. ಸಂಪರ್ಕ ಮಾಧ್ಯಮದಲ್ಲಾಗಿರುವ ಕ್ರಾಂತಿ ಒಂದು ರೀತಿಯಲ್ಲಿ ಪತ್ರಿಕೋದ್ಯಮದಲ್ಲಿ, ಅದರಲ್ಲಿಯೂ ಬಡ ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳ ಪತ್ರಿಕೋದ್ಯಮದಲ್ಲಿ ಸಾಕಷ್ಟು ಗೊಂದಲಗಳನ್ನೇ ಉಂಟುಮಾಡಿದೆ. ಮಾಹಿತಿ ಪೂರೈಕೆ ಹಾಗೂ ಸುದ್ದಿ ಪ್ರಸಾರ ಇತ್ತೀಚಿನ ದಶಕಗಳಲ್ಲಿ ವ್ಯಾಪಾರವಾಗಿ ಪರಿಣಮಿಸಿರುವುದರಿಂದ ವಿಚಿತ್ರ ರೀತಿಯ ಸಮಸ್ಯೆಗಳು ಉದ್ಭವವಾಗಿವೆ. ಇವುಗಳಲ್ಲಿ ಮುಖ್ಯವಾದುದು ಮಾಹಿತಿ ಹಾಗೂ ಸಂವಹನ ಮಾಧ್ಯಮಗಳ ಮೇಲಿನ ಏಕಸ್ವಾಮ್ಯ.

ಆಧುನಿಕ ಸಮಾಜದಲ್ಲಿ ಮಾಹಿತಿ ವಿಜ್ಞಾನವು ಒಂದು ಮುಖ್ಯ ಸಂಪತ್ತಾಗಿರುವುದು, ಅದು ಆರ್ಥಿಕ ಚಟುವಟಿಕೆಯಾಗಲು ಮುಖ್ಯ ಕಾರಣವಾಗಿದೆ. ಹೀಗೆಂದೇ ಶ್ರೀಮಂತ ದೇಶಗಳು ಹಾಗೂ ಆ ದೇಶಗಳ ಶ್ರೀಮಂತ ವಾಣಿಜ್ಯ ಸಂಸ್ಥೆಗಳು ಮಾಹಿತಿ–ಸುದ್ದಿ ವಿತರಣೆಯ, ಸಂವಹನದ ಚಟುವಟಿಕೆಗಳಲ್ಲಿ ತೊಡಗಿವೆ. ಈ ಚಟುವಟಿಕೆ ವ್ಯಾಪಾರ–ವಹಿವಾಟಾಗಿ ಪರಿವರ್ತಿತವಾಗಿರುವುದರಿಂದ ಸಾಕಷ್ಟು ಹಣವನ್ನು ಈ ಉದ್ಯಮದಲ್ಲಿ ತೊಡಗಿಸಿವೆ. ತಮ್ಮ ಇತರೆ ವ್ಯಾಪಾರ-ವಹಿವಾಟುಗಳ ಹಿತಾಸಕ್ತಿಯನ್ನು ಕಾಪಾಡಿಕೊಳ್ಳಲು ಈ ಸುದ್ದಿ ವಿತರಣೆ ವಹಿವಾಟು ಆ ಸಂಸ್ಥೆಗಳಿಗೆ ನೆರವಾಗಿದೆ. ಈ ರೀತಿಯ ಸಂಬಂಧ ಇತ್ತೀಚಿನ ಒಂದೆರಡು ದಶಕಗಳಲ್ಲಿ ಭಿನ್ನ ಆಯಾಮವನ್ನೇ ಪಡೆದಿದೆ. ಒಂದು ದೇಶದ ಆರ್ಥಿಕ–ಸಾಮಾಜಿಕ ಚಟುವಟಿಕೆಗಳ ಮೇಲೆ ಪ್ರಭಾವ ಬೀರುವಷ್ಟು, ಅಷ್ಟೇ ಏಕೆ ನಿಯಂತ್ರಣ

ಪಡೆಯುವಷ್ಟು ಪ್ರಭಾವಶಾಲಿಯಾಗಿ ಆ ಸುದ್ದಿ ಸಂಸ್ಥೆಗಳು ಬೆಳೆದಿವೆ ಎಂದರೆ ಪರಿಸ್ಥಿತಿ ಹೇಗಿರಬಹುದೆಂಬುದನ್ನು ಯಾರಾದರೂ ಊಹಿಸಿಕೊಳ್ಳಬಹುದು.

ತಮ್ಮ ಇತರೆ ವ್ಯಾಪಾರ ವಹಿವಾಟು ಹಿತಾಸಕ್ತಿಯನ್ನಷ್ಟೇ ಈ ಅಂತರರಾಷ್ಟ್ರೀಯ ಸುದ್ದಿ ಸಂಸ್ಥೆಗಳು ಕಾಪಾಡಿಕೊಳ್ಳುವುದಿಲ್ಲ. ಆಯಾ ದೇಶಗಳ ರಾಜಕೀಯ ಹಿತಾಸಕ್ತಿಯನ್ನೂ ಕಾಪಾಡಿಕೊಳ್ಳುವಷ್ಟು ಮುಂದೆ ಹೋಗಿವೆ. ಈ ಸ್ವಹಿತಾಸಕ್ತಿ ಸಹಜವಾಗಿ ದುರ್ಬಲರಿಗೆ ಮಾರಕವಾಗಿದೆ. ಬಡ ಹಾಗೂ ಅಭಿವೃದ್ಧಿಶೀಲ ದೇಶಗಳಲ್ಲಿ ತಂತ್ರಜ್ಞಾನವೂ ಇಲ್ಲ. ವೃತ್ತಿ ಪರಿಣತಿಯೂ ಇಲ್ಲ ಅಥವಾ ಅಂಥದೊಂದು ವ್ಯವಸ್ಥೆಯನ್ನು ಕಲ್ಪಿಸುವಂಥ ಆರ್ಥಿಕ ಸಾಮರ್ಥ್ಯವೂ ಇಲ್ಲ. ಹೀಗಾಗಿ ಅಂತರರಾಷ್ಟ್ರೀಯ ಸುದ್ದಿ ಸಂಸ್ಥೆಗಳು ಪ್ರಸಾರ ಮಾಡಿದ್ದೇ ಸುದ್ದಿ. ಸುಳ್ಳು ಬರೆದರೂ ಅಥವಾ ಸ್ವಹಿತಾಸಕ್ತಿ ಗಮನದಲ್ಲಿಟ್ಟುಕೊಂಡು ಬರೆದರೂ ಏನೂ ಮಾಡಲಾಗದಂಥ ಸ್ಥಿತಿ. ಈ ಸ್ಥಿತಿ ಒಂದು ರೀತಿಯಲ್ಲಿ ಏಕಮುಖ ಸುದ್ದಿ ಪ್ರಸಾರ ವ್ಯವಸ್ಥೆಯನ್ನು ಸೃಷ್ಟಿಸಿದೆ.

ಎರಡನೆಯ ಮಹಾಯುದ್ಧದ ನಂತರ ಪ್ರಜಾತಂತ್ರವು ವಿಶ್ವದಲ್ಲಿ ಗಟ್ಟಿಗೊಂಡಿತು. ಸಾಮ್ರಾಜ್ಯವಾದೀ ಧೋರಣೆ ಅವಸಾನ ಕಂಡಿತು. ಆದರೆ ಅದು ಬೇರೊಂದು ರೀತಿಯಲ್ಲಿ ಸುದ್ದಿ ಸಾಮ್ರಾಜ್ಯದ ಮೇಲೆ ಅಧಿಕಾರಸ್ಥಾಪನೆಯಾಗಿ ಬೆಳೆಯಿತು. ಪ್ರಜಾತಂತ್ರದ ಹೆಸರಿನಲ್ಲಿ ಬಂಡವಾಳಶಾಹಿ ಪದ್ಧತಿಯ ಪ್ರತಿಪಾದಕರಾಗಿ ಸುದ್ದಿ ಸ್ವಾಮ್ಯ ಪಡೆದಿರುವ ಬಹುರಾಷ್ಟ್ರೀಯ ಕಂಪನಿಗಳು ಬೆಳೆದು ನಿಂತಿವೆ. ಅಮೆರಿಕದ ಅಸೋಸಿಯೇಟೆಡ್ ಪ್ರೆಸ್ (ಎ. ಪಿ), ಯುನೈಟೆಡ್ ಪ್ರೆಸ್ ಇಂಟರ್‌ನ್ಯಾಶನಲ್ (ಯು. ಪಿ. ಐ): ಬ್ರಿಟನ್‌ನ ರಾಯಿಟರ್ಸ್, ಫ್ರಾನ್ಸ್‌ನ ಎ. ಎಫ್. ಪಿ ಸುದ್ದಿ ಸಂಸ್ಥೆಗಳು ವಿಶ್ವದ ಸಂವಹನ ಮಾಧ್ಯಮಗಳ ಮೇಲೆ ಹಿಡಿತ ಸ್ಥಾಪಿಸಿರುವ ಬಹು ಮುಖ್ಯ ಸಂಸ್ಥೆಗಳು. ಸುದ್ದಿಯ ವಿಶ್ವಜಾಲ ಪಡೆದಿರುವ ಈ ಸುದ್ದಿ ಸಂಸ್ಥೆಗಳು ಒಂದು ದೇಶದ ರಾಜಕೀಯ–ಆರ್ಥಿಕ ಭವಿಷ್ಯವನ್ನು ನಿರ್ಧರಿಸುವಷ್ಟು ಬಲವಾಗಿವೆ. ಅಷ್ಟೇ ಅಲ್ಲ, ಜನರ ಅಭಿರುಚಿ, ಬದುಕಿನ ಮಾರ್ಗವನ್ನೇ ಬದಲಾಯಿಸುವಷ್ಟು ಪ್ರಬಲವಾಗಿವೆ.

ಬಹುಶಃ ಇದೇ ಕಾರಣದಿಂದಲೇ ಸುದ್ದಿ ಪ್ರಸಾರ ವಿತರಣೆಗೆ ಸಂಬಂಧಿಸಿದಂತೆ ಬಡ ಮತ್ತು ಅಭಿವೃದ್ಧಿಶೀಲ ಹಾಗೂ ಶ್ರೀಮಂತ ರಾಷ್ಟ್ರಗಳ ನಡುವೆ ಸಾಕಷ್ಟು ತಕರಾರುಗಳು ಇವೆ. ಸಂವಹನ ಪ್ರಕ್ರಿಯೆಯಲ್ಲಿರುವ ಈ ಅಸಮತೆ–ಏಕಸ್ವಾಮ್ಯವನ್ನು ನಿವಾರಿಸುವ ಉದ್ದೇಶದಿಂದಲೇ ವಿಶ್ವಸಂಸ್ಥೆಯ ಶಿಕ್ಷಣ, ವಿಜ್ಞಾನ ಹಾಗೂ ಸಂಸ್ಕೃತಿ ಸಂಘಟನೆ (ಯುನೆಸ್ಕೊ) ಆಯೋಗವೊಂದನ್ನು ನೇಮಿಸಿ ಸಮಸ್ಯೆಗಳ ಅಧ್ಯಯನ ನಡೆಸಿದೆ. ಸಂಪರ್ಕ ಮಾಧ್ಯಮಗಳಿಗೆ ಸಂಬಂಧಿಸಿದಂತೆ, ಅಭಿವೃದ್ಧಿಶೀಲ ಬಡ ರಾಷ್ಟ್ರಗಳ ಆರೋಪವನ್ನು ಈ ಆಯೋಗ ಬಹುಪಾಲು ಸಮರ್ಥಿಸಿದೆ. ಪೂರ್ವಗ್ರಹವಿಲ್ಲದೆ ಮುಕ್ತವಾದ ಮಾಹಿತಿ ಸುದ್ದಿ ಪ್ರಸಾರಕ್ಕೆ ಹಲವು ಸಲಹೆಗಳನ್ನೂ ಮಾಡಿದೆ. ಈ ದಿಶೆಯಲ್ಲಿ ಬಡ ಅಭಿವೃದ್ಧಿಶೀಲ ರಾಷ್ಟ್ರಗಳ ನಡುವೆಯೇ ಅನೇಕ ಸಭೆಗಳು ನಡೆದಿವೆ. ಬಡ ಹಾಗೂ ಅಭಿವೃದ್ಧಿಶೀಲ

ರಾಷ್ಟ್ರಗಳ ಸುದ್ದಿ ಸಂಸ್ಥೆಯನ್ನು ರೂಪಿಸುವ ಪ್ರಯತ್ನಗಳು ನಡೆದಿವೆ. ಅಲಿಪ್ತ ರಾಷ್ಟ್ರಗಳ ಒಕ್ಕೂಟವು ಅಂಥ ಒಂದು ಸುದ್ದಿ ಸಂಸ್ಥೆ ರೂಪಿಸಿದ್ದುಂಟು. ಆದರೆ ಹಣ, ತಂತ್ರಜ್ಞಾನ ಹಾಗೂ ಈ ರಾಷ್ಟ್ರಗಳಲ್ಲಿನ ವಿವಿಧ ರೀತಿಯ ರಾಜಕೀಯ ವ್ಯವಸ್ಥೆಯಿಂದಾಗಿ ಆ ಪ್ರಯತ್ನ ಸಫಲಗೊಂಡಿಲ್ಲ. ಇಂಥ ಸಂದರ್ಭದಲ್ಲಿ ಅವೇ ಬಹುರಾಷ್ಟ್ರೀಯ ಸಂಸ್ಥೆಗಳ ಸುದ್ದಿ ಸಂಸ್ಥೆಗಳು ತಮ್ಮ ಬಲೆಯನ್ನು ಮತ್ತಷ್ಟು ಬೀಸುತ್ತಿವೆ. ಈ ಸುದ್ದಿ ಸಂಸ್ಥೆಗಳು ಕೊಡುವುದೇ ಸುದ್ದಿ, ಮಾಡಿದ್ದೇ ವಿಶ್ಲೇಷಣೆ. ಬಡ ಹಾಗೂ ಅಭಿವೃದ್ಧಿಶೀಲ ದೇಶಗಳ ಪತ್ರಿಕೆಗಳಿಗೆ ಅನ್ಯಮಾರ್ಗವಿಲ್ಲ. ಏಕೆಂದರೆ ಆ ಸುದ್ದಿಗಳ ಗುಣಮಾಪನ ಮಾಡುವ ಬೇರೆ ವ್ಯವಸ್ಥೆಯೇ ಇಲ್ಲ ಇದೊಂದು ವಿಷವರ್ತುಲವಾಗಿ ಬೆಳೆದಿದೆ.

ಬಡ ಹಾಗೂ ಅಭಿವೃದ್ಧಿಶೀಲ ದೇಶಗಳ ಈ ವಾದವನ್ನು ಶ್ರೀಮಂತ ರಾಷ್ಟ್ರಗಳ ಸುದ್ದಿ ಸಂಸ್ಥೆಗಳು ಸಾರಾಸಗಟಾಗಿ ತಳ್ಳಿಹಾಕುತ್ತವೆ. ತಮಗೆ ಅನ್ಯಾಯವಾಗುತ್ತಿದೆ ಎಂದು ಕೂಗುವ ದೇಶಗಳು ಪರೋಕ್ಷವಾಗಿ ಸುದ್ದಿ ನಿಯಂತ್ರಣ ಬಯಸುತ್ತಿವೆ ಎಂದು, ಆ ಆರೋಪವನ್ನು ಪಾಶ್ಚಾತ್ಯ ಸುದ್ದಿ ಸಂಸ್ಥೆಗಳು ಅರ್ಥೈಸುತ್ತವೆ. ಬಹುಪಾಲು ಬಡ ಮತ್ತು ಅಭಿವೃದ್ಧಿಶೀಲ ದೇಶಗಳಲ್ಲಿನ ರಾಜಕೀಯ ವ್ಯವಸ್ಥೆಯೇ ಸ್ಥಿರವಾದುದಲ್ಲ. ಕೆಲವು ರಾಷ್ಟ್ರಗಳಲ್ಲಿ ಸರ್ವಾಧಿಕಾರವಿದೆ. ಕೆಲವು ದೇಶಗಳಲ್ಲಿ ಮಿಲಿಟರಿ ಆಡಳಿತವಿದೆ. ಪ್ರಜಾತಂತ್ರವಿರುವ ದೇಶಗಳಲ್ಲಿಯೂ ಸುದ್ದಿಮಾಧ್ಯಮಗಳ ಮೇಲೆ ಮುದ್ರಣ ಕಾಗದ ವಿತರಣೆ ಹಾಗೂ ಮುಖ್ಯ ಆದಾಯ ಮೂಲವಾದ ಜಾಹೀರಾತು ಸೇರಿದಂತೆ ನಾನಾ ರೀತಿಯಲ್ಲಿ ನಿಯಂತ್ರಣ ಸಾಧಿಸಲಾಗಿದೆ. ಇಂಥ ಪರಿಸ್ಥಿತಿಯಲ್ಲಿ ಸುದ್ದಿಯ ಮುಕ್ತ ಪ್ರಸಾರಕ್ಕಾಗಿ ಬಡ ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳು ಮೊರೆಯಿಡುವುದು ದೊಡ್ಡ ತಮಾಷೆಯೆಂದೂ ಅಂತರರಾಷ್ಟ್ರೀಯ ಸುದ್ದಿ ಸಂಸ್ಥೆಗಳು ಗೇಲಿಮಾಡುತ್ತಿವೆ.

ಇವೇನೇ ಇದ್ದರೂ ಬಹುರಾಷ್ಟ್ರೀಯ ಕಂಪನಿಗಳ ಸುದ್ದಿ ಸಂಸ್ಥೆಗಳು ವಿಶ್ವದ ಬಹುಪಾಲು ದೇಶಗಳ ಸಮೂಹ ಮಾಧ್ಯಮಗಳ ಮೇಲೆ ಸಾಧಿಸಿರುವ ಹಿಡಿತವನ್ನು ಅಲ್ಲಗಳೆಯಲಾಗದು. ಭಾರತೀಯ ಪತ್ರಿಕೋದ್ಯಮ ಕೂಡ ಈ ಜಾಲದಲ್ಲಿ ಸಿಕ್ಕಿ ಹಾಕಿಕೊಂಡಿರುವುದರಿಂದಲೇ ಇಷ್ಟೆಲ್ಲಾ ಒತ್ತಿ ಹೇಳಬೇಕಾಯಿತು.

* * *

ಅಸಮಾನತೆಯುಳ್ಳ ಸಮಾಜದಲ್ಲಿ ಸಮಾನತೆಯನ್ನು, ಮುಕ್ತ ವಾತಾವರಣ ಇಲ್ಲದ ಕಡೆ ಮುಕ್ತತೆಯನ್ನು ಸಾಧಿಸಹೊರಡುವ ಹೋರಾಟದ ಒಂದು ಮುಖ್ಯ ದಾರಿ ಪತ್ರಿಕೋದ್ಯಮ. ಸಮಾಜವನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಸಾಮಾನ್ಯನಿಗೆ ನೆರವಾಗುವುದರೊಂದಿಗೆ ಪ್ರಜ್ಞಾವಂತ ಸಮಾಜವನ್ನು ಕಟ್ಟುವ ಕಡೆಗೆ ಹಾಗೂ ಆರೋಗ್ಯಪೂರ್ಣವಾದ ಮನರಂಜನೆಗೆ ಪ್ರೋತ್ಸಾಹ ನೀಡುವ ಕಡೆಗೆ ಕೆಲಸ ಮಾಡುವುದು ಪತ್ರಿಕೋದ್ಯಮದ ಗುರಿ.

ಈ ಆದರ್ಶವನ್ನು ನಮ್ಮ ಮುಂದಿಟ್ಟುಕೊಂಡು ನೋಡಿದರೆ ಭಾರತೀಯ ಪತ್ರಿಕೋದ್ಯಮ ಸಾಧಿಸಿರುವುದು ಕಡಿಮೆಯೇ. ಸ್ವಾತಂತ್ರ್ಯಸಂಗ್ರಾಮ ಕಾಲದಲ್ಲಿ ಸ್ವಾತಂತ್ರ್ಯದ ಗುರಿ ಹೊಂದಿದ್ದ ಭಾರತೀಯ ಪತ್ರಿಕೋದ್ಯಮ ಸ್ವಾತಂತ್ರ್ಯಾನಂತರ ಸಾಮಾಜಿಕ ಸುಧಾರಣೆಯ, ಪ್ರಗತಿಯ ಗುರಿಯನ್ನು ತನ್ನ ಮುಂದೆ ಇಟ್ಟುಕೊಳ್ಳಲಿಲ್ಲ. (ಗುರಿ ಯಾವುದಿರಬೇಕೆಂಬ ಬಗ್ಗೆ ಇನ್ನೂ ಗೊಂದಲವಿದೆ) ಬದಲಾಗಿ ಪತ್ರಿಕೋದ್ಯಮ ವಾಣಿಜ್ಯೀಕರಣಗೊಂಡಿತು. ಅಷ್ಟೇ ಅಲ್ಲ, ರಾಜಕೀಯಕ್ಕೆ ವಿಶೇಷ ಮಹತ್ವ ದೊರಕಿತು. ಬಹುಶಃ ಇದೇ ಕಾರಣಕ್ಕೆ ಪತ್ರಿಕೆಗಳು ಮೂಲಭೂತವಾಗಿ ಇಂಗ್ಲಿಷ್ ಓದುವ ಮಧ್ಯಮ ವರ್ಗಕ್ಕೆ ಸೀಮಿತವಾದವು. ಜಗತ್ತಿನ ಎಲ್ಲ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಆದಂತೆ ಪತ್ರಿಕೆ ಬಳಕೆದಾರರ ವಸ್ತುವಾಯಿತು. ಪತ್ರಿಕೆಗಳು ಸರ್ಕಾರಿ ಸುದ್ದಿ ಸಂವಹನ ಮಾಧ್ಯಮಗಳಾದವು. ಪತ್ರಿಕೋದ್ಯಮ ವಾಣಿಜ್ಯ ಕ್ಷೇತ್ರದ ಭಾಗವಾದರೂ ಅನಕ್ಷರತೆ, ಆರ್ಥಿಕ ಅಸಮಾನತೆ, ಸಾಮಾಜಿಕ ಅಂತರವಿರುವಂಥ ಭಾರತದಲ್ಲಿ ಅದಕ್ಕೆ ಮತ್ತೊಂದು ಜವಾಬ್ದಾರಿಯಿದೆ. ಅದೇ ಸಾಮಾಜಿಕ ಜವಾಬ್ದಾರಿ. ಸಮಾಜ ಬದಲಾವಣೆಯ ಪ್ರಕ್ರಿಯೆಯಲ್ಲಿ ಮಹತ್ವದ ಪಾತ್ರವಹಿಸಬೇಕಿದ್ದ ಭಾರತೀಯ ಪತ್ರಿಕೋದ್ಯಮ ಆ ದಾರಿಯಲ್ಲಿ ಕಾರ್ಯತತ್ಪರವಾಗಲಿಲ್ಲ. ೧೯೭೫ ರ ತುರ್ತುಪರಿಸ್ಥಿತಿ ಘೋಷಣೆಯು ಪತ್ರಿಕೋದ್ಯಮ ಒಂದು ರೀತಿಯಲ್ಲಿ ಎಚ್ಚೆತ್ತುಕೊಳ್ಳಲು ಕಾರಣವಾದರೂ ನಿರೀಕ್ಷಿತ ವೇಗ ಕಾಣಲಿಲ್ಲ.

ರಾಜಕೀಯ ನಮ್ಮ ವ್ಯವಸ್ಥೆಯ ಮುಖ್ಯಭಾಗ. ಎಲ್ಲವೂ ಈ ರಾಜಕೀಯ ವ್ಯವಸ್ಥೆಯಿಂದಲೇ ಸಾಧಿತವಾಗಬೇಕು. ಈ ಕಾರಣದಿಂದ ಸ್ವಾತಂತ್ರ್ಯಾನಂತರ ರಾಜಕೀಯ ಕ್ಷೇತ್ರಕ್ಕೆ ಅನಗತ್ಯ ಆದ್ಯತೆ ಸಿಕ್ಕಿತು, ಸಂಸ್ಕೃತಿ, ಅಭಿವೃದ್ಧಿಯಂತಹ ಇತರ ಮುಖ್ಯ ವಿಚಾರಗಳತ್ತ ಪತ್ರಿಕೋದ್ಯಮ ಅಷ್ಟು ಗಮನಹರಿಸಲಿಲ್ಲ (ಪರಿಸ್ಥಿತಿ ಇಂದಿಗೂ ಬದಲಾಗಿಲ್ಲ!) ಹೀಗಾಗಿ ಪತ್ರಿಕೋದ್ಯಮದ ಎಲ್ಲೆಯೂ ಸೀಮಿತಗೊಂಡಿತು. ಅಧಿಕಾರಿವರ್ಗ, ರಾಜಕಾರಣಿಗಳು ಹಾಗೂ ವಾಣಿಜ್ಯ ಉದ್ಯಮಿಗಳ ವಲಯಗಳೇ ಪತ್ರಿಕೋದ್ಯಮದ ಗ್ರಾಹಕರಾದರು. ಇಂಗ್ಲಿಷ್ ಪತ್ರಿಕೋದ್ಯಮ ತುಳಿದ ದಾರಿ ಸಹಜವಾಗಿಯೇ ಇತರ ಎಲ್ಲ ಭಾಷಾ ಪತ್ರಿಕೋದ್ಯಮಕ್ಕೆ ಆದರ್ಶವಾಯಿತು. ಸರ್ಕಾರದ ಹೊಣೆ ಹೊತ್ತವರು ಹೇಗೆ ಕೆಲಸ ಮಾಡುತ್ತಿದ್ದಾರೆ? ಪ್ರಗತಿ ಕುಂಠಿತವಾದದ್ದು ಏಕೆ? ಈ ಪ್ರಶ್ನೆಗಳು ನಮ್ಮ ಪತ್ರಿಕೋದ್ಯಮಕ್ಕೆ ಮುಖ್ಯವಾಗಲೇ ಇಲ್ಲ, ರಾಜಕೀಯ ವ್ಯವಸ್ಥೆಯ ಮೇಲೆ ಸದಾ ಕಣ್ಣಿಡಬೇಕಾದ ಪತ್ರಿಕೋದ್ಯಮ ತನ್ನದೇ ಭ್ರಮೆಗಳಲ್ಲಿ ಮುಳುಗಿತು. ವ್ಯಕ್ತಿಗಳೇ ಮುಖ್ಯವಾಗಿ ಅಭಿವೃದ್ಧಿಯ ಕಡೆಗೆ, ಜನಸಂಸ್ಕೃತಿ ವಲಯದ ಕಡೆಗೆ ಗಮನ ಹೋಗಲೇ ಇಲ್ಲ, ಇಂದಿಗೂ ಈ ವಿಚಾರದಲ್ಲಿ ಪತ್ರಿಕೋದ್ಯಮದಲ್ಲಿ ಗಮನಾರ್ಹ ಪ್ರಗತಿಯಾಗಿಲ್ಲ.

ಪ್ರಾದೇಶಿಕವಾಗಿಯೂ ಇದೇ ರೀತಿಯ ಪರಿಸ್ಥಿತಿ ಕಂಡರೂ ಭಿನ್ನ ವಾತಾವರಣದಿಂದಾಗಿ ಪ್ರಾದೇಶಿಕ ಭಾಷಾ ಪತ್ರಿಕೆಗಳು ಜನಕ್ಕೆ ಹತ್ತಿರವಾಗಿದ್ದವು. ಆದರೆ ಅವುಗಳಿಗೆ ಇದ್ದದ್ದು ಆರ್ಥಿಕ ಸಮಸ್ಯೆ, ತಂತ್ರಜ್ಞಾನದ ಸಮಸ್ಯೆ. ಸರ್ಕಾರವನ್ನು ಓಲೈಸುವಂಥ

ಸುದ್ದಿ ಸಂಸ್ಥೆಗಳ ರಾಜಕೀಯ ಸುದ್ದಿಗಳನ್ನು ಕೈಬಿಟ್ಟು ಭಿನ್ನರೀತಿಯ ಪತ್ರಿಕೋದ್ಯಮವನ್ನು ಅನುಸರಿಸುವಂಥ ಆರ್ಥಿಕ ದೃಢತೆ ಇರಲಿಲ್ಲ. ರಾಜಧಾನಿಯಾದ ದೆಹಲಿಯಂಥ ಕಡೆಯೂ ತಮ್ಮ ಸ್ವಂತ ಸುದ್ದಿಗಾರರನ್ನು ನೇಮಕಮಾಡಲಾಗದಂಥ ಸ್ಥಿತಿ ಇತ್ತು. ಹೀಗಾಗಿ ಪ್ರಾದೇಶಿಕ ಪತ್ರಿಕೆಗಳೂ ಸುದ್ದಿಗಾಗಿ ರಾಷ್ಟ್ರೀಯ ಸುದ್ದಿ ಸಂಸ್ಥೆಗಳನ್ನು ಅವಲಂಬಿಸಿದವು. ಯಥಾರೀತಿ ಅಂತರರಾಷ್ಟ್ರೀಯ ಸುದ್ದಿಗೆ ಬಹುರಾಷ್ಟ್ರೀಯ ಕಂಪನಿಗಳ ಸುದ್ದಿ ಸಂಸ್ಥೆಗಳನ್ನೇ ಅವಲಂಬಿಸಬೇಕಾಯಿತು. ಹೀಗಾಗಿ ಗಮನಾರ್ಹ ಪ್ರಗತಿ ಕಾಣಲಿಲ್ಲ. ಇಂದಿಗೂ ಬಹುಪಾಲು ಅದೇ ಪರಿಸ್ಥಿತಿ ಮುಂದುವರಿದಿದ್ದರೂ, ಇಂಗ್ಲಿಷ್ ಪತ್ರಿಕೆಗಳಿಗಿಂತ ಜನರ ಹತ್ತಿರವಲ್ಲಿ ಪ್ರಾದೇಶಿಕ ಪತ್ರಿಕೋದ್ಯಮವಿದೆ.

ಭಾರತೀಯ ಇಂಗ್ಲಿಷ್ ಪತ್ರಿಕೋದ್ಯಮ ಮೂಲಭೂತವಾಗಿ ಮಧ್ಯಮವರ್ಗಕ್ಕೆ ಸೀಮಿತವಾದುದು. ಇವರು ಬಹುಶಃ 'ಕೊಳ್ಳುಬಾಕ' ಸಂಸ್ಕೃತಿಯ ಭಾಗವಾಗಿರುವದರಿಂದ ಇಂಗ್ಲಿಷ್ ಪತ್ರಿಕೆಗಳೂ ಇವರ ಅಭಿರುಚಿಯನ್ನೇ ಓಲೈಸುತ್ತವೆ. ಇದರಿಂದ ಪತ್ರಿಕೆಗಳಿಗೆ ಪ್ರಸಾರವೂ ಇದೆ. ಜಾಹೀರಾತು ಆದಾಯವೂ ಇದೆ. ಈ ಆದಾಯ ಸಾಕಷ್ಟು ಇರುವುದರಿಂದ ದೇಶದ ಎಲ್ಲೆಡೆ ವರದಿಗಾರರನ್ನು ನೇಮಿಸಿ ಸುದ್ದಿ ಪಡೆಯಲು ಸಹಾಯಕವಾಗಿದೆ. ತಮ್ಮ ಓದುಗರ ಅಗತ್ಯಗಳನ್ನು ಪೂರೈಸಲು ಸಾಹಸ ಪತ್ರಿಕೋದ್ಯಮವನ್ನೂ ಕೆಲವೊಮ್ಮೆ ಅನುಸರಿಸಿದ್ದುಂಟು.

ಆದರೆ ಇದೇ ಪರಿಸ್ಥಿತಿ ಕನ್ನಡವೂ ಸೇರಿದಂತೆ ಇತರ ಪ್ರಾದೇಶಿಕ ಭಾಷಾ ಪತ್ರಿಕೋದ್ಯಮದಲ್ಲಿಲ್ಲ. ಭಾಷಾ ಪತ್ರಿಕೆಗಳ ಬಹುಪಾಲು ಓದುಗರು ಗ್ರಾಮೀಣ ಪರಿಸರದಿಂದ ಬಂದವರು. ಇನ್ನೂ 'ಕೊಳ್ಳುಬಾಕ' ಸಂಸ್ಕೃತಿಯ ಭಾಗವಾಗಿಲ್ಲದವರು, ಈ ಕಾರಣದಿಂದ ಪತ್ರಿಕೆಗಳಿಗೆ ಪ್ರಸಾರ ಜಾಸ್ತಿಯಿದ್ದರೂ ಜಾಹೀರಾತು ಆದಾಯವಿಲ್ಲ. ಇದರಿಂದ ಪುಟಮಿತಿ. ಕಡಿಮೆ ಜಾಗ ಎಂದರೆ ಕಡಿಮೆ ಸುದ್ದಿ. ಈ ದೃಷ್ಟಿಯಿಂದ ಪ್ರಾದೇಶಿಕ ಭಾಷಾ ಪತ್ರಿಕಾ ಓದುಗರು ವಿವರವಾದ ಸುದ್ದಿಗಳಿಂದಲೂ ವಂಚಿತರಾಗುತ್ತಾರೆ. ಈ ಮಿತಿ ಎಲ್ಲ ಕ್ಷೇತ್ರಗಳಿಗೂ ವಿಸ್ತರಿಸಿದೆ.

ಈ ಮಿತಿಯ ನಡುವೆಯೂ ಪ್ರಾದೇಶಿಕ ಪತ್ರಿಕೆಗಳಿಗೆ ಅನುಕೂಲವಾಗುವಂತಹ ಬೆಳವಣಿಗೆಯೊಂದಾಗಿದೆ. ತಂತ್ರಜ್ಞಾನ ಭಾಷೆಯ ಮಿತಿಯನ್ನು ತೆಗೆದುಹಾಕಿದೆ. ಪತ್ರಿಕೆಗಳಿಗೆ ಸುದ್ದಿ ಕಳುಹಿಸಲು ಹಿಂದೆ ಇದ್ದ ಒಂದೇ ಮಾರ್ಗ ಇಂಗ್ಲಿಷ್ ಭಾಷೆಯಲ್ಲಿ ಬರೆಯುವುದು. ಆದರೆ ಈಗ ಈ ಸಮಸ್ಯೆ ಹೋಗಿದೆ. ಯಾರು ಯಾವ ಭಾಷೆಯಲ್ಲಿ ಬೇಕಾದರೂ ವರದಿ ಬರೆದು ಫೋಟೋ ಪ್ರತಿಯಾಗಿ ಕಳುಹಿಸಬಹುದು. ಇದೇ ರೀತಿ ಕಂಪ್ಯೂಟರ್ ತಂತ್ರಜ್ಞಾನ ಸಾಕಷ್ಟು ತೀವ್ರಗತಿಯಲ್ಲಿ ಭಾಷಾ ಪತ್ರಿಕೋದ್ಯಮಕ್ಕೆ ಅಳವಡಿಕೆಯಾಗಿದ್ದು ಸಂವಹನ ತುಂಬಾ ಸರಳವಾಗಿದೆ.

ಸದ್ಯಕ್ಕೆ ಈ ತಂತ್ರಜ್ಞಾನವನ್ನು ಕೊಳ್ಳುವುದು ಎಲ್ಲ ಪ್ರಾದೇಶಿಕ ಪತ್ರಿಕಾ ಸಂಸ್ಥೆಗಳಿಗೆ ಸಾಧ್ಯವಾಗದಿರಬಹುದು. ಆದರೆ ಬೇಡಿಕೆ ಹೆಚ್ಚಿದಂತೆಲ್ಲ ತಂತ್ರಜ್ಞಾನವೂ ಅಗ್ಗವಾಗಿ

ಪರಿಸ್ಥಿತಿ ಸುಧಾರಿಸಬಹುದು. ಇಂಗ್ಲಿಷ್ ಭಾಷೆಯು ಪತ್ರಿಕೆಗಳ ಪ್ರಸಾರ ಸಂಖ್ಯೆ ತಟಸ್ಥಗೊಂಡು ಪ್ರಾದೇಶಿಕ ಭಾಷಾ ಪತ್ರಿಕೆಗಳ ಪ್ರಸಾರ ಸಂಖ್ಯೆ ಕ್ರಮೇಣ ಹೆಚ್ಚುತ್ತಿರುವುದು ಆಸಕ್ತಿದಾಯಕ ಬೆಳವಣಿಗೆ. ಅದರಲ್ಲಿಯೂ ಮುಖ್ಯ ಪಟ್ಟಣಗಳಲ್ಲಿನ ಪತ್ರಿಕೆಗಳ ಪ್ರಸಾರ ಸಂಖ್ಯೆ ಹೆಚ್ಚುತ್ತಿರುವುದು ಗಮನಿಸಬೇಕಾದ ಅಂಶ. ವಿವಿಧಭಾಷೆ ಉಪಭಾಷೆಗಳ ಗೊಂದಲಗಳ ನಡುವೆಯೂ ಪ್ರಾದೇಶಿಕ ಭಾಷಾ ಪತ್ರಿಕೋದ್ಯಮದ ಬೆಳವಣಿಗೆ ಕುತೂಹಲಕಾರಿ. ಎಲ್ಲರೂ ಒಪ್ಪುವ ಒಂದು ಅಧಿಕೃತ ಭಾಷೆ ರಚಿಸಬೇಕೆಂಬ ಆಲೋಚನೆ ಈಗ ಉಪಯೋಗವಿಲ್ಲದ್ದು. ಓದುಗರು ಭಿನ್ನ ಉಪಭಾಷೆಗಳನ್ನು ಸರಳವಾಗಿ ಅರ್ಥ ಮಾಡಿಕೊಳ್ಳುತ್ತಾರೆ ಎಂಬುದಕ್ಕೆ ಇಂದು ಪತ್ರಿಕೆಗಳಲ್ಲಿ ಬಳಸುತ್ತಿರುವ ಭಾಷೆಯೇ ನಿದರ್ಶನ. ಆದರೂ ಸರಳ ಭಾಷೆ, ಹೆಚ್ಚು ಮಾಹಿತಿ ಕೊಡುವ ಕಡೆಗೆ ಒತ್ತು ಅಗತ್ಯವಿದೆ ಎನ್ನಿಸುತ್ತದೆ. ಪ್ರಾದೇಶಿಕ ಭಾಷಾ ಪತ್ರಿಕೆಯನ್ನು ಓದುವವರಿಗೆ, ಇಂಗ್ಲಿಷ್ ಪತ್ರಿಕೆಗಳಲ್ಲಿ ಸಿಗುವಂತಹ ಎಲ್ಲವೂ ಇದೆ ಎಂಬ ವಿಶ್ವಾಸ ಮೂಡುವಂತೆ ಮಾಡುವ ಅಗತ್ಯವಿದೆ. ಹೊಸ ಸಮಾಜ ವ್ಯವಸ್ಥೆಯನ್ನು ಕಟ್ಟುವ ಜವಾಬ್ದಾರಿಯನ್ನು ಹೊರುವ ಸವಾಲನ್ನು ಪತ್ರಿಕೋದ್ಯೋಗಿಗಳು ಮತ್ತೊಮ್ಮೆ ಸ್ವೀಕರಿಸಬೇಕಿದೆ.

ಪತ್ರಿಕಾ ಮಾಧ್ಯಮಕ್ಕೆ ಇಂದು ದೊಡ್ಡ ಸವಾಲನ್ನು ಒಡ್ಡಿರುವದು ಟಿ.ವಿ. ಮಾಧ್ಯಮ, ಎಲ್ಲ ಜನರನ್ನೂ 'ಕೊಳ್ಳುಬಾಕ' ಸಂಸ್ಕೃತಿಯ ಭಾಗವಾಗಿಸಲು ಟಿ.ವಿ. ಛಾನಲ್‌ಗಳು ಪೈಪೋಟಿ ನಡೆಸಿವೆ. ದೃಶ್ಯ ಮಾಧ್ಯಮವಾದ್ದರಿಂದ ಸಂವಹನ ಸರಳವಿದೆ. ಈಗಾಗಲೇ ಮಧ್ಯಮ ವರ್ಗ ವಿದೇಶೀ ಟಿ.ವಿ. ಕಾರ್ಯಕ್ರಮ ಸಂಸ್ಕೃತಿಗೆ ಮರುಳಾಗಿದೆ. ಇದೊಂದು ರೀತಿಯಲ್ಲಿ ಸಾಂಸ್ಕೃತಿಕ ದಾಳಿ. ಈ ದಾಳಿಯನ್ನು ಎದುರಿಸುವುದು ಹೇಗೆ? ಈ ದಿಸೆಯಲ್ಲಿ ಪತ್ರಿಕೋದ್ಯಮಕ್ಕೂ ಒಂದು ಜವಾಬ್ದಾರಿ ಇದೆ. ಏಕೆಂದರೆ ಜನ ಎಷ್ಟೇ ದೃಶ್ಯ ಸಂಸ್ಕೃತಿಗೆ ಮರುಳಾದರೂ ಪತ್ರಿಕೋದ್ಯಮಕ್ಕೆ, ಮುದ್ರಿತ ಸುದ್ದಿಗೆ ಹೆಚ್ಚು ವಿಶ್ವಾಸಾರ್ಹತೆ ಇದೆ. ಈ ಹಿನ್ನೆಲೆಯಲ್ಲಿ ಅನ್ಯ ಸಂಸ್ಕೃತಿ ನೆಲೆಯೂ ಟಿ.ವಿ. ಜಾಲಗಳ ಹಿಂದೆ ಇರುವ ಮಿದುಳು ಕೊರೆಯುವ 'ತತ್ವ'ವನ್ನು ಬಹಿರಂಗಗೊಳಿಸಲು ಯತ್ನಿಸಬೇಕಿದೆ.

ಪ್ರಜಾತಂತ್ರ ವ್ಯವಸ್ಥೆಯು ಗಟ್ಟಿಗೊಳ್ಳಬೇಕಾದರೆ ಮೊದಲು ಪ್ರಾದೇಶಿಕ ಪತ್ರಿಕೆಗಳು, ಸಂವಹನ ಮಾಧ್ಯಮಗಳು ಹೆಚ್ಚು ಪ್ರಜಾತಂತ್ರಗೊಳ್ಳಬೇಕು. ಹೆಚ್ಚು ಹೆಚ್ಚು ಪತ್ರಿಕೆಗಳು ಈ ಸಾಮಾಜಿಕ ಪ್ರಕ್ರಿಯೆಯಲ್ಲಿ ಭಾಗವಹಿಸಿದಂತೆಲ್ಲಾ ಜನರ ಬದುಕು ಹಸನಾಗುತ್ತದೆ. ರಾಜಕೀಯ ಸ್ವಚ್ಛಗೊಳ್ಳುತ್ತದೆ. ಜನರ ಮುಕ್ತ ಅಭಿವ್ಯಕ್ತಿಯು ನಿಜವಾದ, ಮೌಲಿಕ ಸಮಾಜವನ್ನು ಸೃಷ್ಟಿಸುತ್ತದೆ. ಸಾಮಾನ್ಯ ಜನರು ಆಡುವ ಭಾಷೆಯಲ್ಲಿ ಬೆಳೆಯುವ ಯಾವುದೇ ಸಂವಹನ ಮಾಧ್ಯಮ ಪ್ರಜಾತಂತ್ರದ ಪರವಾಗಿರುತ್ತದೆಂಬುದೇ ಇಲ್ಲಿ ಮುಖ್ಯವಾದ ವಿಚಾರ. ಕನ್ನಡ ಪತ್ರಿಕೋದ್ಯಮ ಈಗಾಗಲೇ ಈ ಪ್ರಕ್ರಿಯೆಗೆ ಒಳಗಾಗಿದೆ. ಸಮಾಜ ಹಾಗೂ ಪತ್ರಿಕೋದ್ಯಮದ ಪ್ರಗತಿ ಪರಸ್ಪರ ಪೂರಕವಾದುದು ಹೀಗೆಂದೇ ಕನ್ನಡ ಪತ್ರಿಕೋದ್ಯಮ ಕ್ರಮಿಸಬೇಕಾದ ದಾರಿ ಸಾಕಷ್ಟು ದೂರ ಇದೆ.

# ರಂಗಭೂಮಿ ಮತ್ತು ಸಂವಹನ-ಎರಡು ಲೇಖನಗಳು

**ಸಫ್ದರ್ ಹಶ್ಮಿ**

## ೧. ರಂಗಭೂಮಿ: ವೈಯಕ್ತಿಕ ಮತ್ತು ಸಾಮಾಜಿಕ

ಈಚೆಗೆ, ಬೀದಿರಂಗಭೂಮಿಗಾಗಿ ನಾಟಕಗಳನ್ನು, ಕರಡು ಪ್ರತಿಗಳನ್ನು ತಯಾರು ಮಾಡುವಾಗಿನ ಸಮಸ್ಯೆಗಳನ್ನು ಕುರಿತ ಚರ್ಚೆಯೊಂದು ನಡೆಯಿತು. ಅದನ್ನು ಪ್ರಾರಂಭ ಮಾಡಿದ ಸುಪ್ರಸಿದ್ಧ ಮರಾಠೀ ಯುವನಾಟಕಕಾರರೊಬ್ಬರು ಈ ಹೇಳಿಕೆಯನ್ನು ಮಾಡಿದರು: "ಬೀದಿರಂಗಭೂಮಿಗೆ ಬಹುಕಾಲ ಉಳಿಯುವಂತಹ ಪರಿಣಾಮವನ್ನು ಬೀರುವ ಶಕ್ತಿಯಿಲ್ಲ. ಅದು ಪ್ರೇಕ್ಷಕರ ಅಂತರಂಗವನ್ನು ತೀವ್ರವಾಗಿ ಕಲಕಲಾರದು. ಏಕೆಂದರೆ ಅದು ಪ್ರೊಸೀನಿಯಂ ರಂಗಭೂಮಿಯ ಹಾಗೆ, ಜೀವನದ ಮೂಲಭೂತ ಸಮಸ್ಯೆಗಳಾದ ಸಾವು, ಪ್ರೀತಿ ಮುಂತಾದವನ್ನು ಒಳಗೊಳ್ಳಲಾರದು." ಆ ಮಾತನ್ನು ಕೇಳುತ್ತಾ ಕುಳಿತವರಲ್ಲಿ ಅನೇಕರು 'ಹೌದು, ಹೌದು' ಎನ್ನುವಂತೆ ಗೋಣುಹಾಕಿದರು ಕುತೂಹಲದ ಸಂಗತಿಯೆಂದರೆ ಅವರ ಪೈಕಿ ಬಹುಭಾಗ, ಇಂಡಿಯಾದ ಬೇರೆ ಬೇರೆ ಭಾಗಗಳಿಂದ ಬಂದ ಬೀದಿರಂಗಭೂಮಿಯ ಸಕ್ರಿಯ ಕಾರ್ಯಕರ್ತರೇ ಆಗಿದ್ದರು.

ಬೀದಿರಂಗಭೂಮಿಯಲ್ಲಿ ಕೆಲಸ ಮಾಡುತ್ತಿರುವ ನಮ್ಮಂಥವರಿಗೆ, ಈ ರೀತಿಯ ಮಾತುಗಳನ್ನು ಎದುರಿಸುವುದು ದಿನನಿತ್ಯದ ಅನುಭವವಾಗಿಬಿಟ್ಟಿದೆ. ಹೀಗೆ ಮಾತನಾಡುವವರು ಕೇವಲ ಪ್ರೊಸೀನಿಯಂ ರಂಗಭೂಮಿಯ ಬೆಂಬಲಿಗರು ಮಾತ್ರವಲ್ಲ. ನಮ್ಮ ಅನೇಕ ಸಂಗಡಿಗರೂ ಹೀಗೆಯೇ ಮಾತನಾಡುತ್ತಾರೆ.

ಇಂಥ ಟೀಕೆಗಳನ್ನು ಅವು ಗಂಭೀರವಲ್ಲವೆಂಬ ಕಾರಣದಿಂದ ನಾವು ನಿರ್ಲಕ್ಷಿಸುತ್ತಾ ಬಂದಿದ್ದೇವೆ. ಇದು ಇನ್ನು ಸಾಕು ಎಂದು ನನಗೆ ತೋರುತ್ತದೆ. ನಾವು ಅದನ್ನು ರಂಗಕರ್ಮಿಗಳಿಗೆ ಸಹಜವಾದ ಹೊಟ್ಟೆಕಿಚ್ಚಿನ ಫಲವೆಂದು ತಿರಸ್ಕರಿಸುತ್ತೇವೆ ಅಥವಾ ಒಳಗೊಳಗೇ ಅವರ ಟೀಕೆ ನಿಜವೆಂದು ಒಪ್ಪಿಕೊಂಡು, ಆ ಮೇಲೆ, ನಮ್ಮ ಬೀದಿರಂಗಭೂಮಿಯ ಸಮಕಾಲೀನ ಮಹತ್ವ, ಜೀವಂತತೆ ಹಾಗೂ ರಾಜಕೀಯ ಪ್ರಭಾವಗಳನ್ನು ಸಮರ್ಥಿಸುವ ಬಿಸಿಬಿಸಿ ವಾದದಲ್ಲಿ ತೊಡಗುತ್ತೇವೆ. ನಾವು ನಮ್ಮ ರಂಗಭೂಮಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ, ಈ ರೀತಿಯ ಟೀಕೆ ಟಿಪ್ಪಣಿಗಳ ಚಾರಿತ್ರಿಕ ಮತ್ತು ತಾತ್ವಿಕ ತಳಹದಿಯನ್ನು ಗ್ರಹಿಸಬೇಕೆಂದು ನನಗೆ ತೋರುತ್ತದೆ.

ಒಂದು ಹಂತದಲ್ಲಿ, ಅಂಥ ಟೀಕೆಗಳು ಯುಗಯುಗಗಳಿಂದ ಉಳಿದುಕೊಂಡು ಬಂದಿರುವ ತಪ್ಪು ತಿಳಿವಳಿಕೆಯೊಂದರಿಂದ ಹುಟ್ಟಿಕೊಳ್ಳುತ್ತವೆ. ಉತ್ಪಾದನೆಯ ಸಾಧನಗಳಿಗೆ, ಈ ಸಂದರ್ಭದಲ್ಲಿ ಕಲಾತ್ಮಕ ಅಭಿವ್ಯಕ್ತಿಯ ಸಾಧನಗಳಿಗೆ–ತಮ್ಮಷ್ಟಕ್ಕೆ, ತಾವೇ

ಏನೋ ಒಂದು ನಿಗೂಢ ಮಂತ್ರಶಕ್ತಿಯಿದೆಯೆಂದು ಭಾವಿಸುವುದು ಅಂಥ ತಪ್ಪುಗ್ರಹಿಕೆ. ಇಲ್ಲಿ ಪ್ರೊಸೀನಿಯಂ ಎಂದರೆ ಯಾವುದೋ ಸ್ವರ್ಗದ ಪ್ರವೇಶದ್ವಾರವೆಂದು ನೋಡ ಲಾಗುತ್ತದೆ. ಅದನ್ನು ದಾಟಿದರೆ ಸಾಕು, ದೈವಿಕ ಸ್ಫೂರ್ತಿ, ಸೃಜನಶೀಲತೆ ಹಾಗೂ ಮನುಷ್ಯ, ಮೃತ್ಯು ಮತ್ತು ಪ್ರೀತಿಗಳ ಗಹನ ವಿಶ್ಲೇಷಣೆ ಮಾಡುವ ನಾಟಕಗಳನ್ನು ರಚಿಸಲು ಬೇಕಾದ ಸಕಲ ಸಲಕರಣೆಗಳು ಸಿಕ್ಕಿಯೇ ಬಿಡುತ್ತವೆಂದು ಅವರು ತಿಳಿಯುತ್ತಾರೆ ಆಗ ಪ್ರೊಸೀನಿಯಂ ರಂಗಭೂಮಿಯು ಒಂದು ಬೋಧಿವೃಕ್ಷವಾಗುತ್ತದೆ; ಅದರ ಕೆಳಗೆ ಕುಳಿತ ಪ್ರತಿಯೊಬ್ಬ ಗೌತಮನೂ ಬುದ್ಧನಾಗಿಬಿಡುತ್ತಾನೆ. ಈ ಮಾತೆಲ್ಲ ಅಪ್ಪಟ ಬುರುಡೆ ಯೆಂದು ಹೇಳಬೇಕಾಗಿಯೇ ಇಲ್ಲ. ಹೆಣ್ಣು ಜಾತಿಗೆ ಸೇರಿದೆ ಎನ್ನುವ ಒಂದೇ ಕಾರಣ ದಿಂದ ಹಸು, ಕರು ಹಾಕುವುದಿಲ್ಲ. ರಂಗಮಂಚವೆಂದರೆ ಹೇಳಿಕೇಳಿ ಖಾಲೀ ಬಯಲು. ಬೆಳಕು ಅಂದರೆ ಬೆಳಕು ಅಷ್ಟೆ. ಮೇಕಪ್ ಅಂದರೆ ಮೇಕಪ್. ವೇಷಭೂಷಣ ಅಂದರೆ ವೇಷಭೂಷಣ ಅಷ್ಟೇ. ಖಾಲೀ ಬಯಲಿಗೆ ಜೀವ ಕೊಡುವ ಶಕ್ತಿ ಯಾವುದು? ರಂಗದ ಮೇಲಿನ ದೀಪಗಳಲ್ಲ, ನಟರು ಹಾಕಿಕೊಂಡ ಒಡವೆ ವಸ್ತ್ರ ಅಲ್ಲ, ಅವರ ಮೇಕಪ್ ಅಂತೂ ಮೊದಲೇ ಅಲ್ಲ. ಜೀವನದ ಸಂಕೀರ್ಣತೆಗಳನ್ನು, ಪರಸ್ಪರ ವಿರೋಧಗಳನ್ನು ಗ್ರಹಿಸ ಬಲ್ಲ ನಾಟಕಕಾರನ ಪ್ರತಿಭೆಯೇ ಆ ಶಕ್ತಿ. (ನಿಮಗೆ ಅಷ್ಟು ಇಷ್ಟ ಇದ್ದರೆ ಜೀವನದ ಜೊತೆ ಸಾವು ಮತ್ತು ಪ್ರೀತಿಗಳನ್ನೂ ಸೇರಿಸಿಕೊಳ್ಳಿ) ಈ ಪ್ರತಿಭೆಯ ಜೊತೆ ಜೊತೆಗೆ ಜೀವಂತ, ಸೃಜನಶೀಲ ಕಲ್ಪನಾಶಕ್ತಿ ಇರಬೇಕು. ಆಮೇಲೆ ಬರೋದು ನಿರ್ದೇಶಕನ ಹಾಗೂ ವಿನ್ಯಾಸಕಾರನ ವಿಶಿಷ್ಟ ಕುಶಲತೆ ಮತ್ತು ಶೈಲಿ, ನಟರ ಚೈತನ್ಯಶೀಲ ಪ್ರತಿಭೆ, ಬೆಳಕಿನ ವ್ಯವಸ್ಥೆ ಮಾಡುವವನ ನೈಪುಣ್ಯ ವಗೈರೆ ವಗೈರೆ. ಈ ಸಾಮರ್ಥ್ಯಗಳನ್ನು ಬೆಳೆಸುವುದು ಖಾಲೀ ರಂಗಮಂಚವಲ್ಲ. ಇನ್ನೂ ಹಾಗೆ ನೋಡಿದರೆ ಈ ಎಲ್ಲ ಶಕ್ತಿಗಳೂ ಇರೋಕಡೆ, ತನ್ನಷ್ಟಕ್ಕೆ ತಾನೇ, ರಂಗಭೂಮಿಯ ಮೇಲೆ ಸೌಂದರ್ಯ ಚೈತನ್ಯ, ವೈಚಾರಿಕತೆ, ನಾಟಕ ಕೊನೆಗೆ ಜೀವನ ಕೂಡ ಪ್ರತ್ಯಕ್ಷವಾಗುತ್ತವೆ ನಿಜವಾಗಲೂ ಸುಂದರ ವಾದ, ಶಕ್ತಿಯುತವಾದ ನಾಟಕ ಯಾವುದೇ ಖಾಲೀ ಜಾಗದಲ್ಲಿ ಬೇಕಾದರೂ ಹುಟ್ಟ ಬಲ್ಲುದು. ರಂಗ ಚೌಕಟ್ಟಾಗಿದ್ದರೂ ಸರಿ, ಆಯಾಕಾರ ಇದ್ದರೂ ಸರಿ. ಗುಂಡಗಿದ್ದರೂ ಸರಿ, ಹೇಗಿದ್ದರೂ ಸರಿ. ನಾಟಕ ನೋಡುವ ಜನ ರಂಗದ ಒಂದು ಕಡೆ ಕುಳಿತಿದ್ದರೂ ಅಷ್ಟೇ, ಸುತ್ತಲೂ ಕುಳಿತಿದ್ದರೂ ಅಷ್ಟೇ. ಬೆಳಕಿದ್ದರೂ ಅಷ್ಟೇ ಕತ್ತಲಿದ್ದರೂ ಅಷ್ಟೇ. ಒಂದು ನಾಟಕಪರಂಪರೆಗೆ ಅಂಟಿಕೊಂಡವರು ಏನು ಬೇಕಾದರೂ ಹೇಳಲಿ, ಕಲೆ ಎನ್ನುವುದು ಎಲ್ಲ ಕಡೆಯೂ ಅರಳುತ್ತದೆ. ಮನುಷ್ಯನಿಗೆ ಗೊತ್ತಿರುವ ನಾಟಕ ಪರಂಪರೆಗಳಲ್ಲಿ ಅತ್ಯಂತ ಶ್ರೇಷ್ಠವಾದ ಗ್ರೀಕ್ ಅಭಿಜಾತ ನಾಟಕವನ್ನು, ಸುಮಾರು ಹದಿನೈದು ಸಾವಿರ ಜನರಿಗೆ ಏಕಕಾಲದಲ್ಲಿ ನೋಡಿಸುತ್ತಿದ್ದರು. ನಾಟಕವನ್ನು ಆಡುವ ಪ್ರದೇಶದ ಮೂರೂ ಕಡೆ ಅವರು ಕುಳಿತಿರುತ್ತಿದ್ದರು. ಮೇಲಿನಿಂದ ರಾಶಿರಾಶಿ ಸೂರ್ಯನ ಬೆಳಕು, ಸುತ್ತಲೂ ಹರಡಿ ನಿಂತ ಬೆಟ್ಟಗುಡ್ಡಗಳು. ಇನ್ನೂ ಹತ್ತಿರ, ನಮ್ಮ ದೇಶಕ್ಕೇ ಬಂದರೆ, ಅತ್ಯಂತ

ಜೀವಂತವಾದ ಅನೇಕ ಸಾಂಪ್ರದಾಯಿಕ ರಂಗರೂಪಗಳನ್ನು ಇಂದಿಗೂ ಪ್ರದರ್ಶಿಸುವುದು ಮೈದಾನಗಳಲ್ಲಿ ಅಥವಾ ಬಯಲು ರಂಗಮಂದಿರಗಳಲ್ಲಿ.

ನಿಜ, ನಾಟಕವಾಡುವ ಪ್ರದೇಶ, ಪ್ರೇಕ್ಷಕರು ಕುಳಿತುಕೊಳ್ಳುವ ಸ್ಥಳಗಳು, ಹಲವು ಬಗೆಯ ನಾಟಕ ತಂತ್ರಗಳು ಮತ್ತು ಸಲಕರಣೆಗಳು, ನಾಟಕದ ಅಂತಿಮ ರೂಪ ಮತ್ತು ಲಕ್ಷಣಗಳನ್ನು ನಿರ್ಧರಿಸುತ್ತವೆ. ಹಾಗೆಯೇ ನಾಟಕದ ರೂಪ, ಲಕ್ಷಣಗಳು ಮೇಲೆ ಪಟ್ಟಿ ಮಾಡಿದ ಇತರ ಸಂಗತಿಗಳನ್ನು ತೀರ್ಮಾನ ಮಾಡುತ್ತವೆ. ಯಾವುದೋ ಒಂದು 'ನಿರ್ದಿಷ್ಟ' ಪ್ರಕಾರದ ರಂಗಭೂಮಿಯಲ್ಲಿ ಸಾಧ್ಯವಾಗುವ, 'ಒಂದು ರೀತಿಯ' ತೀವ್ರತೆ, ಏಕಾಗ್ರತೆ ಮತ್ತು ಪರಿಣಾಮಗಳು ಮತ್ತೊಂದು ಪ್ರಕಾರದಲ್ಲಿ ಸಾಧ್ಯವಾಗದಿರಬಹುದೆನ್ನುವುದೂ ನಿಜ. ಆದರೆ ನಿರ್ದಿಷ್ಟ ರಂಗ ಪ್ರಕಾರವೊಂದರಲ್ಲಿ, ಯಾವುದೇ ಪ್ರಮಾಣದ ವಿಶ್ಲೇಷಣೆಯ ಆಳವನ್ನಾಗಲೀ, ಪ್ರದರ್ಶನದ ಶಕ್ತಿ, ಸೌಂದರ್ಯಗಳನ್ನಾಗಲೀ ಸಾಧಿಸುವುದು ಅಸಾಧ್ಯವೆಂದು ಹಟ ಹಿಡಿಯುವುದು ತಪ್ಪು. ಅದು ಒಂದು ಕಡೆ, ತನ್ನ ಪ್ರತಿಭೆಯ ಪ್ರದರ್ಶನಕ್ಕೆ ಹಲವು ಹೊಸ ದಾರಿಗಳನ್ನು ಕಂಡುಕೊಳ್ಳಲು, ಮಾನವನ ಸೃಜನಶೀಲತೆಗಿರುವ ಅಪರಿಮಿತ ಸಾಮರ್ಥ್ಯವನ್ನು ಅಲ್ಲಗಳೆದಂತೆ. ಇನ್ನೊಂದು ಕಡೆ, ಯಾವುದೋ ಒಂದು ಬಗೆಯ ರಂಗಾನುಭವವೇ ಸರ್ವಶ್ರೇಷ್ಠ ಮತ್ತು ಅತ್ಯಂತ ಕಲಾತ್ಮಕ ಎಂದು ಒತ್ತಿ ಹೇಳಿದಂತೆ. ತನ್ನ ಕಲಾತ್ಮಕ ಅಭಿವ್ಯಕ್ತಿಗೆಂದು ಉಪಯೋಗಿಸುವ ಸಲಕರಣೆಗಳ ಬಂಧನದಲ್ಲಿ ಸಿಕ್ಕಿಕೊಂಡಿರುವ ಕಲಾವಿದ ಮಾತ್ರ, ಅವುಗಳಿಲ್ಲದ ಪ್ರದರ್ಶನ ತನಗೆ ಸಾಧ್ಯವೇ ಇಲ್ಲವೆಂದು ಹೇಳುತ್ತಾನೆ. ಈ ವಿಷಯದ ಬಗ್ಗೆ ನಾವು ಅತ್ಯಂತ ಸ್ಪಷ್ಟವಾಗಿರೋಣ. ರಂಗಭೂಮಿಯು ಎಂದೆಂದಿಗೂ ತನಗೆ ಅಂಟಿಕೊಂಡಿರುವ ಬಾಜಾಬಜಂತ್ರಿಗಳನ್ನು ಅವಲಂಬಿಸಿ ಬದುಕಿರಬಾರದು. ಒಬ್ಬ ನಾಟಕಕಾರನು ತನ್ನ ಸುತ್ತಲಿನ ಬದುಕನ್ನು ಗ್ರಹಿಸುವ ಸೃಜನಾತ್ಮಕ, ಚಲನಶೀಲವಾದ ಬಗೆಯೇ, ಅದಕ್ಕೆ ಅಗತ್ಯವಾದ ತಂತ್ರ ಮತ್ತು ಸಾಧನಗಳನ್ನು ಹುಟ್ಟಿಸಿಕೊಳ್ಳುತ್ತದೆ. ಈ ಸತ್ಯವು ತಲೆ ಕೆಳಗಾಗುವುದಿಲ್ಲ. ಒಂದು ಗೊತ್ತಾದ ಬಗೆಯ ನಾಟಕಕ್ಕಿದ್ದ ಐತಿಹಾಸಿಕ ಅಗತ್ಯವು ಪ್ರೊಸೀನಿಯಂ ರಂಗಭೂಮಿಗೆ ಜನ್ಮ ನೀಡಿತು. ಈ ಅಗತ್ಯವು ವಿಕಾಸ ಹೊಂದಿ ಹೆಚ್ಚು ಹೆಚ್ಚು ಸಂಕೀರ್ಣವಾದಂತೆಲ್ಲಾ ಪ್ರೊಸೀನಿಯಂ ರಂಗಭೂಮಿ ಕೂಡ ಬೆಳೆಯಿತು. ಇದಕ್ಕಿಂತ ಭಿನ್ನವಾದ ಮತ್ತು ಚಾರಿತ್ರಿಕವಾಗಿ ಹೆಚ್ಚು ತುರ್ತಾದ ಅಗತ್ಯವೊಂದು ಮೂಡಿ ಬಂದಾಗ ಪ್ರೊಸೀನಿಯಂ ರಂಗಭೂಮಿಯು ನಿರುಪಯುಕ್ತವಾಗಬಹುದು. ನಾಟಕಕಾರರು ಅದರ ಪರಿಮಿತಿಗಳನ್ನು ಮೀರಿ ಮುಂದೆ ಹೋಗಬಹುದು. ಆಗಲೂ ಯಾರೋ ಒಬ್ಬ ಕಲಾವಿದನು, ತನಗೆ ವಂಶಪಾರಂಪರ್ಯವಾಗಿ ಬಂದಿರುವ ಅಥವಾ ತಾನು ಕಲಿತುಕೊಂಡಿರುವ ಪ್ರಕಾರವೊಂದರ ಪರಿಮಿತಿಯೊಳಗೆ ಮಾತ್ರ ಸೃಜನಶೀಲನಾಗಿ ಕೆಲಸ ಮಾಡಬಲ್ಲೆನೆಂದು ಹೇಳಬಹುದು. ನಾವು ಅವರೊಂದಿಗೆ ಜಗಳವಾಡಲು ಸಾಧ್ಯವಿಲ್ಲ. ಆದರೆ ತನ್ನದನ್ನು ಬಿಟ್ಟು ಉಳಿದ ಎಲ್ಲ ಪ್ರಕಾರಗಳನ್ನೂ ಅಸಮಗ್ರವೆಂದೋ ಅಥವಾ ಗಮನಾರ್ಹವಲ್ಲವೆಂದೋ ತಿರಸ್ಕರಿಸುವುದು ವಿನಾಶಕಾರಿಯಾದ

ಪ್ರವೃತ್ತಿ. ಈ ಪ್ರವೃತ್ತಿಯು ಅತ್ಯಂತ ಸ್ಪಷ್ಟವಾಗಿ ಕಾಣಿಸಿಕೊಳ್ಳುವುದು ತಮ್ಮ ಗತಕಾಲದ ಸಂಕೋಲೆಗಳಿಂದ ಬಂಧಿತರಾದ ಕಲಾವಿದರಲ್ಲಿ. ಆದ್ದರಿಂದಲೇ ಅವರು ಕಲೆಗಳಲ್ಲಿ ಬದಲಾವಣೆ ಮತ್ತು ಹೊಸ ಹುಟ್ಟುಗಳು ಸಂಭವಿಸುವುದರ ಐತಿಹಾಸಿಕ ಅನಿವಾರ್ಯತೆಯನ್ನು, ನೂತನವಾದ ಕಲಾತ್ಮಕ ಅಭಿವ್ಯಕ್ತಿಗಳ ಸತತವಾದ ಮೂಡುವಿಕೆಯನ್ನು ಒಪ್ಪಿಕೊಳ್ಳಲಾರರು. ಇನ್ನೊಂದು ಕಡೆ ಬೇರೆ ಬಗೆಯ ಕಲಾವಿದನಿರುತ್ತಾನೆ. ಅವನಿಗೆ ಚಾರಿತ್ರಿಕ ಪ್ರಜ್ಞೆಯಿರುತ್ತದೆ. ವಾಸ್ತವವಾಗಿ ಸಾಮಾಜಿಕ ಕ್ರಾಂತಿಯು ನೀಡುವ ಭವಿಷ್ಯದ ಭರವಸೆಯು ಅವನ ಸೃಜನಶೀಲ ಪ್ರೇರಣೆಗಳನ್ನು ಇನ್ನಷ್ಟು ತೀವ್ರವಾಗಿಸುತ್ತದೆ; ಮಂಕಾಗಿಸುವುದಿಲ್ಲ. ಅವನು ಹೊಸದಕ್ಕೆ ಹೊಂದಿಕೊಂಡು ತನ್ನ ಆನುವಂಶಿಕವಾದ ಕಲಾಪ್ರಕಾರದ ಪರಿಧಿಯನ್ನು ಮೀರಿ ಹೆಚ್ಚು ಹೆಚ್ಚಿನ ಸೃಷ್ಟಿಕಾರ್ಯಗಳಲ್ಲಿ ತೊಡಗುತ್ತಾನೆ. ಅವನ ಪ್ರಕಾರವು ಬಂಜೆಯೂ, ಜಡವೂ ಆಗಿ ಬಿಟ್ಟಿದ್ದರಂತೂ ಈ ಮಾತು ಇನ್ನಷ್ಟು ನಿಜ.

ಪ್ರೊಸೀನಿಯಂ ರಂಗಭೂಮಿಯ ಬಹಿರಂಗದ ಚೌಕಟ್ಟಿನ ಬಗೆಗಿರುವ ಅತಿಯಾದ ವ್ಯಾಮೋಹದ ಮತ್ತೊಂದು ಹಂತವು, ಅಂಥ ರಂಗಭೂಮಿಯ ಐತಿಹಾಸಿಕ ಬೆಳವಣಿಗೆಯ ಸ್ವರೂಪದಿಂದಲೇ ಉಂಟಾಗುತ್ತದೆ. ಪ್ರೊಸೀನಿಯಂ ರಂಗಭೂಮಿಯು ಹೇಗೆ ಬೆಳೆದು ಬಂದಿದೆಯೆಂದರೆ, ಅದು ಮಾನವ ಜೀವನದ ಸೂಕ್ಷ್ಮ ಹಾಗೂ ಸಂಕೀರ್ಣ ಅಂಶಗಳ ಮೇಲೆ ಗಮನವನ್ನು ಕೇಂದ್ರೀಕರಿಸುವಂಥ ಸ್ಥಳವಾಗಿ ಬಿಟ್ಟಿದೆ. ಅದು ಧ್ಯಾನಕ್ಕೆ, ಚಿಂತನಕ್ಕೆ ಮತ್ತು ಅಂತರಂಗ ಪರಿವೀಕ್ಷಣೆಗೆ ಹೇಳಿ ಮಾಡಿಸಿದ ಜಾಗ. ಇಂಥ ಭಾವನೆಗಳು ನಾಟಕ ಮಂದಿರದಿಂದ, ಸುತ್ತಲಿನ ಕತ್ತಲಿನಿಂದ, ಮೌನದಿಂದ ಇನ್ನಷ್ಟು ಪ್ರಬಲವಾಗುತ್ತವೆ. ಆದರೆ ಬೂರ್ಜ್ವಾ ಕಲಾವಿದನು ಇದೆಲ್ಲವನ್ನೂ, ಪ್ರೇಕ್ಷಕರನ್ನು ಸಮುದಾಯದ, ಸಾಮೂಹಿಕದ ಮಟ್ಟದಿಂದ ಮೇಲೆ ಎತ್ತುವುದಕ್ಕೆಂದು ಉಪಯೋಗಿಸಿಕೊಳ್ಳುತ್ತಾನೆ. ಆ ಮಟ್ಟಕ್ಕೆ 'ಏರಿದ' ಪ್ರೇಕ್ಷಕನು 'ಕಲೆ'ಯನ್ನು ವೈಯಕ್ತಿಕವಾದ ನೆಲೆಯಲ್ಲಿ ಆಸ್ವಾದಿಸುತ್ತಾನೆ. ಅಂಥ ಕಲಾವಿದನು ರಂಗಭೂಮಿಯನ್ನು, ಅನೇಕ 'ವ್ಯಕ್ತಿ' ಗಳ ಅವಿಚ್ಛಿನ್ನ ಗಮನವನ್ನು ಪಡೆಯಬಹುದಾದ ವೇದಿಕೆಯಾಗಿ ಪರಿವರ್ತಿಸಿಕೊಂಡು ಬಿಡುತ್ತಾನೆ. ಹೀಗೆ ಒಂದು ಕಲಾಕೃತಿ ಮತ್ತು ಪ್ರತ್ಯೇಕ ವ್ಯಕ್ತಿಗಳ ನಡುವಿನ ಪರಸ್ಪರ ಕ್ರಿಯೆಯ ಪರಿಕಲ್ಪನೆಯೇ ಒಂದು ಬೂರ್ಜ್ವಾ ಅಗತ್ಯ. ಅದು ವೈಯಕ್ತಿಕ ಉದ್ಯಮ ಶೀಲತೆಯ ತತ್ವಜ್ಞಾನದ ಆಧಾರದ ಮೇಲೆ ರೂಪಿತವಾಗಿರುವ ವ್ಯವಸ್ಥೆಯ ಸಂತಾನ. ಸಾಹಿತ್ಯ ಪ್ರಕಾರಗಳಾಗಿ ಸಣ್ಣಕಥೆ ಮತ್ತು ಕಾದಂಬರಿಗಳ ಉಗಮಕ್ಕೂ, ಪ್ರೊಸೀನಿಯಂ ರಂಗಭೂಮಿಯ ಆವಿರ್ಭಾವಕ್ಕೂ ನಡುವೆ ಕುತೂಹಲಕಾರಿಯಾದ ಸಹಸಂಬಂಧವಿದೆ. ಎಷ್ಟರಮಟ್ಟಿಗೆಂದರೆ, ಇಂದು ನಾವು ಎಲ್ಲ ಗಂಭೀರ ಸಾಹಿತ್ಯವೂ, **'ಲಿಖಿತ'** ಸಾಹಿತ್ಯವೇ ಆಗಿರಬೇಕೆಂದೂ, ಅದನ್ನು ವೈಯಕ್ತಿಕ ನೆಲೆಯಲ್ಲಿ ಮಾತ್ರ ಆಸ್ವಾದಿಸಲು ಸಾಧ್ಯವಾಗುವಂತಿರಬೇಕೆಂದೂ **'ನಿರೀಕ್ಷಿಸು'**ತ್ತೇವೆ. ನಮಗೆ ಇದು ಪ್ರಶ್ನಾತೀತವಾದ ಸತ್ಯ. ಸಮುದಾಯದ ನೆಲೆಯಲ್ಲಿ, ಸಾಮೂಹಿಕವಾಗಿ ಸೃಷ್ಟಿಯಾಗುವ, ಸಾಮುದಾಯಿಕ ಕಲೆಗಳು, ಬೂರ್ಜ್ವಾ

ಜೀವನ ವಿನ್ಯಾಸಗಳ ಪರಮಾವಧಿಯೊಂದಿಗೆ ಮಾಯವಾಗುತ್ತಿವೆ. ಅಂಥ ಕಲೆಗಳನ್ನು ಸಾಮೂಹಿಕವಾಗಿ ಆಸ್ವಾದಿಸುವುದು ಸಾಧ್ಯವಿತ್ತು. ಇವರ ಜೊತೆ ಜೊತೆಗೆ, ಶೋಷಿತ ಜನ ಸಮೂಹದ ದೊಡ್ಡ ದೊಡ್ಡ ಅಂಶಗಳು, ವರ್ಗರಹಿತ ಸಮಾಜವನ್ನು ನಿರ್ಮಾಣ ಮಾಡಲೆಂದು ನಡೆಸುವ ಬಗೆಬಗೆಯ ಹೋರಾಟಗಳಲ್ಲಿ ತೊಡಗಿಕೊಂಡಂತೆಲ್ಲಾ, ಬೂರ್ಜ್ವಾ–ಭೂಮಾಲಿಕ ರಾಜ್ಯವ್ಯವಸ್ಥೆಯೊಳಗಿನ ಆಂತರಿಕ ಸಂಘರ್ಷವು ಪ್ರಬಲ ವಾದಂತೆಲ್ಲಾ, ಬೀದಿರಂಗಭೂಮಿಯಂಥ ಕಲಾರೂಪಗಳು ದೇಶದ ತುಂಬೆಲ್ಲ ಹುಟ್ಟಿ ಕೊಳ್ಳುತ್ತಿವೆ. ಅವುಗಳ ಉದಯವನ್ನು, ಜಗತ್ತನ್ನು ಕುರಿತ ವೈಯಕ್ತಿಕ ದೃಷ್ಟಿಕೋನದ ಜಾಗದಲ್ಲಿ, ಸಾಮೂಹಿಕವಾದ ದೃಷ್ಟಿಕೋನವು ಕ್ರಾಂತಿಕಾರಕವಾಗಿ ಮೈದಳೆಯುತ್ತಿರುವ ಬಗೆಯೆಂದು ತಿಳಿಯಬೇಕು. ಸರಿ, ಹೀಗಾದಾಗ ಬೂರ್ಜ್ವಾ ಕಲಾವಿದನಿಗೆ ತನ್ನ ಜೀವನದ ಕೊನೆಯೇ ಬಂದಂತೆ ಭಾಸವಾಗುತ್ತದೆ. ಏಕೆಂದರೆ ಜಗತ್ತನ್ನು ಕುರಿತ ಅವನ ನಿಲುವುಗಳ ಬುನಾದಿಯನ್ನೇ ಆಮೂಲಾಗ್ರವಾಗಿ ತಿರಸ್ಕರಿಸಲಾಗುತ್ತದೆ. ಆಗ ಅವನು ಹತಾಶನಾಗಿ, ತನ್ನ ಪ್ರಕಾರದ ಪರಿಧಿಯೊಳಗೆ '**ತಾನು**' ಕೆಲಸ ಮಾಡುತ್ತಿರುವ ರೀತಿಯೇ, ಕಟ್ಟಕಡೆಯ ದೆಂದೂ, ಅತ್ಯುತ್ತಮವಾದುದೆಂದೂ ಹಟ ಹಿಡಿಯುತ್ತಾನೆ. ಸಮುದಾಯ ರಂಗ ಭೂಮಿಯ ಚಲನಶೀಲ ಚೈತನ್ಯದ ಬಗ್ಗೆ ಅವನಿಗಿರುವ ಅಸಹನೆಯು ಅವನ ಭಯದ ಲಕ್ಷಣ. ಆದ್ದರಿಂದ ನಮ್ಮ ರೀತಿಯ ರಂಗಭೂಮಿಯನ್ನು, 'ದಯವಿಟ್ಟು ಕ್ಷಮಿಸಿಬಿಡಿ' ಎಂಬ ಪೂರ್ವ ಪೀಠಿಕೆಯೊಂದಿಗೆ ಸಮರ್ಥಿಸಿಕೊಳ್ಳುವ ಅಗತ್ಯವೇನೂ ಇಲ್ಲ. ಐತಿಹಾಸಿಕ ವಾಗಿ ಇದು 'ನಮ್ಮ' ಕಾಲ. ಈ ಅವಕಾಶವನ್ನು ಬಳಸಿಕೊಂಡು ನಾವು ಮುಂದೆ ನುಗ್ಗೋಣ.

ಆದರೆ "ಪ್ರೊಸೀನಿಯಂ ರಂಗಭೂಮಿಯನ್ನು ಕಿತ್ತು ಹಾಕಿ, ಅದರ ಜಾಗದಲ್ಲಿ ಸಮಕಾಲೀನ ಬೀದಿರಂಗಭೂಮಿಯನ್ನು ಸ್ಥಾಪಿಸಿ ಬಿಡುವ ಐತಿಹಾಸಿಕ ತುರ್ತು ಅಗತ್ಯವು ಯಾವಾಗಲೋ ಬಂದು ಬಿಟ್ಟಿದೆ" ಎನ್ನುವುದು ಖಂಡಿತವಾಗಿಯೂ ನಮ್ಮ ಅಭಿಪ್ರಾಯ ವಲ್ಲ. ಅಲ್ಲವೇ ಅಲ್ಲ. ಅಂಥ ಭಾವನೆ ನಮ್ಮ ಮನಸ್ಸಿನ ಮೂಲೆಯಲ್ಲಿಯೂ ಇಲ್ಲ. ನಾವು '**ಹೇಳುತ್ತಿರುವುದು**' ಏನೆಂದರೆ, ಇಂದಿನ ಬೀದಿ ರಂಗಭೂಮಿಯು, ರಂಗಭೂಮಿ ಯನ್ನು ಕುರಿತಾದ ಬೂರ್ಜ್ವಾ ಪರಿಕಲ್ಪನೆಯನ್ನು ಪ್ರತಿಭಟಿಸುವ ಹಲವು ಅವತಾರಗಳಲ್ಲಿ ಒಂದು ಎಂದು. ಅದು ಪ್ರೊಸೀನಿಯಂ ರಂಗಭೂಮಿಯನ್ನು ಬೂರ್ಜ್ವಾ ಹಿತಾಸಕ್ತಿಗಳು ತಮ್ಮ ಆಸ್ತಿಯಾಗಿ ಮಾಡಿಕೊಂಡಿರುವುದರ ವಿರುದ್ಧವಾದ ಪ್ರತಿಭಟನೆ ನಮ್ಮ ದೃಷ್ಟಿಯಲ್ಲಿ ಪ್ರೊಸೀನಿಯಂ ರಂಗಭೂಮಿ ಮತ್ತು ಬೀದಿರಂಗಭೂಮಿಗಳ ನಡುವೆ ಇದೆಯೆನ್ನಲಾದ ಪರಸ್ಪರ ವಿರೋಧದ ಬಗ್ಗೆ ಮಾತನಾಡುವುದು ಅಸಂಗತ. ಎರಡೂ ಅಷ್ಟೇ ಪ್ರಮಾಣ ದಲ್ಲಿ ಜನರಿಗೆ ಸೇರಿದವು. ಆದರೆ ಕಲೆಯನ್ನು ಕುರಿತ ಬೂರ್ಜ್ವಾ, ವೈಯಕ್ತಿಕ ದೃಷ್ಟಿ ಕೋನಕ್ಕೂ, ಜನತೆಯ, ಸಾಮುದಾಯಿಕ ದೃಷ್ಟಿಕೋನಕ್ಕೂ ನಡುವೆ, ಖಂಡಿತವಾದ ಎಂದೆಂದಿಗೂ ಬಗೆಹರಿಸಲಾಗದ ಪರಸ್ಪರ ವಿರೋಧವಿದೆ.

## ೨. ರಂಗಭೂಮಿ ಮತ್ತು ಜನತೆ

ಹದಿನೈದು ತಿಂಗಳುಗಳ ಹಿಂದೆ, ದೆಹಲಿಯಲ್ಲಿ 'ಸಂಭವ್' ಎಂಬ ನಟರ ರಿಪರ್ಟರಿಯನ್ನು ಸ್ಥಾಪಿಸಲಾಯಿತು. ತಿಂಗಳಿಗೊಂದು ಹೊಸ ನಾಟಕವನ್ನು ಪ್ರದರ್ಶಿಸಬೇಕೆನ್ನುವುದು ಅದರ ಘೋಷಿತ ಉದ್ದೇಶವಾಗಿತ್ತು. ನಮ್ಮಲ್ಲಿ ಅನೇಕರು ಈ ಘೋಷಣೆಯನ್ನು, ಗಂಭೀರವಾಗಿ ತೆಗೆದುಕೊಳ್ಳಲಾರದಷ್ಟು ಮಹತ್ವಾಕಾಂಕ್ಷೆಯದೆಂದು ತಳ್ಳಿಹಾಕಿದೆವು. ಆದರೆ 'ಸಂಭವ್' ಆ ಕೆಲಸವನ್ನು ಮಾಡಿತೋರಿಸಿದೆ.

ಇದೊಂದು ಅನನ್ಯವಾದ ಸಾಧನೆ. ಅದರಲ್ಲೂ ದೆಹಲಿಯ ರಂಗಭೂಮಿಯ ಇಂದಿನ ಅವನತ ಸನ್ನಿವೇಶದಲ್ಲಿ, ಯಾರಿಂದಲೂ ನೆರವು ಪಡೆಯದ, ರಂಗತಾಲೀಮು ಮಾಡಲು ಖಾಯಂ ಆದ ಇಷ್ಟಗಲ ಜಾಗ ಕೂಡ ಇಲ್ಲದ ರಿಪರ್ಟರಿಯೊಂದು ಈ ವಿಕ್ರಮವನ್ನು ಸಾಧಿಸಿದೆ ವಾಸ್ತವವಾಗಿ, ನಗರದ ಮೂರು ಪ್ರಮುಖ ರಿಪರ್ಟರಿಗಳ ಪೈಕಿ, ಕಳೆದ ಒಂದೂಕಾಲು ವರ್ಷದ ಅವಧಿಯಲ್ಲಿ ಅತ್ಯಂತ ಕ್ರಿಯಾಶೀಲವಾಗಿರುವ ರಿಪರ್ಟರಿಯೆಂದರೆ 'ಸಂಭವ್'. ಉಳಿದೆರಡು 'ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾ'ದ ರಿಪರ್ಟರಿ ಕಂಪನಿ ಮತ್ತು 'ಶ್ರೀರಾಮ ಸೆಂಟರ್ ಥಿಯೇಟರ್,ರಿಪರ್ಟರಿ. ಮೊದಲನೆಯದಕ್ಕೆ ಸರ್ಕಾರದ ಧನಸಹಾಯ ದೊರಕಿದರೆ, ಎರಡನೆಯದು ಇಡೀ ದೇಶದ ಅತಿ ದೊಡ್ಡ 'ಕೈಗಾರಿಕೋದ್ಯಮ'ಗಳಲ್ಲಿ ಒಂದರಿಂದ ನೆರವು ಪಡೆಯುತ್ತದೆ.

'ಸಂಭವ್'ಗೆ ರಂಗಭೂಮಿಯನ್ನು ಕುರಿತಾದ ತೀವ್ರಬದ್ಧತೆ ಮತ್ತು ಅಪಾರವಾದ ಇಚ್ಛಾಶಕ್ತಿಯಿಲ್ಲದಿದ್ದರೆ ಈ ಸಾಧನೆಯು ಸಾಧ್ಯವಾಗುತ್ತಿರಲಿಲ್ಲ. ಏಕೆಂದರೆ ಈ ಅವಧಿಯುದ್ದಕ್ಕೂ ಅವರಿಗೆ ಪ್ರೇಕ್ಷಕ ಸಮುದಾಯವು ಬಿಸಿಲುಗುದುರೆಯಾಗಿಯೇ ಉಳಿದಿದೆ. ತಿಂಗಳಾದ ಮೇಲೆ ತಿಂಗಳು, ಅವರು ಕೇವಲ ಇನ್ನೂರು ಜನ ಹಿಡಿಸುವ ನೆಲಮಾಳಿಗೆಯ ರಂಗಮಂದಿರವೊಂದರಲ್ಲಿ, ಪ್ರದರ್ಶನಗಳನ್ನು ನೀಡುತ್ತಾ ಬಂದಿದ್ದಾರೆ. ಅಷ್ಟು ಚಿಕ್ಕ ರಂಗಮಂದಿರದಲ್ಲಿಯೂ, ನಟರು ಸಂಜೆಯಾದ ಮೇಲೆ ಸಂಜೆ ಖಾಲೀ ಸೀಟುಗಳನ್ನು ಎದುರಿಸಬೇಕಾಗಿ ಬಂದಿದೆ. ಇದೆಲ್ಲ ಇನ್ನಷ್ಟು ದುರದೃಷ್ಟಕರವಾದುದು. ಏಕೆಂದರೆ ಅವರ ರೀತಿಯ ರಂಗಭೂಮಿಯಲ್ಲಿ ಜನಪ್ರಿಯತೆ ಸಂಪಾದಿಸುವ ಗುಣ ಇದೆ. ಅವರು ಆಡುವ ನಾಟಕಗಳಲ್ಲಿ ಬಿಗಿಯಾಗಿ ಹೆಣೆದ ಸುವಿಧಾನವಿವೆ: ಒಳ್ಳೆಯ ನಾಟಕೀಯ ಗತಿ ಇದೆ, ರಂಗಸಜ್ಜಿಕೆಯು ಸೂಕ್ತವೂ ಸುನಿರ್ವಹಿತವೂ ಆಗಿವೆ. ಅವರ ತಂಡದಲ್ಲಿ ಅನೇಕ ಒಳ್ಳೆಯ ನಟರಿದ್ದಾರೆ. ಅಮಿತಾಬ್ ಶ್ರೀ ವಾಸ್ತವ, ದೀಪಾ ಸಾಹಿ, ಸೀಮಾ ಭಾರ್ಗವ್, ದೇವೇಂದ್ರರಾಜ್ 'ಅಂಕುರ', ಸುಭಾಷ್‌ಉದ್ಗತ್ ಮುಂತಾದ ಉತ್ತಮ ನಿರ್ದೇಶಕರಿದ್ದಾರೆ ಅವರು ಆಡಿರುವ ಬಹುಪಾಲು ನಾಟಕಗಳು ಮಂಕಾಗಿಯೂ ಇಲ್ಲ, ಬೋರು ಹೊಡೆಸುವುದೂ ಇಲ್ಲ.

ಇತರ ಸುಪ್ರತಿಷ್ಠಿತ ನಾಟಕತಂಡಗಳಿಗೂ ಇದೇ ಗತಿಯಾಗಿರುವುದನ್ನು ನಾನು ಗಮನಿಸಿದ್ದೇನೆ. ಎಸ್.ಎಸ್.ಡಿ. ರಿಪರ್ಟರಿ ಕಂಪನಿಯು ವರ್ಷಕ್ಕೆ ಎರಡು ಬಾರಿ ನಾಲ್ಕೈದು ಪೂರ್ಣಾವಧಿಯ ನಾಟಕಗಳನ್ನು ಪ್ರದರ್ಶಿಸುತ್ತದೆ. ಕೆಲವು ಹಳೆಯವು, ಕೆಲವು ಹೊಸವು. ಪ್ರತಿ ನಾಟಕವೂ ಸುಮಾರು ಏಳು ರಾತ್ರಿಗಳು ಪ್ರದರ್ಶಿತವಾಗುತ್ತದೆ ಎಂದಿಟ್ಟುಕೊಳ್ಳೋಣ. ಅಷ್ಟಾದರೆ ಅದೊಂದು ಯಶಸ್ಸೆಂದೇ ಪರಿಗಣಿತವಾಗುತ್ತದೆ. ಎಂ.ಕೆ. ರೈನಾ ಅಂಥ ಪ್ರಸಿದ್ಧ ನಿರ್ದೇಶಕರಿಗೆ ಅವರದೇ ಆದ ಅಭಿಮಾನಿಗಳ ಬಳಗವಿದೆ. ಆ ಬಳಗ ದೊಡ್ಡ ರಂಗಮಂದಿರವೊಂದನ್ನು ಸತತವಾಗಿ ನಾಲ್ಕೈದು ದಿನಗಳವರೆಗೆ ತುಂಬಬಲ್ಲುದು. ಹಾಗೆ ನೋಡಿದರೆ, ಅದೂ ಯಾವಾಗ? ರೈನಾ ಆರು ತಿಂಗಳಿಗೊಮ್ಮೆ ನಾಟಕವಾಡಿಸಿದರೆ ಮಾತ್ರ. ಅವರ ಹೆಚ್ಚು ಯಶಸ್ವೀ ನಾಟಕಗಳಾದ 'ಮದರ್', 'ಕಬೀರಾ ಖಡಾ ಬಾಜಾರ್ ಮೇ', ಮುಂತಾದವು ಇನ್ನಷ್ಟು ಹೆಚ್ಚು ಕಾಲ ನಡೆದಿವೆ, ಇಷ್ಟಾದರೆ ಅಬ್ಬಬ್ಬಾ ಎನ್ನಬೇಕು. ಹಬೀಬ್ ತನ್ವೀರ್ ಅವರ ನಾಟಕಗಳು ಇತರ ನಗರಗಳಲ್ಲಿ ಪ್ರಚಂಡ ಜನಪ್ರಿಯತೆ ಹೊಂದಿದ್ದರೂ, ದೆಹಲಿಯಲ್ಲಿ ಹೆಚ್ಚು ಕಡಿಮೆ ಖಾಲಿ ಹೊಡೆಯುವ ಥಿಯೇಟರ್‌ಗಳಲ್ಲಿ ಪ್ರದರ್ಶಿತವಾಗಿದೆ. ಶ್ರೀರಾಮ ಥಿಯೇಟರ್ ಸೆಂಟರ್ ರಿಪರ್ಟರಿಯ ಅನೇಕ ಪ್ರದರ್ಶನಗಳ ಪಾಡು ಕೂಡ ಇದಕ್ಕಿಂತ ಬೇರೆಯಲ್ಲ. ಯಾವಾಗಲೊ ಒಮ್ಮೊಮ್ಮೆ ನಾಟಕವಾಡುವ ತಂಡಗಳಿಗಂತೂ ಒಂದು ದೇಖಾವೆಯ ಟಿಕೆಟ್ ಮಾರುವುದೇ ಕಷ್ಟವಾಗುತ್ತದೆ. ಒಂದು ಕಾಲದಲ್ಲಿ ಬ್ಯಾರಿಜಾನ್‌ರ ಇಂಗ್ಲಿಷ್ ನಾಟಕಗಳಿಗೆ ಜನ ಕಿಕ್ಕಿರಿದು ಸೇರುತ್ತಿದ್ದರು. ಇಂದಿನ ಪರಿಸ್ಥಿತಿ ಹಾಗಿಲ್ಲ.

ಅಪರೂಪಕ್ಕೊಮ್ಮೆ ಯಶಸ್ವಿಯಾದ ದಿಶಾಂತರ್ ತಂಡದ 'ಆಧೇ ಅಧೂರೇ', 'ಅಭಿಯಾನ್'ನ 'ಘಾಸೀರಾಂ ಕೊತ್ವಾಲ್' ಮತ್ತು 'ಜಾತ್ ಹೀ ಪೂಛೋ ಸಾಧೂ ಕೀ' 'ಪ್ರಯೋಗ್'ನ 'ಮದರ್' ಮತ್ತು 'ಕಬೀರಾ' ಹಾಗೂ ನಯಾ ಥಿಯೇಟರ್‌ನವರ 'ಚರಣ್‌ದಾಸ್ ಚೋರ'ಗಳನ್ನು ಬಿಟ್ಟರೆ, ದೆಹಲಿಯ ರಂಗಭೂಮಿಯು ಪ್ರೇಕ್ಷಕರನ್ನು ಆಕರ್ಷಿಸುವ ಕೆಲಸದಲ್ಲಿ ಯಾವಾಗಲೂ ಅಪಾರ ಯಶಸ್ಸನ್ನು ಪಡೆದಿಲ್ಲ. ಕೆಲವು ಬಾರಿ ರಂಗಚಟುವಟಿಕೆಗಳು ದಿಢೀರ ಎಂದು ಚಿಗುರಿಕೊಳ್ಳುತ್ತವೆ. ಸುಮಾರು ಐದು ವರ್ಷಗಳ ಹಿಂದೆ ದೆಹಲಿಯು ಅಂಥ ಉತ್ಕರ್ಷವೊಂದನ್ನು ನೋಡಿತು. ಪ್ರದರ್ಶನಗಳ ಸಂಖ್ಯೆ ಹೆಚ್ಚಿತು. ಹೊಸ ತಂಡಗಳು ಹುಟ್ಟಿಕೊಂಡವು. ಈ ಏರುವೆ ಒಂದೆರಡು ವರ್ಷಗಳ ಕಾಲ ಉಳಿಯಿತು. ಇಂದಿಗೂ ಕೂಡ, ಒಂದು ದಶಕದ ಹಿಂದೆ ಇದ್ದುದಕ್ಕಿಂತ ಹೆಚ್ಚು ರಂಗ ತಂಡಗಳು ಸಕ್ರಿಯವಾಗಿವೆ. ಅದೂ ಅಲ್ಲದೆ, ವ್ಯಕ್ತಿನಿರತ ನಿರ್ದೇಶಕರ ನೆರವು ಪಡೆಯುವ ಕಾಲೇಜು ರಂಗಭೂಮಿಯೂ ಸಾಕಷ್ಟು ಬೆಳೆದಿದೆ. ಆದರೆ ನಿಯಮಿತವಾಗಿ ನಾಟಕ ನೋಡಲು ಹೋಗುವ ಪ್ರೇಕ್ಷಕರ ಪ್ರಮಾಣದಲ್ಲಂತೂ, ಬೆರಗುಗೊಳಿಸುವ ಹೆಚ್ಚುವರಿಯು ಖಂಡಿತವಾಗಿಯೂ ಆಗಿಲ್ಲ. ನೀವು ಒಂದು ತಿಂಗಳಿನಲ್ಲಿ ಐದು ನಾಟಕಗಳನ್ನು ನೋಡಲು ಹೋದರೆ. ಅದೇ ಅದೇ ಜನ ಕೈಗೆ ಕಾಲಿಗೆ ಸಿಗುತ್ತಾರೆ.

ದೆಹಲಿಯಲ್ಲಿ ನಾಟಕದ ಹುಚ್ಚು ಏಕೆ ಹಿಡಿಯುವುದಿಲ್ಲ? ಒಂದು ಮಾಮೂಲು ಚಲನಚಿತ್ರ ಅಥವಾ ಒಂದು ಸಂಜೆಯ ದೂರದರ್ಶನ ಕಾರ್ಯಕ್ರಮಗಳಿಗಿಂತ ಎಷ್ಟೋ ಹೆಚ್ಚು ಮನರಂಜನೆಯನ್ನು ಒದಗಿಸುವ ನಾಟಕಗಳಿಗೂ ಏಕೆ ಜನ ಗುಂಪುಗೂಡುವುದಿಲ್ಲ? ಕಲ್ಕತ್ತಾದ ರಂಗಭೂಮಿಗೆ ಸುಮಾರು ಇನ್ನೂರು ವರ್ಷಗಳ ಅವಿರತವಾದ ಇತಿಹಾಸವಿದೆ. ಇಂದು ರಂಗಭೂಮಿಯು ಆ ನಗರದ ಸಾಂಸ್ಕೃತಿಕ ಜೀವನದ ಬಹಳ ಮುಖ್ಯವಾದ ಭಾಗ. ನಾಟಕ ನೋಡಲು ಹೋಗುವ ಸುಭದ್ರ ಸಂಪ್ರದಾಯವೊಂದು ಅಲ್ಲಿ ಬೆಳೆದುಬಂದಿದೆ. ಇದು ಎಲ್ಲರೂ ನಂಬಿರುವಂತೆ, ಆ ನಗರದ ನಾಟಕಗಳು ಸಾಮಾನ್ಯವಾಗಿ ಉತ್ತಮ ಮಟ್ಟದವಾಗಿರುವುದರಿಂದ ಅಲ್ಲ. ಗುಣಮಟ್ಟವೊಂದೇ ಪ್ರೇಕ್ಷಕರನ್ನು ರಂಗಮಂದಿರಗಳಿಗೆ ಆಕರ್ಷಿಸುವಂತಿದ್ದರೆ ದೆಹಲಿಯ ರಂಗಭೂಮಿಯೂ ಅಷ್ಟೇ ಜನಪ್ರಿಯವಾಗಿರಬೇಕಿತ್ತು. ರಂಗಭೂಮಿಯು ಕಲ್ಕತ್ತಾದ ನಾಗರಿಕನ ಹೃದಯಕ್ಕೆ ಹತ್ತಿರವಾಗಿರುವುದು ಏಕೆಂದರೆ, ಅದು ಆ ನಗರದ ಜನಜೀವನದಲ್ಲಿ ಆಳವಾಗಿ ಬೇರೂರಿದೆ. ಹತ್ತೊಂಬತ್ತನೆಯ ಶತಮಾನದಲ್ಲಿಯೂ ಅದು ಜನತೆಯ ಆಶೋತ್ತರಗಳಿಗೆ ಸ್ಪಂದಿಸುತ್ತಿತ್ತು. 'ನೀಲ್ ದರ್ಪಣ' ಅಂತಹ ಬ್ರಿಟಿಷ್ ವಿರೋಧಿ ನಾಟಕಗಳನ್ನು ಆಡುತ್ತಿತ್ತು. ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಕೂಡ ಅದು ಜನರನ್ನು ಸೆಳೆದುಕೊಳ್ಳುವ ಕೇಂದ್ರವಾಗಿಯೇ ಉಳಿಯಿತು. ಕಲ್ಕತ್ತಾದ ಜನ ತಮ್ಮ ರಂಗಭೂಮಿಯನ್ನು ಪ್ರೀತಿಸುವುದು ಏಕೆಂದರೆ ಅದು ಯಾವಾಗಲೂ ಅವರ ಜೀವನಗಳನ್ನು, ನಿರಾಶೆಗಳನ್ನು, ಕನಸುಗಳನ್ನು ಪ್ರತಿಫಲಿಸುತ್ತಾ ಬಂದಿದೆ.

ಆದರೆ ದೆಹಲಿಗೆ, ಕಲ್ಕತ್ತಾದ ಹಾಗೆ ನಗರ ರಂಗಭೂಮಿಯ ಸುದೀರ್ಘ ಪರಂಪರೆಯೂ ಇಲ್ಲ. ಈ ಪುರಾತನ ನಗರದಲ್ಲಿ ವಾಸಿಸುವ ಜನರ ಜೀವನದ ಬಗ್ಗೆ ಕಾಳಜಿವಹಿಸುವಂತಹ ರಂಗಭೂಮಿಯೂ ಇಲ್ಲ. ಸುಮಾರು ಐವತ್ತು ವರ್ಷಗಳ ಚರಿತ್ರೆಯನ್ನು ಹೊಂದಿರುವ ದೆಹಲಿಯ ರಂಗಭೂಮಿಯು, ಜನಸಮುದಾಯದ ಸಮಸ್ಯೆಗಳು ಮತ್ತು ಕಾಳಜಿಗಳ ಬಗ್ಗೆ ಮೊದಲಿನಿಂದಲೂ ಒಂದು ಬಗೆಯ ದಿವ್ಯನಿರ್ಲಕ್ಷ್ಯವನ್ನು ತೋರಿಸುತ್ತಾ ಬಂದಿದೆ. ಈ ಅವಧಿಯ ಮುಕ್ಕಾಲು ಮೂರು ವೀಸ ಪಾಲು, ತನ್ನೆಲ್ಲ ಸಾಮರ್ಥ್ಯವನ್ನು, ಒಂದೇ ಮನಸ್ಸಿನಿಂದ, ಆಯ್ದ ಸುಸಂಸ್ಕೃತ ಪ್ರೇಕ್ಷಕರ ಸಮುದಾಯಕ್ಕೆ ಸಮರ್ಪಿಸಿಬಿಟ್ಟಿದೆ. ಒಟ್ಟು ಸಮುದಾಯದ ಆ ಚಿಕ್ಕಭಾಗ ಮಾತ್ರ ರಂಗಭೂಮಿಯನ್ನು ಪೋಷಿಸುತ್ತಾ ಬಂದಿರುವುದರಲ್ಲಿ ಆಶ್ಚರ್ಯವಾದರೂ ಏನು? ನೀ ನನಗಿದ್ದರೆ ನಾ ನಿನಗೆ. ಆದ್ದರಿಂದಲೇ, ಯಾವಾಗಲೋ ಹುಣ್ಣಿಮೆಗೋ ಅಮಾವಾಸ್ಯೆಗೋ ಬೇರೆ ಬಗೆಯ ನಾಟಕವೊಂದನ್ನು ಪ್ರದರ್ಶಿಸಿದರೂ, ಅಂಥ ನಾಟಕಕ್ಕೆ ಪ್ರತಿಸ್ಪಂದಿಸಬಹುದಾದ ಜನರಿಗೆ, ಆ ನಾಟಕ ನಡೆಯಿತು ಎಂಬ ಸಂಗತಿಯು ಕಿವಿಯ ಮೇಲೆ ಬೀಳುವುದಿಲ್ಲ. ಸಾಮಾನ್ಯ ದೆಹಲಿವಾಲಾನೊಬ್ಬನಿಗೆ, ದೊರೆಯುವುದು ನೀರು ಬೆರೆಸಿದ ಭಾವನೆಗಳು, ಅಸ್ತಿತ್ವದಲ್ಲಿಲ್ಲದ ಸಮಸ್ಯೆಗಳು ಮತ್ತು ಗುರುತು ಸಿಕ್ಕದಷ್ಟು ಆಗಂತುಕವಾದ ಪಾತ್ರಗಳಾಗಿರುತ್ತವೆ.

ದೆಹಲಿಯ ಸಾಮಾನ್ಯ ನಾಗರಿಕನಿಗೆ ಎಂದಿಗೂ ಕೂಡ ರಂಗಭೂಮಿಯು ಇಷ್ಟಪಟ್ಟು ಆಯ್ದುಕೊಳ್ಳುವ ಸಂಗತಿಯಾಗಿರಲಿಲ್ಲ. ಅವನು ತನ್ನ ಬಿಡುವಿನ ಕಾಲದಲ್ಲಿ ಏನು ಮಾಡುತ್ತಾನೆ? ಅವನು ಟಿ. ವಿ. ನೋಡುತ್ತಾನೆ ಅಥವಾ ಸಂಸಾರ ಸಮೇತವಾಗಿ ಬೋಟ್ ಕ್ಲಬ್‌ಗೆ ಹೋಗುತ್ತಾನೆ ಅಥವಾ ಇಂಡಿಯಾ ಗೇಟ್ ಹುಲ್ಲುಗಾವಲಿನಲ್ಲಿ ಅಡ್ಡಾಡುತ್ತಾನೆ ಅಥವಾ ಒಂದು ಸಿನಿಮಾಗೆ ಹೋಗುತ್ತಾನೆ ಈಗ, ನಾವು ಈ ಟಿ.ವಿ. ಎಂಬ ಉಪಕರಣವನ್ನು ಇನ್ನಷ್ಟು ಹತ್ತಿರದಿಂದ ಪರಿಶೀಲಿಸಬೇಕು. ವರ್ಷಗಳು ಕಳೆದಂತೆ ಟೆಲಿವಿಷನ್ ಪ್ರಸಾರದ ಅವಧಿಯನ್ನು ಕ್ರಮೇಣ ಏರಿಸುತ್ತಾ ಬಂದಿದ್ದಾರೆ. ಈಗ ಕೆಲಸದ ದಿನಗಳಲ್ಲಿ ದಿನಕ್ಕ ಐದೂವರೆ ಗಂಟೆ ಟಿ.ವಿ. ಇದ್ದರೆ, ಭಾನುವಾರಗಳಂದು ದಿನವೆಲ್ಲಾ ಇರುತ್ತವೆ. ಇದರ ಪರಿಣಾಮವಾಗಿ ಒಂದು ವಿಚಿತ್ರ ಸನ್ನಿವೇಶ ಉಂಟಾಗಿದೆ. ಅಪಾರ ಸಂಖ್ಯೆಯ ದೆಹಲೀವಾಸಿಗಳು ಇರುವ ಸರ್ಕಾರೀ ಕಾಲೊನಿಗಳು ಮತ್ತು ದೆಹಲಿ ಅಭಿವೃದ್ಧಿ ಪ್ರಾಧಿಕಾರದ ಕಾಲೊನಿಗಳಲ್ಲಿ ಸಾಯಂಕಾಲದ ಹೊತ್ತು ರಸ್ತೆಗಳು ನಿರ್ಜನವಾಗಿರುತ್ತವೆ. ಒಂದರ ನಂತರ ಒಂದರಂತೆ ಬರುವ ಸ್ಪಾನ್ಸರ್ಡ್ ಕಾರ್ಯಕ್ರಮಗಳ ನಂತರ ಹಿಂದೀ ಚಲನಚಿತ್ರವೊಂದನ್ನು ಪ್ರಸಾರ ಮಾಡುವ ಭಾನುವಾರಗಳಂತೂ ಆ ಬಡಾವಣೆಗಳು ದೆವ್ವಕ್ಕೆ ಹೆದರಿ ಖಾಲಿಮಾಡಿದ ಊರುಗಳಂತೆ ಬಿಕೋ ಎನ್ನುತ್ತವೆ. ಈಗ ಮಕ್ಕಳು ಒಟ್ಟಿಗೆ ಸೇರಿ ಆಟವಾಡುವುದಿಲ್ಲ, ನೆರೆಹೊರೆಯವರು ಗುಂಪುಗೂಡಿ ಹರಟೆ ಹೊಡೆಯುವುದಿಲ್ಲ. ಗೃಹಿಣಿಯರು ಪರಸ್ಪರ ಒಂದಾಗಿ ಸಂಪರ್ಕ ಬೆಳೆಸುವುದಿಲ್ಲ. ಸಾಮಾಜಿಕ ಸಂಬಂಧಗಳ ಪ್ರಮಾಣವು ಅಗಾಧ ಪ್ರಮಾಣದಲ್ಲಿ ಕಡಿಮೆಯಾಗಿದೆ. ದಿನಕಳೆದಂತೆ ಈ ಪರಿಸ್ಥಿತಿಯು ಇನ್ನಷ್ಟು ಹದಗೆಡುತ್ತಿದೆ. ಟಿ.ವಿ.ಯ ಮಾಲಿಕರಾಗಿರುವ ಕುಟುಂಬಗಳಂತೂ ಸಾಮಾಜಿಕ ಸಂಬಂಧಗಳನ್ನು ಬೆಳೆಸಿಕೊಳ್ಳುವ ಅಗತ್ಯವೇ ಇರದಷ್ಟು ಸ್ವಯಂ ಸಂತೃಪ್ತರಾಗಿದ್ದಾರೆ. ಇಂತಹ ಪರಿಸ್ಥಿತಿಯು ಈಗ ನಮ್ಮನ್ನು ಆಳುತ್ತಿರುವ ಸರ್ಕಾರಕ್ಕೆ ಆಪ್ಯಾಯಮಾನವಾಗಿದೆ ಯೆಂಬ ಸಂಗತಿಯು ಸ್ಪಷ್ಟವಾಗಿದೆ. ಟೆಲಿವಿಷನ್ ಕ್ರಮೇಣ ವ್ಯಕ್ತಿಗೂ ಸಮುದಾಯಕ್ಕೂ ಇರುವ ಜೀವಂತ ಸಂಬಂಧವನ್ನು ಕತ್ತರಿಸಿ ಹಾಕುತ್ತಿದೆ. ತಮ್ಮ ಸಾಮಾಜಿಕ ಪರಿಸರದಿಂದ ಕಡಿದುಕೊಂಡಿರುವ ಪ್ರತ್ಯೇಕಿತ ವ್ಯಕ್ತಿಗಳು ಯಾವುದೇ ವಿಧವಾದ ವ್ಯವಸ್ಥಿತ 'ತಂಟೆ'ಗಳಲ್ಲಿ ಅಥವಾ ಪ್ರಜಾಪ್ರಭುತ್ವ ಪರವಾದ ಹೋರಾಟಗಳಲ್ಲಿ ತೊಡಗಿಕೊಳ್ಳುವ ಸಂಭವ ಬಹಳ ಕಡಿಮೆ. ಕ್ರಿಯಾಶೀಲವಾದ ಸಾಂಸ್ಕೃತಿಕ ಪರಿಸರವು ಇಲ್ಲದೆ ಹೋದಾಗ ಟೆಲಿವಿಷನ್ ಇಂಥ ಮಂಕಣ್ಣಗಳನ್ನು ಸೃಷ್ಟಿಸುತ್ತಿದೆ ಮತ್ತು ನಮ್ಮ ಪ್ರತಿಷ್ಠಿತ ಶಕ್ತಿಗಳು ಸೃಷ್ಟಿಸಲು ಬಯಸುತ್ತಿರುವುದೂ ಇಂಥ ಮಂಕುದಿಣ್ಣೆಗಳನ್ನೇ ಇರಬೇಕು.

ಈ ರೀತಿಯ ಬೆಳವಣಿಗೆಗಳು ಒಂದಲ್ಲ ಹಲವು ಬಗೆಗಳಲ್ಲಿ ರಂಗಭೂಮಿಗೆ ಅಪಾಯಕರವೆಂಬ ಸಂಗತಿಯೂ. ಅಷ್ಟೇ ಸ್ಪಷ್ಟವಾಗಿದೆ. ನಾಟಕವೆಂದರೆ ಇಡೀ ಸಮುದಾಯವು ಒಟ್ಟಾಗಿ ಹಂಚಿಕೊಳ್ಳುವ ಅನುಭವ. ಒಟ್ಟಿಗೆ ಸೇರಿರುವ ಜನರ ದೊಡ್ಡ ಗುಂಪೊಂದು ನಾಟಕವನ್ನು ನೋಡುತ್ತದೆ. ನಾಟಕವು ಕೊಡುವ ಸಂತೋಷದಲ್ಲಿ ಒಂದು

ದೊಡ್ಡ ಭಾಗವು ಅನೇಕರೊಂದಿಗೆ ಹಂಚಿಕೊಂಡಿರುವುದರಿಂದ ಮಾತ್ರವೇ ಹುಟ್ಟಿಕೊಳ್ಳುತ್ತದೆ. ಟೆಲಿವಿಶನ್ ನಮ್ಮನ್ನು ನಮ್ಮ ಚಿಕ್ಕ ಪುಟ್ಟ ಕುಟುಂಬ ಪರಿವಾರಗಳಿಗೆ ಬಂಧಿಸಿಬಿಟ್ಟಿದೆ. ಎಷ್ಟೆಂದರೆ ನಾವು ಜನರ ಒಡನಾಟದಲ್ಲಿರುವ ಆನಂದವನ್ನು ಮರೆಯತೊಡಗಿದ್ದೇವೆ. ಪ್ರಾಯಶಃ ನಾವು ಜನರ ಸಂಗವೆಂದರೆ ಹೆದರುತ್ತೇವೆ ಕೂಡ.

ರಂಗಭೂಮಿಯು ತಾನು ಜೀವಂತವಾಗಿ ಉಳಿಯಬೇಕಾದರೆ, ಪ್ರಜ್ಞಾಪೂರ್ವಕವಾಗಿ ದೂರದರ್ಶನದೊಂದಿಗೆ ಹೋರಾಟ ನಡೆಸುವ ಧ್ಯೇಯವನ್ನು ಹೊಂದಬೇಕಾಗಿದೆ. ಏಕೆಂದರೆ ಟೆಲಿವಿಶನ್ ನಮ್ಮೆಲ್ಲರ ಸಮುದಾಯ ಜೀವನದ ಮತ್ತು ತನ್ಮೂಲಕ ರಂಗಭೂಮಿಯ ಬೇರುಗಳನ್ನೇ ನಾಶಮಾಡುತ್ತಿದೆ. ಅದಕ್ಕೆ ಹಾಗೆ ಮಾಡಲು ಸಾಧ್ಯವಾಗುತ್ತಿರುವುದಕ್ಕೆ, ನಮ್ಮ ರಂಗಭೂಮಿಯ ದೌರ್ಬಲ್ಯ, ನೃತ್ಯ, ಸಂಗೀತ ಮುಂತಾದ ಸಾರ್ವಜನಿಕ ಮನರಂಜನಾ ಮಾಧ್ಯಮಗಳ ದುಃಸ್ಥಿತಿಯೂ ಕಾರಣ. ಆದ್ದರಿಂದಲೇ ಜನಪ್ರಿಯ ರಂಗಭೂಮಿ, ಜನಪ್ರಿಯ ನೃತ್ಯ ಮತ್ತು ಜನಪ್ರಿಯ ಸಂಗೀತ ಸಮಾರೋಹಗಳ ಅಗತ್ಯವು ಇಂದು ಅತಿ ಹೆಚ್ಚಿನ ಮಹತ್ವವನ್ನು ಪಡೆದಿದೆ ಸಾಮಾಜಿಕ ಒಗ್ಗಟ್ಟನ್ನು ಉಳಿಸಿಕೊಳ್ಳುವುದರಲ್ಲಿ ಮತ್ತು ಸಮಾಜದ ಈ ಬಗೆಯ ವಿಭಜನೆಯನ್ನು ಪ್ರತಿಭಟಿಸುವುದರಲ್ಲಿ ತಾವು ವಹಿಸಬೇಕಾದ ಪಾತ್ರವನ್ನು ರಂಗ ಕಲಾವಿದರು ಕಂಡುಕೊಳ್ಳಬೇಕಾದ ಕಾಲ ಈಗ ಬಂದಿದೆ.

ಕೆಲವು ವರ್ಷಗಳ ಹಿಂದೆ, ಒಂದು ನಿರ್ದಿಷ್ಟ ಬಗೆಯ ನಾಟಕವು ದೆಹಲಿಯಲ್ಲಿ ಅಪಾರ ಜನಪ್ರಿಯತೆ ಪಡೆದಿತ್ತು. ಅದು 'ಸಪ್ರು ರಕಮಿ'ನ ಪಂಜಾಬೀ ರಂಗಭೂಮಿ. ನಾಟಕ ಪ್ರದರ್ಶನಗಳು ತಿಂಗಳುಗಟ್ಟಲೆ ನಡೆದವು. ದಿನಕ್ಕೆರಡು ಪ್ರದರ್ಶನಗಳು. ಭಾನುವಾರಗಳಂದು ಮತ್ತು ರಜಾ ದಿನಗಳಂದು ದಿನಕ್ಕೆ ಮೂರು. ಟಿಕೆಟ್‌ಗಳು ಪ್ರದರ್ಶನಕ್ಕಿಂತ ಎಷ್ಟೋ ದಿನಗಳು ಮುಂಚಿತವಾಗಿಯೇ ಮಾರಾಟವಾಗಿ ಬಿಡುತ್ತಿದ್ದವು ಅನೇಕ ಸಲ ಅವುಗಳ ಕಾಳಸಂತೆಯೂ ನಡೆಯುತ್ತಿತ್ತು. ಆದರೆ ತನ್ನ ಗೆಲುವಿಗಾಗಿ ಈ ರಂಗಭೂಮಿ ಅವಲಂಬಿಸಿದ್ದು, ಒಡ್ಡೊಡ್ಡಾದ ಜೋಕುಗಳನ್ನು, ಅಶ್ಲೀಲ ಅಂಗಚೇಷ್ಟೆಗಳನ್ನು ದ್ವಂದ್ವಾರ್ಥ ಬರುವ ಮಾತುಗಳನ್ನು, ಲೈಂಗಿಕವಾದ ಒಳಅರ್ಥಗಳನ್ನು ಹೊಂದಿರುವ ಭಾಷೆ ಹಾಗೂ ಸನ್ನಿವೇಶಗಳನ್ನು, ಒಂಟಿಯಾದ ಗೃಹಿಣಿಯರಿಗೆ ತಮ್ಮ 'ಇಂಜೆಕ್ಷನ್' ಗಳನ್ನು ಕೊಡಲು ಕಾತರರಾಗಿರುವ ವೈದ್ಯರು, ಕೈಲಾಗದ ಗಂಡಂದಿರು ತಮ್ಮ 'ನಲ್ಲಿ' ಗಳನ್ನು ರಿಪೇರಿ ಮಾಡಲೆಂದು ಕರೆಸಿರುವ ಪ್ಲಂಬರ್‌ಗಳು ಇಂಥ ನಾಟಕಗಳ ತುಂಬ ಇರುತ್ತಿದ್ದರು. ಈ ಬಗೆಯ ನಾಟಕಗಳ ಯಶಸ್ಸಿಗೆ ಅವುಗಳ ಅಶ್ಲೀಲತೆಯೇ ಕಾರಣವೆಂದು ನಂಬಲು ನಮ್ಮಲ್ಲಿ ಬಹಳ ಜನ ಇಷ್ಟಪಡುತ್ತೇವೆ. ಆದರೆ ಇದು ಸರಿಯಲ್ಲ. ಅಷ್ಟೇ ಮುಖ್ಯವಾದ ಇನ್ನೊಂದು ಕಾರಣವೆಂದರೆ ಅಂಥ ನಾಟಕಗಳ ಹುಸಿ ವಾಸ್ತವತಾವಾದ ಹಾಗೂ ಯಾವುದೇ ಬಗೆಯ ಸಾಮಾಜಿಕತೆಯ ಸಂಪೂರ್ಣ ಅನುಪಸ್ಥಿತಿ. ಇಂಥ ರಂಗಭೂಮಿಯು ಯಾವುದೇ ನಾಚಿಕೆ, ಸಂಕೋಚಗಳೂ ಇಲ್ಲದೆ, ದಿನೇ ದಿನೇ ತನ್ನ ಪ್ರದರ್ಶನಗಳನ್ನು

ನೋಡಲು ಬರುತ್ತಿದ್ದ ಪ್ರೇಕ್ಷಕರನ್ನು ಕುರಿತೇ ಮಾತನಾಡುತ್ತಿತ್ತು. ಇಲ್ಲಿನ ಪಾತ್ರಗಳು ಪ್ರೇಕ್ಷಕರೆಲ್ಲರಿಗೂ ಪರಿಚಿತರಾದವರು. ಮಧ್ಯ ಮತ್ತು ಪಶ್ಚಿಮ ದೆಹಲಿಗಳ ಪೇಟೆ ಮೊಹಲ್ಲಾಗಳಿಂದ ಮೂಡಿ ಬಂದವರು. ಅವರು ತಮ್ಮ ಪ್ರೇಕ್ಷಕರ ಆಡುನುಡಿಯನ್ನೇ ಉಪಯೋಗಿಸುತ್ತಿದ್ದರು ಮತ್ತು ಜನರ ಮನಸ್ಸಿನಲ್ಲಿ ಇನ್ನೂ ಹಸಿರಾಗಿದ್ದ ಇತ್ತೀಚಿನ ಘಟನೆಗಳನ್ನು ಕುರಿತು ಮತ್ತೆ ಮತ್ತೆ ಪ್ರಸ್ತಾಪಿಸುತ್ತಿದ್ದರು. ಒಟ್ಟು ಅನುಭವದ ತಾಕ್ಷಣಿಕತೆಯು ನೋಡುವವರ ಮನಸ್ಸಿನಲ್ಲಿ ವಾಸ್ತವತೆಯ ಭ್ರಮೆಯನ್ನು ಹುಟ್ಟಿಸುತ್ತಿತ್ತು. ಆದರೆ ನಿಜದಲ್ಲಿ ಅದಕ್ಕೂ ವಾಸ್ತವತೆಗೂ ಮೂರು ಕಾಸಿನ ಸಂಬಂಧವೂ ಇರಲಿಲ್ಲ.

ಆದರೆ ನೋಡಿ, ದೆಹಲಿಯ ರಂಗಭೂಮಿಯು ಇಂಥದೊಂದು ಜನಪ್ರಿಯ ರಂಗಭೂಮಿಯನ್ನು ಸೃಷ್ಟಿಸುವ ಯಾವುದೇ ಪ್ರಯತ್ನವನ್ನೂ ಮಾಡಿಲ್ಲ. ಜನರನ್ನು ಒಳಗೊಳ್ಳುವಂಥ ಸಾಮರ್ಥ್ಯವಿರುವ ರಂಗಭೂಮಿಯನ್ನು ಬೆಳೆಸುವಂತಹ ಗಂಭೀರ ಪ್ರಯತ್ನವಂತೂ ದೂರವೇ ಉಳಿಯಿತು. ಅದು ಅಂಥ ಪ್ರಯತ್ನ ಮಾಡಿದರೆ ಆದರವೇ ಜನರು ಅದನ್ನು ಕೈಬಿಡುತ್ತಿರಲಿಲ್ಲವೆಂದು ನಾನು ಧೈರ್ಯವಾಗಿ ಹೇಳಬಲ್ಲೆ ಅಥವಾ ಟೆಲಿವಿಶನ್ ಸಮುದಾಯದ ಗಮನವನ್ನು ಪಡೆದುಕೊಳ್ಳುವುದರಲ್ಲಿ ಅಷ್ಟೊಂದು ಸುಲಭವಾಗಿ ಯಶಸ್ವಿಯಾಗುತ್ತಿರಲೂ ಇಲ್ಲ.

ಆದರೆ ಇವೆಲ್ಲವೂ ಊಹಾಪೋಹಗಳ ಸೀಮೆಗೆ ಸೇರಿದ ಮಾತು. ಕಣ್ಣೆದುರಿಗೆ ಧುತ್ತೆಂದು ನಿಲ್ಲುವ ಸಂಗತಿಯೆಂದರೆ ದೆಹಲಿಯ ಶ್ರೀಸಾಮಾನ್ಯರು ನಮ್ಮ ರಂಗಭೂಮಿಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದ್ದಾರೆ ಎನ್ನುವುದು. ಕೆಲವು ನಿರ್ದೇಶಕರು ಈ ಸತ್ಯದ ಬಗ್ಗೆ ಜಾಣಕುರುಡನ್ನು ತೋರಿಸುತ್ತಾರೆ. ಒಂದು ನಾಟಕವನ್ನು ಅತ್ಯಂತ ಸಮರ್ಥವಾಗಿ ರಂಗಕ್ಕೆ ತಂದರೆ, ಅದರಲ್ಲಿ ಉನ್ನತ ಕಲಾತ್ಮಕ ಮೌಲ್ಯಗಳು ಇದ್ದರೆ ಜನರು ಬಂದೇ ಬರುತ್ತಾರೆಂದು ಅವರು ಹೇಳುತ್ತಾರೆ. ದೆಹಲಿಯಲ್ಲಿ ಯಶಸ್ವಿಯಾಗಿರುವ ಕೆಲವು ನಾಟಕಗಳನ್ನು ಈ ಮಾತಿಗೆ ಸಾಕ್ಷಿಗಳೆಂದು ಹೆಸರಿಸಲಾಗುತ್ತದೆ. ಆದರೆ ಈ ವಾದವನ್ನು ಸುಳ್ಳು ಮಾಡುವ ಅಂಶವೆಂದರೆ 'ಯಶಸ್ಸು' ಅನ್ನುವ ಪದದ ವ್ಯಾಖ್ಯಾನವೇ. ಸುಮಾರು ಆರುನೂರು ಜನ ಹಿಡಿಸುವ ರಂಗಮಂದಿರದಲ್ಲಿ ಹನ್ನೆರಡು ಹೌಸಫುಲ್ ಪ್ರದರ್ಶನಗಳನ್ನು ಕಂಡ ನಾಟಕ ಯಶಸ್ವಿಯೇ? ಅಥವಾ ಇನ್ನೂರು ಜನ ಕೂರಬಹುದಾದ ನೆಲಮಾಳಿಗೆಯೊಂದರಲ್ಲಿ ಒಂದಲ್ಲ, ಎರಡಲ್ಲ, 'ರಜತಮಹೋತ್ಸವ'ವನ್ನು (೨೫ ಪ್ರದರ್ಶನಗಳು) ಆಚರಿಸಿದ ನಾಟಕವು ಘನ ಯಶಸ್ಸನ್ನು ಪಡೆಯಿತೆಂದು ಅರ್ಥವೇ? ಆದರೆ ಇವೆಲ್ಲವನ್ನೂ ಕೂಡಿದರೂ ಹತ್ತು ಸಾವಿರ ಆಗುವುದಿಲ್ಲವಲ್ಲ! ಬೇಕಾದರೆ ಇದಕ್ಕೆ ಪ್ರಿವ್ಯೂಗಳನ್ನು ನೋಡಲೆಂದು ಬಂದ ಇನ್ನೂ ಹತ್ತು ಸಾವಿರ ಆಹ್ವಾನಿತರನ್ನು ಸೇರಿಸಿ. ಆಗಲೂ ಅಬ್ಬಬ್ಬಾ ಎಂದರೆ ಇಪ್ಪತ್ತು ಸಾವಿರ ಆಯಿತು. ಆದರೆ ದೆಹಲಿಯ ಜನಸಂಖ್ಯೆ ಎಪ್ಪತ್ತು ಲಕ್ಷ. ನಾವು ಏನು ಮಾತನಾಡುತ್ತಿದ್ದೇವೆ?

ಆದ್ದರಿಂದ ನಾನು ಹೇಳುತ್ತೇನೆ, ರಂಗಭೂಮಿಗೆ ಜನರು ಬರಲು ತಯಾರಿಲ್ಲದಿದ್ದರೆ ರಂಗಭೂಮಿಯೇ ಜನರ ಹತ್ತಿರ ಹೋಗಬೇಕು. ವಾಸ್ತವವಾಗಿ ನಮ್ಮ ಪಾರಂಪರಿಕ ರಂಗಭೂಮಿಯು ಶತಮಾನಗಳಿಂದ ಮಾಡುತ್ತಾ ಬಂದಿರುವುದು ಈ ಕೆಲಸವನ್ನೇ. 'ನೌಟಂಕಿ' ಮತ್ತು 'ಜಾತ್ರಾ' ಕಂಪನಿಗಳು ಯಾವಾಗಲೂ ಸಂಚಾರದಲ್ಲೇ ನಿರತವಾಗಿರುತ್ತವೆ. ಜನರು ಗುಂಪುಗುಂಪಾಗಿ ಸೇರುವ, ಜಾತ್ರೆ, ರಥೋತ್ಸವಗಳು ನಡೆಯುವ ಸ್ಥಳಗಳಿಗೆ ಹೋಗಿ ಅಲ್ಲಿ ನಾಟಕ ಆಡುತ್ತವೆ. ಸ್ವಾಂಗೀಗಳು, ಮೆಕ್ರಾಸಿಗಳು, ಭಾಂಡರು ಇವರೆಲ್ಲಾ ಸಂಚಾರೀ ಕಲಾವಿದರೆ. ಆದರೆ ನಮ್ಮ ನಗರ ರಂಗಭೂಮಿಯು ತನ್ನ ಮಾಮೂಲು ಪ್ರೇಕ್ಷಕರಿಗೆ ಅಂಟಿಕೊಂಡಿರಲು ಇಷ್ಟಪಡುತ್ತದೆ. ಜನರೊಂದಿಗಿನ ಅದರ ಸಂಪರ್ಕದ ಕ್ಷಣಗಳೆಂದರೆ ಟಿಕೆಟ್‌ಕೌಂಟರ್‌ಗಳಲ್ಲಿ ಮತ್ತು ಪತ್ರಿಕಾ ಜಾಹೀರಾತುಗಳಲ್ಲಿ. ಬೀದಿ ರಂಗಭೂಮಿ ತಂಡಗಳನ್ನು ಬಿಟ್ಟರೆ, ಯಾವುದೇ ನಾಟಕ ತಂಡವು ಬೃಹತ್ ಪ್ರಮಾಣದ ಪ್ರೇಕ್ಷಕರನ್ನು ತಲುಪಲೆಂದು ವ್ಯವಸ್ಥಿತವಾದ ಪ್ರಯತ್ನ ಮಾಡಿರುವುದನ್ನು ನಾನಂತೂ ತಿಳಿದಿಲ್ಲ. ಅನೇಕ ವರ್ಷಗಳ ಹಿಂದೆ ತನ್ನ 'ಮದರ್' ನಾಟಕದ ಮೂಲಕ ಎಂ. ಕೆ. ರೈನಾ ಆ ಪ್ರಯತ್ನ ಮಾಡಿದರು. ಆದರೆ ಅವರೂ ಅದನ್ನು ಮುಂದುವರಿಸಲಿಲ್ಲ.

ನಮ್ಮ ಬಹುಪಾಲು ಸರ್ಕಾರೀ ಕಾಲೊನಿಗಳಲ್ಲಿ ಸಮುದಾಯ ಭವನಗಳಿವೆ. ಅಲ್ಲಿ ಪರವಾಗಿಲ್ಲ ಎನ್ನಬಹುದಾದಷ್ಟು ಒಳ್ಳೆಯ ಬಯಲು ರಂಗಮಂದಿರಗಳಿರುತ್ತವೆ. ಅಲ್ಲಿ ಇಲ್ಲದಿರುವುದೆಂದರೆ, ಬೆಳಕಿನ ವ್ಯವಸ್ಥೆ, ಪರದೆಗಳು, ಸೈಡ್‌ವಿಂಗ್‌ಗಳು ಮತ್ತು ಧ್ವನಿವರ್ಧಕಗಳು. ನಾಟಕ ಆಡಬೇಕೆಂಬ ಗಟ್ಟಿಮನಸ್ಸಿದ್ದರೆ, ಇವೆಲ್ಲವನ್ನೂ ಅಲ್ಲಿಯೇ ಕಷ್ಟಪಟ್ಟು ಹೊಂದಿಸಿಕೊಳ್ಳಬಹುದು ಅಥವಾ ಅವು ಇಲ್ಲದೆ ಕೂಡ ಹೇಗೋ ಮ್ಯಾನೇಜ್ ಮಾಡಬಹುದು. ಇಂಥ ಸ್ಥಳಗಳಲ್ಲಿ ಆಡುವ ನಾಟಕಗಳ ಸಂಪೂರ್ಣ ವೆಚ್ಚವನ್ನು ವಹಿಸುವಂತೆ ಅಥವಾ ಆಂಶಿಕವಾದ ನೆರವನ್ನು ನೀಡುವಂತೆ ದೆಹಲಿ ಆಡಳಿತದ ಮನವೊಲಿಸಬಹುದು. ದೆಹಲಿಯ ಒಟ್ಟು ಜನಸಂಖ್ಯೆಯಲ್ಲಿ ಮೂರನೆಯ ಒಂದು ಭಾಗವು ಪುನರ್ನಿರ್ವಾಸಿತರ ಕಾಲೊನಿಗಳಲ್ಲಿ ವಾಸಮಾಡುತ್ತದೆ. ಒಂದು ತಂಡವು ಅಲ್ಲಿ ಪ್ರದರ್ಶನ ನೀಡುವ ತೀರ್ಮಾನ ಮಾಡಿದರೆ ಏನಿಲ್ಲವೆಂದರೂ ಐದರಿಂದ ಹತ್ತು ಸಾವಿರ ಪ್ರೇಕ್ಷಕರನ್ನು ನಿರೀಕ್ಷಿಸಬಹುದು. ಆದರೆ ಅಂಥ ಪರಿಸರದಲ್ಲಿ ನಾಟಕವಾಡಲು ನಮ್ಮ ಕಲಾವಿದರು ಸಿದ್ಧರಾಗಿದ್ದಾರೆಯೇ? ಅರ್ಧಕ್ಕಿಂತ ಹೆಚ್ಚು ಪ್ರೇಕ್ಷಕರು ಹತ್ತಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳಾಗಿರುತ್ತಾರೆ ಮತ್ತು ಧಾಂದಲೆ ಮಾಡುತ್ತಿರುತ್ತಾರೆ. ತಮಗೆ ನಾಟಕ ಇಷ್ಟವಾದರೆ ಕೂಗುತ್ತಾರೆ, ಆಗದಿದ್ದರೆ ಛೀಮಾರಿ ಹಾಕುತ್ತಾರೆ. ನಮ್ಮ ರಂಗಕರ್ಮಿಗಳು ಅಂಥ ಪ್ರೇಕ್ಷಕರ ಬಗ್ಗೆ ಯೋಚಿಸಿಯೇ ಇಲ್ಲ ಅಥವಾ ಬಹಳ ಅಪರೂಪವಾಗಿ ಯೋಚಿಸಿದ್ದಾರೆ. ಅವರ ಮನಸ್ಸಿನಲ್ಲಿ, ತಮ್ಮ ಮೇಲು ಮಧ್ಯಮ ವರ್ಗದ ಸುಸಂಸ್ಕೃತಿಗೆ ಸ್ಪಂದಿಸದೆ ಹೋಗಬಹುದಾದ ಬೃಹತ ಪ್ರೇಕ್ಷಕ ವರ್ಗವನ್ನು ಕುರಿತಾದ, ಪ್ರಾಯಶಃ ಒಳಮನದಲ್ಲಿ ಅಡಗಿರುವ

ಹೆದರಿಕೆ ಇವೆ. ಆದರೆ ಈ ಪರಿಸ್ಥಿತಿಗೆ ಮುಖ್ಯ ಕಾರಣವೆಂದರೆ ನಾಟಕದ ಪ್ರೇಕ್ಷಕರನ್ನು ಕುರಿತ ಅವರ ಪರಿಕಲ್ಪನೆಯು ಪ್ರಜಾಸತ್ತಾತ್ಮಕವಾಗಿಲ್ಲದಿರುವುದು. ಆರೋಗ್ಯಕರವಾದ ಸಂಸ್ಕೃತಿಯಿಂದ ನೂರಕ್ಕೆ ನೂರರಷ್ಟು ವಂಚಿತರಾಗಿರುವ ಬೃಹತ್ ಜನಸಮುದಾಯವು ನಮ್ಮ ರಂಗಕಲಾವಿದರ ಪ್ರಜ್ಞೆಯ ಪದರಗಳಲ್ಲಿ ಪ್ರವೇಶವನ್ನೇ ಪಡೆದಿಲ್ಲ.

ನಮ್ಮ ರಂಗಭೂಮಿಯು ಮುಂದೆ ಮುಂದೆ ಹೆಜ್ಜೆಯಿಡುತ್ತಿರುವಂತೆ ಕಾಣುತ್ತಿಲ್ಲ. ಏಕೆಂದರೆ ಅದು ಸಂಪೂರ್ಣವಾಗಿ ಜನತೆಯಿಂದ ವಿಚ್ಛೇದನ ಹೊಂದಿದೆ. ನೀವು ಅವರನ್ನು ಎದುರಿಸಲು ತಯಾರಿರುವುದಾದರೆ, ಅವರನ್ನು ಹುಡುಕುವುದು ಏನೇನೂ ಕಷ್ಟವಿಲ್ಲ. ಅಗೋ, ಅವರು ಅಲ್ಲಿ ದೂರದ ಕಾಲೊನಿಗಳಲ್ಲಿದ್ದಾರೆ, ಪುನರ್ನಿರ್ವಸಿತರ ಬಸ್ತಿಗಳಲ್ಲಿದ್ದಾರೆ, ಕೊಳಚೆಗೇರಿಗಳಲ್ಲಿದ್ದಾರೆ ಮತ್ತು ಕಾಲೇಜುಗಳಲ್ಲಿದ್ದಾರೆ. ಅವರು ತಮ್ಮ ಮನೆಗಳಲ್ಲಿ ಟಿ.ವಿ. ಪರದೆಯ ಮೇಲೆ ಕಣ್ಣು ಕೀಲಿಸಿಕೊಂಡು ಕುಳಿತಿದ್ದಾರೆ. ಏಕೆಂದರೆ ಅವರಿಗೆ ಇನ್ನೇನೂ ನೋಡಲು ಸಿಗುವುದಿಲ್ಲ. ರಂಗಭೂಮಿಯು ಜನರ ಹತ್ತಿರ ಹೋಗಲಿ. ಅವರ ಸಂಖ್ಯೆ ಹೇಗೆ ಹೆಚ್ಚುವುದೆಂದು ಗೊತ್ತಾಗುತ್ತದೆ. ಟೆಲಿವಿಶನ್ ಜನತೆಯ ಮೇಲೆ ಹೊಂದಿರುವ ನಕಾರಾತ್ಮಕವಾದ, ಕಪಿಮುಷ್ಟಿಯ ಹಿಡಿತವನ್ನು ತಪ್ಪಿಸಲು ಅಂಥ ರಂಗಭೂಮಿಗೆ ಮಾತ್ರ ಸಾಧ್ಯವಾಗುತ್ತದೆ. ಜನತೆಯೊಂದಿಗಿನ ಈ ಜೀವಂತ ಸಂಪರ್ಕವು ರಂಗಕಲಾವಿದರ ಮುಂದೆ ಹೊಸ ಸವಾಲುಗಳನ್ನು ತಂದೊಡ್ಡುತ್ತದೆ. ಹೊಸ ವಸ್ತುಗಳನ್ನು ಆರಿಸಿಕೊಳ್ಳುವ, ಹೊಸ ರೂಪಗಳನ್ನು ಸೃಷ್ಟಿಸುವ ಮತ್ತು ನಿರೂಪಣಾ ವಿಧಾನವನ್ನು ಪರಿವರ್ತಿಸುವ ಸವಾಲು.

ಪ್ರಶ್ನೆಯೆಂದರೆ,– ನಮ್ಮ ರಂಗಕರ್ಮಿಗಳು ಈ ಸವಾಲನ್ನು ಎದುರಿಸಲು ಇಷ್ಟಪಡುತ್ತಿದ್ದಾರೆಯೇ ಎನ್ನುವುದು.



# ಜಾಹೀರಾತುಗಳು: ಭಾಷಿಕ ಸಂವಹನದ ಭ್ರಷ್ಟತೆ

**ಎಚ್. ಎಸ್. ಶ್ರೀಮತಿ**

---

ಇಂದು 'ಮಾಲಿನ್ಯ' ಎನ್ನುವ ಮಾತನ್ನು ಬಳಸದಿರುವ ಯಾವ ಕ್ಷೇತ್ರವೂ ಇಲ್ಲವೇನೋ. ಅಗೋಚರವಾದ ಬುದ್ಧಿ ಭಾವಗಳ ಮಾತು ಬಿಡಿ. ಕುಡಿಯುವ ನೀರು, ಸೇವಿಸುವ ಗಾಳಿ, ತಿನ್ನುವ ಆಹಾರ, ಕೇಳುವ ಶಬ್ದಗಳಲ್ಲೂ 'ಮಾಲಿನ್ಯ'ದ ಹಾವಳಿ. ನಮಗೆ ಸುರಕ್ಷಿತವೆನಿಸಿದ್ದನ್ನು ಮಾತ್ರ ಬಳಸಿ, ಸುರಕ್ಷಿತವಲ್ಲವೆನಿಸಿದ್ದನ್ನು ದೂರವಿಟ್ಟುಬಿಟ್ಟರೆ ಆಯಿತಲ್ಲ ಎಂದು ನಿರಾಳವಾಗುವಂತೆಯೇ ಇಲ್ಲ. ಏಕೆಂದರೆ 'ಸುರಕ್ಷಿತವಲ್ಲ'ದ ಸಂಗತಿಗಳ ಪಟ್ಟಿ ದಿನೇ ದಿನೇ ಬೆಳೆಯುತ್ತಿರುವ ವೇಗವನ್ನು ಕಂಡರೆ ಗಾಬರಿಯಾಗುತ್ತದೆ. ಮನುಷ್ಯನ ಪರಿಪೂರ್ಣ ಆರೋಗ್ಯವನ್ನು ರಕ್ಷಿಸಲೆಂದೇ ಇರುವ ವೈದ್ಯಕೀಯ ಕ್ಷೇತ್ರದ ಶೋಧಗಳಿಗೆ ದಿನನಿತ್ಯ 'ಇದು ಅಪಾಯ, ಅದು ನಿಷಿದ್ಧ', ಎಂಬಂತಹ ಪಟ್ಟಿಗಳನ್ನು ಕೊಡುವ ಕೆಲಸವೇ ಹೆಚ್ಚಾಗಿರುವಂತಿದೆಯೇ ಹೊರತು 'ಇದು ಕ್ಷೇಮ, ಇಂಥದ್ದನ್ನು ಹೇರಳವಾಗಿ ಬಳಸಬಹುದು' ಎಂಬ ಧೈರ್ಯವನ್ನು ತುಂಬಲು ಸಾಧ್ಯವೇ ಇಲ್ಲದ ಪರಿಸ್ಥಿತಿ ಇಂದು ಇದೆ. ಸದ್ಯದಲ್ಲಂತೂ ಈ ಪರಿಸ್ಥಿತಿಯಿಂದ ನಮಗೆ ರಕ್ಷಣೆ ಇರುವಂತೆ ತೋರುತ್ತಿಲ್ಲ. ರಕ್ಷಣೆಗಾಗಿ ರಚಿಸಲಾಗುವ ಕಾನೂನು ನಿಯಮಗಳಿಂದ ಏನೇನೂ ಪ್ರಯೋಜನ ದೊರೆಯದೆಂಬುದು ಖಚಿತ. ಏಕೆಂದರೆ ಕಾನೂನು ನಿಯಮಗಳಿವೆ, ಎಂದರೆ ಅವನ್ನು ಮೀರುವುದು ಎಂಬುದೂ ಇದೆ. ಕಾನೂನು ಬಿಗಿಗೊಂಡಷ್ಟೂ ಮೀರುವಿಕೆ ಅತ್ಯಂತ ನಾಜೂಕಿನ ಸ್ವರೂಪವನ್ನು ಪಡೆದೀತು ಅಷ್ಟೆ.

ಇದು 'ಮಾಲಿನ್ಯ'ದ ನೇರ ಧಾಳಿ, ಕಣ್ಣಿಗೆ ಕಾಣುವಂಥದ್ದು. ತಕ್ಷಣದ ಅನುಭವಕ್ಕೆ ಬರುವಂಥದ್ದು. ಹೀಗೆ 'ಮಲಿನ'ಗೊಳ್ಳುವ ಇನ್ನೂ ಕೆಲವು ಕ್ಷೇತ್ರಗಳಿವೆ. ಸಾಧಾರಣಕ್ಕೆ ಅಗೋಚರವೆನಿಸುವ ಬುದ್ಧಿ ಹಾಗೂ ಭಾವಗಳು ಇಂತಹ ಕ್ಷೇತ್ರಗಳು. ಇಲ್ಲಿ ಉಂಟಾಗುವ 'ಮಾಲಿನ್ಯ'ದ ಧಾಳಿಯ ಸ್ವರೂಪ ಸ್ವಲ್ಪ ಭಿನ್ನವಾದದ್ದು. ಮೇಲುನೋಟಕ್ಕೆ ಅತ್ಯಂತ ಆಕರ್ಷಣೀಯವೆನಿಸಿ, ಪರಿಣಾಮದಲ್ಲಿ ಸಮಾಜವನ್ನು ರೋಗಗ್ರಸ್ತವನ್ನಾಗಿಸುವಂಥದ್ದು. ಅದು ಬೀಸುವ ಭ್ರಾಂತಿಯ ಬಲೆಯಲ್ಲಿ ಸಿಲುಕಿ ಬಿದ್ದರೆ ಹೊರಬರಬೇಕೆಂಬ ಎಚ್ಚರವೇ ಹೋಗಿಬಿಡುತ್ತದೆ. ಬಲೆಯೇ ಆರಾಮದಾಯಕವೆನಿಸುವ ಮಟ್ಟಿನ ಅಗಾಧ ಭ್ರಾಂತಿ.

ಇಂದು ಭಾಷೆಯ ಮೇಲೆ ನಡೆಯುತ್ತಿರುವ 'ಮಾಲಿನ್ಯ'ದ ಇಂತಹ ಧಾಳಿಯನ್ನು ಮೇಲಿನ ಮಾತಿಗೆ ನಿದರ್ಶನವಾಗಿ ವಿಶ್ಲೇಷಿಸಬಹುದು. ಭಾಷೆಯ ಬಹು ಮುಖ್ಯ ಉದ್ದೇಶ ಸಂವಹನ. ದಿನನಿತ್ಯದ ಆಗುಹೋಗುಗಳಿಂದ ಹಿಡಿದು ಪ್ರಗಲ್ಭ ಚಿಂತನೆಗಳವರೆಗೆ ಭಾಷೆಯು ಅಭಿವ್ಯಕ್ತಿ ಮಾಧ್ಯಮವಾಗಬಲ್ಲುದು. ಈ ನೆಲೆಯಲ್ಲಿ ಭಾಷೆಗೆ ತನ್ನದೇ ಆದ ಮಿತಿಗಳಿವೆ ಎಂಬುದನ್ನು ಒಪ್ಪಿಯೂ, ಅದರ ಅಗಾಧ 'ಶಕ್ತಿ'ಗಳನ್ನು ನಿರಾಕರಿಸುವಂತಿಲ್ಲ.

ಈ 'ಶಕ್ತಿ'ಯ ಬಳಕೆಯ ಹಂತದಲ್ಲಿಯೇ 'ಮಾಲಿನ್ಯ'ದ ಧಾಳಿ ಆರಂಭವಾಗುತ್ತದೆ. ಯಾವ ಭಾಷೆ ಸಂವಹನ ಮಾಧ್ಯಮವಾಗಿ ಉಪಯುಕ್ತ 'ಸಾಧನ'ವಾಗಬಲ್ಲುದೋ, ಅದೇ ಭಾಷೆಯ ಮಾಧ್ಯಮವಲ್ಲೇ ಅಪಾರ್ಥದ, ಅನರ್ಥದ ಸಂಗತಿಗಳೂ ಸಂವಹನಗೊಳ್ಳುತ್ತವೆ. ಭಾಷೆ 'ಮಲಿನ'ಗೊಳ್ಳುತ್ತದೆ.

ಜಾಹೀರಾತು ಹಾಗೂ ಪ್ರಚಾರದ ಕ್ಷೇತ್ರಗಳು ಈ ಮಾತಿಗೆ ವಿಸ್ತೃತರೂಪದ ನಿದರ್ಶನವನ್ನು ಒದಗಿಸಬಲ್ಲುವು. ದ್ವಂದ್ವಾರ್ಥದ ಮಾತುಗಳ ಬಳಕೆಯನ್ನೇ ಗಮನಿಸಿ. ಅಸಹ್ಯವಾದ ಹಾಗೂ ದಾರಿ ತಪ್ಪಿಸುವ ಅರ್ಥಗಳನ್ನು 'ಶಾಣ'ವಂತೆ ಭಾಷೆ ಯನ್ನು 'ಮಲಿನ'ಗೊಳಿಸಿ ಬಳಸಿದ ಸಂದರ್ಭಗಳಲ್ಲಿ, ಜಾಹೀರಾತುದಾರರು ಅದರ ಇಡೀ ಜವಾಬ್ದಾರಿಯನ್ನು 'ಜನರ ಅಭಿರುಚಿ'ಯ ಮೇಲೆ ಹೊರಿಸಿಬಿಡುತ್ತಾರೆ. 'ಜನರಿಗೆ ನಮ್ಮ ಮಾಲು ಬೇಕೇ ಹೊರತು ಮಾತಲ್ಲ. ಅವರಿಗೆ ಬೇಡವ ಮಾಲನ್ನು ಮಾತಿನ ಆಕರ್ಷಣೆ ಯೊಡ್ಡಿ ಮಾರಲಾಗುವುದಿಲ್ಲ' ಎಂಬುದು ಅವರ ವಾದದ ಧಾಟಿ ಸರಿಯೇ. ತಮಗೆ ಬೇಡವಾದದ್ದನ್ನು ಯಾರೂ ಕೊಳ್ಳುವುದಿಲ್ಲ. ಆದರೆ ಅವರಲ್ಲಿ 'ಬೇಕು' ಎನ್ನುವ ಭಾವವನ್ನು ಬಿತ್ತಬಹುದಲ್ಲ. ಈ 'ಬಿತ್ತುವಿಕೆ'ಗಾಗಿಯೇ ಜಾಹೀರಾತುಗಳಿಗಾಗಿ ಅಷ್ಟೊಂದು ಖರ್ಚು ಮಾಡುವುದಲ್ಲವೇ? 'ಬಿತ್ತು'ವ ಈ ಕೆಲಸಕ್ಕೆ ಜಾಹೀರಾತುಗಳು ಭಾಷೆಯ ಮಾಧ್ಯಮವನ್ನು ಹೇಗೆ ದುಡಿಸಿಕೊಳ್ಳುತ್ತವೆ ಎಂಬುದರಲ್ಲೇ ಭಾಷೆಯ ಮೇಲೆ ಅತ್ಯಾಚಾರ ನಡೆಯುವ ಸಂಭವ ಇರುವುದು. ವಸ್ತುಗಳನ್ನು ಮಾರಾಟ ಮಾಡುವವರು ತಮ್ಮ ವಸ್ತುಗಳ ಮೇಲ್ಮೆಯನ್ನು ಪ್ರಚಾರ ಮಾಡುವ ಸಂಗತಿಯನ್ನೇ ನೋಡಿ. ಜಾಹೀರಾತಿನ ಮೌಲ್ಯಗಳ ಪ್ರಕಾರ ತಮ್ಮ ಮೇಲ್ಮೆಯನ್ನು ಸಾಧಿಸಲು ಬೇರೆ ಯವರದನ್ನು ತೆಗಳಬಾರದು. ಆದರೆ, ಭಾಷೆಯನ್ನು 'ಪ್ರಭಾವಯುತ'ವಾಗಿ ಬಳಸಬಲ್ಲ ಜಾಹೀರಾತು ಬಲು ಸೂಕ್ಷ್ಮವಾಗಿ ಹಾಗೂ ಅತ್ಯಂತ ಸಮರ್ಥವಾಗಿ ಈ ನಿಯಮವನ್ನು ಮೀರಬಲ್ಲುದು. ಇನ್ನು ಜಾಹೀರಾತು 'ಅಶ್ಲೀಲ'ವಾಗಿರಬಾರದೆಂಬ ನಿಯಮ ವನ್ನಂತೂ ಎಷ್ಟೊಂದು ಪರಿಯಲ್ಲಿ 'ಭಾಷೆಯ ಬಳಕೆಯಿಂದಾಗಿ' ಮೀರಬಹುದೆಂಬ ಮಾತಿಗೆ ಪ್ರತ್ಯೇಕ ನಿದರ್ಶನಗಳೇ ಬೇಕಿಲ್ಲ. ನಮ್ಮ ಸಿನಿಮಾ ಸಂಭಾಷಣೆಯೊಂದನ್ನೇ ಗಮನಿಸಿದರೂ ಸಾಕು. ಮಾತಿನ ಮೇಲೆ ನಡೆಯುವ 'ಮಾಲಿನ್ಯ'ದ ಧಾಳಿಯ ವಿರಾಟ್ ದರ್ಶನವಾಗುತ್ತದೆ.

ಭಾಷೆಯ ಮೇಲಿನ ಈ ಅತ್ಯಾಚಾರವನ್ನು ತಡೆಯುವುದು ಹೇಗೆ? ಎಲ್ಲ ಸಂವಹನ ಮಾಧ್ಯಮಗಳನ್ನೂ ಮುಚ್ಚಿಬಿಡೋಣವೇ ಎಂದರೆ ಇದು ಸಮಸ್ಯೆಯ ಪರಿಹಾರಕ್ಕೆ ಇರುವ ದಾರಿಯಲ್ಲ ಎಂಬುದು ಯಾರಿಗೇ ಆದರೂ ತಿಳಿಯುವ ಮಾತು. ಹೋಗಲಿ, ಸಮಾಜದ ಹಿತದೃಷ್ಟಿಯಿಂದಲಾದರೂ ಹೀಗೆ 'ಸಂವಹನಗೊಳ್ಳಬೇಕಾದ ಸಂಗತಿಗಳ' ಬಗ್ಗೆ ನಿಯಂತ್ರಣ ವನ್ನು ಹೇರಲಾದೀತೇ? ಯಾವ ಸಂವಹನ ಮಾಧ್ಯಮವೂ ಇದನ್ನು ಒಪ್ಪುವುದಿಲ್ಲ. ಇವರೂ ಸಹ ಜಾಹೀರಾತುದಾರರಂತೆಯೇ. 'ಭಾಷಾ ಮಾಲಿನ್ಯ'ದ ಸಂಗತಿಯನ್ನು ತಮ್ಮ ವ್ಯಾವಹಾರಿಕ ಲಾಭಕ್ಕೆ ಬಳಸಬಹುದಾದ ಅವಕಾಶವನ್ನು ಅವರೇಕೆ ಬಿಟ್ಟುಕೊಟ್ಟಾರು?

ಪತ್ರಿಕೆಗಳು, ಫೋಟೋಗಳು, ಚಿತ್ರಗಳು, ರೇಡಿಯೋ ಹಾಗೂ ಪುಸ್ತಕಗಳಲ್ಲಿ ಕೇವಲ ಮುದ್ರಣ ರೂಪದಲ್ಲಿ ಭಾಷೆಯು ಬಳಕೆಯಾಗುತ್ತಿದ್ದಾಗಲೇ ಭಾಷೆಯ ಮೇಲಿನ ಈ ಧಾಳಿಗೆ ನಿಯಂತ್ರಣವಿರಲಿಲ್ಲ. ಸಿನಿಮಾಗಳ ಸಂಭಾಷಣೆಗಳಲ್ಲಿ ಇದು ಇನ್ನಷ್ಟು ಹೆಚ್ಚಿ, ದೂರದರ್ಶನ ಪೆಟ್ಟಿಗೆಗಳಿಂದ ಮನೆಗಳು ಅಲಂಕೃತವಾಗುವ ಹೊತ್ತಿಗೆ ಆ ಬಗೆಗಿನ ನಮ್ಮ ಆಯ್ಕೆಯ ಅವಕಾಶವನ್ನು ಸಹ ಕಸಿದುಕೊಳ್ಳಲಾಗಿದೆ. ದೂರದರ್ಶನದ ಪ್ರಸಾರಗಳ ಮೇಲೆ ಸರ್ಕಾರದ ಏಕಸ್ವಾಮ್ಯವಿದ್ದಾಗಿನ ಪರಿಸ್ಥಿತಿ ಹಾಗೂ ದಿನಕಳೆದಂತೆ ಹತ್ತು ಹಲವು ಸಂಸ್ಥೆಗಳು ವಿವಿಧ ಛಾನೆಲ್‌ಗಳ ಮೂಲಕ ಅದರ ಮೇಲೆ ಸ್ವಾಮ್ಯವನ್ನು ಸ್ಥಾಪಿಸುತ್ತಿರುವ ಪರಿಸ್ಥಿತಿಯ ಬೆಳವಣಿಗೆಯನ್ನು ನೋಡಿದರೆ ಭಾಷೆಯ ಮೇಲಿನ ಮಾಲಿನ್ಯದ ಧಾಳಿಯು ಭಯಾನಕವಾಗಿರುವುದು ಕಂಡು ಬರುತ್ತದೆ. ದೃಶ್ಯ ಮಾಧ್ಯಮವು ಎಷ್ಟೊಂದು ಪರಿಣಾಮಕಾರಿಯಾಗಬಲ್ಲುದು ಎಂಬುದು ಒಳ್ಳೆಯದಕ್ಕೆ ಎಷ್ಟು ಸತ್ಯವೋ, ಕೆಟ್ಟದಕ್ಕೂ ಅಷ್ಟೇ ಸತ್ಯ. ಇಲ್ಲಿ ದೃಶ್ಯಗಳಿಂದಾಗಿ ಪರಿಣಾಮವಲ್ಲವೆ? ಇದರಿಂದ ಭಾಷೆಯ ಮೇಲೆ ಹೇಗೆ ಧಾಳಿ ಮಾಡಿದಂತಾಯಿತು? ಎನ್ನುವಂತಿಲ್ಲ. 'ಮಲಿನ'ವಾದ ಭಾಷೆ ಹೇಳಿದಾಗ,ಓದಿದಾಗ ಬೀರುವ ಪರಿಣಾಮಕ್ಕಿಂತ ಪ್ರಬಲವಾದ 'ದೃಶ್ಯಗಳ' ಹಿನ್ನೆಲೆಯಲ್ಲಿ ಬೀರುವ ಪರಿಣಾಮದ ಅಗಾಧತೆಯನ್ನು ಊಹಿಸಲೂ ಸಾಧ್ಯವಿಲ್ಲ. ಕೇಳಿದಾಗ, ಓದಿದಾಗ ಅತ್ಯಂತ ಸಾಧಾರಣ ವೆನಿಸುವ ನೋಡು, ಕೇಳು, ನೂಕು, ಹಿಡಿ ಎಂಬಂತಹ ಕ್ರಿಯಾಪದಗಳು ಸಹ,'ದೃಶ್ಯ'ಗಳ ಹಿನ್ನೆಲೆಯಲ್ಲಿ ಹೇಗೆ ಬೇಕಾದರೂ 'ಮಲಿನ'ಗೊಳ್ಳುವುದು ಸಾಧ್ಯ. ಜಾಹೀರಾತುದಾರರೂ ಎಲ್ಲ ಮಾಧ್ಯಮಗಳಿಗಿಂತ ದೂರದರ್ಶನವನ್ನು ಅತ್ಯಂತ ಹೆಚ್ಚಿಗೆ ನಂಬಿ ಹಣ ಸುರಿಯುತ್ತಿರುವುದೇ ಇದಕ್ಕೆ ಸಾಕ್ಷಿ.

ಇದು ಸಂವಹನ ಮಾಧ್ಯಮವು ಜನತೆಯ ಮೇಲೆ ಮಾಡುತ್ತಿರುವ ಅತ್ಯಾಚಾರ. ಭಾಷೆಯ 'ಶಕ್ತಿ'ಯನ್ನೇ ಇಲ್ಲಿ ಮಾರಕ 'ಸಾಧನ'ವಾಗಿ ಬಳಸಲಾಗುತ್ತಿದೆ. ಇದರಿಂದ ಜನತೆಯನ್ನು ರಕ್ಷಿಸುವುದು ಹೇಗೆ? ಜನತೆಯ ಮುಂದೆ ನಿಂತವರು ಯಾರೇ ಇರಲಿ, ಅವರು ಜನರೊಂದಿಗೆ ಮಾತನಾಡುವಾಗ ಅವರ ಮನಸ್ಸಿನಲ್ಲಿರುವುದನ್ನು 'ಸರಿಯಾಗಿ' 'ಸಂಪೂರ್ಣವಾಗಿ' ಹಾಗೂ 'ನಿಖರವಾಗಿ'ಯೇ ಹೇಳಬೇಕು ಎಂಬುದು ಒಪ್ಪಬೇಕಾದ ಮೌಲ್ಯ. ಭಾಷೆಯನ್ನು 'ಬಳಸಬೇಕಾಗಿರುವುದು' ಈ ಉದ್ದೇಶಕ್ಕಾಗಿಯೇ. ಜಾಹೀರಾತು ದಾರರನ್ನು ಕೇಳಿ. ಯಾರೂ ಸ್ಪಷ್ಟವಾಗಿ ಈ ನೈತಿಕ ಅಂಶವನ್ನು ಅಲ್ಲಗಳೆಯುವದಿಲ್ಲ. ಆದರೂ 'ಲಕ್ಷಾಂತರ ರೂಪಾಯಿ'ಗಳನ್ನು ಸುರಿದು ನಡೆಸುವ ನಮ್ಮ ವ್ಯವಹಾರದಲ್ಲಿ ಈ 'ಸುಳ್ಳುಗಳೇ' ನಮ್ಮನ್ನು ಕಾಯುತ್ತವೆ ಎಂಬುದು ನಾವು ಕಂಡ ವಾಸ್ತವ ಸತ್ಯ. ಏನೇ ಆದರೂ ಈ ನಮ್ಮ ಸುಳ್ಳುಗಳಿಂದ ರಾಷ್ಟ್ರನೀತಿಗಾಗಲೀ, ಮೌಲ್ಯಗಳಿಗಾಗಲೀ, ಮಕ್ಕಳಿಗಾಗಲೀ ಅಥವಾ ವಯಸ್ಕರಿಗಾಗಲೀ 'ಹಾನಿ'ಯಾಗುತ್ತದೆನ್ನುವುದನ್ನು ಒಪ್ಪಲಾಗದು ಎಂದೇ ಹೇಳುತ್ತಾರೆ. ಇದಕ್ಕೆ ಸೂಕ್ತವಾದ ಉತ್ತರವನ್ನೇನೋ ಕೊಡಬಹುದು. ಆದರೆ ಜಾಹೀರಾತುದಾರರಿಗೆ ಇದು ನುಂಗಲಾರದ ತುತ್ತು. ಅಂದರೆ, ಅವರು ನಂಬಿದ್ದನ್ನು ನಡೆಸಲಾರದವರು. ಜಾಹೀರಾತು ಉದ್ಯಮ ಅತ್ಯಂತ ಅಭದ್ರ

ಉದ್ಯಮವೆನಿಸಲು ಸಹ ಇದೇ ಕಾರಣ. ಜಾಹೀರಾತುದಾರನ 'ಪ್ರಜ್ಞೆ' ಎಂಬುದೇ ಒಂದು 'ದ್ವಂದ್ವ'.

ಇದಕ್ಕೆ ರಾಜಕೀಯದ ಹಾದಿಯಿಂದಲೇ ಪರಿಹಾರವನ್ನು ಒದಗಿಸಬೇಕೆಂಬುದು ನಿಜವಾದರೂ, ಈ ಹಾದಿಯ ಸ್ವರೂಪ ಮಾತ್ರ ಭಾಷಿಕವಾದದ್ದು. ಮಾಧ್ಯಮಗಳ ಮೂಲಕ ಬಳಕೆಯಾಗುವ ಭಾಷೆಯ ರೂಪ ನಿಷ್ಕೃಷ್ಟ ಪರೀಕ್ಷೆಗೆ ಒಳಪಟ್ಟುಬರಬೇಕೆಂಬುದು ಮೇಲುನೋಟಕ್ಕೆ ಒಪ್ಪಿತವಾಗಿರುವ ನಿಯಮ. ಆದರೆ ಈ ನಿಯಮವು ಅನ್ವಯವಾಗುವ ಕೆಲವು ಸಂದರ್ಭಗಳನ್ನು ಪರಿಶೀಲಿಸಿದರೂ ಸಾಕು. 'ಅನ್ವಯ' ಮಾಡುವವರ ಯೋಗ್ಯತೆಯನ್ನು ಅವಲಂಬಿಸಿ ಇದು ಹಾಸ್ಯಾಸ್ಪದವಾಗುವ ಸಂಭವಗಳನ್ನು ಅಲ್ಲಗಳೆಯಲಾಗುವುದಿಲ್ಲ. ಇದಕ್ಕೆ ನಮ್ಮ 'ಸೆನ್ಸಾರ್' ಮಂಡಲಿಗಳ ಕಾರ್ಯವೈಖರಿಯನ್ನು ನಿದರ್ಶನವಾಗಿ ಕೊಡಬಹುದು. ನಿಜವಾದ ಅರ್ಥದಲ್ಲಿ 'ಭಾಷಿಕ' ನೆಲೆಗಳ ಪರಿಚಯವಿಲ್ಲದವರು ಈ ಮಂಡಲಿಯಲ್ಲಿದ್ದರೆ, ಅವರ ಪಟ್ಟಿಯಲ್ಲಿರುವಂತೆ 'ಭಾಷೆ'ಯನ್ನು ಪರೀಕ್ಷಿಸಿ ಅನುಮೋದನೆ ಕೊಟ್ಟಾರು. ಪರಿಣಾಮದಲ್ಲಿ ಈ ಮೊದಲೇ ಅಲ್ಲಿ ಭಾಷೆಯ ಮೇಲೆ ನಡೆದ ಅತ್ಯಾಚಾರಕ್ಕೆ ಇವರು ಕಾನೂನುಬದ್ಧವಾದ ಸಮ್ಮತಿಯನ್ನು ಕೊಟ್ಟಿರುತ್ತಾರೆ.

ಹೀಗಿದ್ದರೂ, ಈ ಸಂಕೀರ್ಣ ಸಮಸ್ಯೆಯನ್ನು ಎದುರಿಸಲು ತಕ್ಕಷ್ಟುಮಟ್ಟಿನ ಸಿದ್ಧತೆಯನ್ನಾದರೂ ಮಾಡಲೇಬೇಕು. ಅಂತಹ ಒಂದು ಚೌಕಟ್ಟಿಗೆ ಒಳಪಡಬಹುದಾದಂತೆ ನಾಲ್ಕು ಸೂಚನೆಗಳನ್ನು ಇಲ್ಲಿ ಕೊಡಬಹುದು.

ಮೊದಲನೆಯದಾಗಿ, ನೀಡುವ ಸಂದೇಶ ಸ್ಪಷ್ಟವಾಗಿರಬೇಕು. ಈ ಮಾತಿಗೆ ಜಾಹೀರಾತುದಾರನೂ ಅಲ್ಲವೆನ್ನಲಾರ. ಹಾಗೆ ನೋಡಿದರೆ ನೀಡಬೇಕಾದ ಸಂದೇಶದ ಉದ್ದೇಶದಲ್ಲಿ ಡೊಂಕು ಇಲ್ಲವಾದರೆ, ಭಾಷೆಯಲ್ಲಿ ಸ್ಪಷ್ಟತೆ ಬೇಕೆಂಬ ಕಾರಣಕ್ಕಾಗಿ ಅಲ್ಲಿನ ಶೈಲಿಗಾಗಲೀ, ಹಾಸ್ಯ ಪ್ರಜ್ಞೆಗಾಗಲೀ ಕುಂದು ಬರಬೇಕಾದ ಅವಶ್ಯಕತೆ ಇಲ್ಲ. ಬದಲಿಗೆ ಇವು ಸ್ಪಷ್ಟತೆಯ ಗುಣಕ್ಕೆ ಪೂರಕವೇ ಆಗಿರುತ್ತವೆ. ವ್ಯಂಗ್ಯಾರ್ಥ, ದ್ವಂದ್ವಾರ್ಥಗಳನ್ನು ಬಳಸಿಯೂ ಗ್ರಾಹಕನೊಂದಿಗೆ ನಿಷ್ಠೆಯನ್ನು ಉಳಿಸಿಕೊಳ್ಳಬಹುದು. ಜನರನ್ನು ದಿಕ್ಕು ತಪ್ಪಿಸುವ ಭಾಷೆಯನ್ನು ಬಳಸದಿದ್ದರೆ ಆಯಿತು.

ಎರಡನೆಯದಾಗಿ, ಸಂದೇಶವು ತಾನು ಏನು ಹೇಳಬೇಕೆಂಬುದರ ಬಗ್ಗೆ ಖಚಿತವಾಗಿರಬೇಕೇ ಹೊರತು ಸಂದೇಶವನ್ನು ಯಾರು ಹೇಳಬೇಕೆಂಬುದರ ಬಗ್ಗೆ ಅಲ್ಲ. ಸಂದೇಶವು ಮುಖ್ಯವೇ ಹೊರತು ಸಂದೇಶದ ಮೂಲವಲ್ಲ. ಈ ಬಗ್ಗೆ ಜಾಹೀರಾತುದಾರನು ನಿಷ್ಠೆಯನ್ನು ತೋರಬೇಕು.

ಮೂರನೆಯದಾಗಿ, ತನ್ನನ್ನು ನಿರೂಪಿಸಿಕೊಳ್ಳುವಾಗ ಬೇರೆಯ ಪಕ್ಷವನ್ನು ಅದು ಮಧ್ಯಕ್ಕೆ ತರುವುದು ಬೇಡ. ಅದರಲ್ಲೂ ಸಲ್ಲದ ಸಂಗತಿಗಳನ್ನು ಎತ್ತಿ ತೋರಿ ಒಪ್ಪಿಸುವ ದೃಷ್ಟಿಯಿಂದಂತೂ ಅಲ್ಲವೇ ಅಲ್ಲ. ಭಾಷೆಯ ಬಳಕೆಯ ಅರ್ಥಕ್ಕೆ ಏನೆಲ್ಲ ತಿರುವುಗಳನ್ನು

ಕೊಡಬಲ್ಲುದು ಎಂಬ ಅನುಭವ ಬರುವುದು ಇಲ್ಲಿಯೇ. ಸಂಗತಿಗಳನ್ನು ಅವು ಇರುವಂತೆ ತೋರುವ ಬದಲು, ಭಾಷಿಕ ತನಗೆ ಬೇಕಾದಂತೆ ಅವು ತೋರಿಬರುವ ರೀತಿಗಾಗಿ ಭಾಷೆಯನ್ನು ದುಡಿಸಿದರೆ ಅದು ಭಾಷೆಯ ಮೇಲಿನ ದೌರ್ಜನ್ಯವೇ ಸರಿ. ಒಬ್ಬ ಜಾಹೀರಾತುದಾರನು ಒಂದು ಉತ್ಪಾದನೆಗೆ ಕೊಟ್ಟ ಒಂದು ಹೆಸರಿನೊಂದಿಗೆ ಸೇರಿಸುವ ವಿಶೇಷಣಗಳಿಂದಾಗಿ ಆ ಉತ್ಪಾದನೆಗಿಂತ ಅಲ್ಲಿ ಬಳಸಿದ ವಿಶೇಷಣಗಳೇ ಮುಖ್ಯವೆನಿಸಿ ಉತ್ಪಾದನೆಯ ಸತ್ಯಕ್ಕಿಂತ ಹೆಸರಿನ ಸತ್ಯವೇ ವಾಸ್ತವವಾಗಿ ಬಿಡಬಹುದು. ಇಂತಹ ಅನೇಕ ಜಾಹೀರಾತುಗಳನ್ನು ಉದಾಹರಿಸಬಹುದು. ವಿಧವಿಧದ ಸಾಬೂನುಗಳು ಮಾರುಕಟ್ಟೆಗೆ ಬಂದವೆನ್ನಿ, ಮೂಲಭೂತವಾಗಿ ಈ ಸಾಬೂನುಗಳಲ್ಲಿ ಇರಬಹುದಾದ ವ್ಯತ್ಯಾಸಗಳು ಅಷ್ಟರಲ್ಲಿಯೇ ಇವೆ. ಕಾಸಿಗೆ ತಕ್ಕಂತೆ, ಒಂದಿಷ್ಟು ಸುಗಂಧ ಪರಿಮಳಗಳಲ್ಲಿ ಹೆಚ್ಚೂ ಕಡಿಮೆ ಇರಬಹುದು. ಆದರೆ, ಈ ಸಾಬೂನುಗಳಲ್ಲಿ ಗ್ರಾಹಕನು ತನ್ನ ಆಯ್ಕೆಯನ್ನು ಹೇಗೆ ಮಾಡುತ್ತಾನೆ? ಆಯಾ ಸಾಬೂನಿನಲ್ಲಿರಬಹುದಾದ ವಾಸ್ತವ ಸಂಗತಿಗಳಿಂದಲೋ ಅಥವಾ ಜಾಹೀರಾತಿನ ಚಮತ್ಕಾರದಿಂದಲೋ? ಬಹುಮಟ್ಟಿಗೆ ಎರಡನೆಯದೇ ನಿಜ. ಉತ್ಪಾದನೆಯ ವಸ್ತು ಒಂದೇ ಇದ್ದು, ತಯಾರಕರು ಅನೇಕ ಸಂಖ್ಯೆಯಲ್ಲಿದ್ದಾಗ ತಯಾರಕರು ಮಾರುಕಟ್ಟೆಯನ್ನು ಗೆಲ್ಲುವುದು ಜಾಹೀರಾತಿನಿಂದಲೇ ಎಂಬುದನ್ನು ನಾವಿಂದು ಅಲ್ಲಗಳೆಯುವಂತೆಯೇ ಇಲ್ಲ. ಇಲ್ಲಿ ಭಾಷೆಯನ್ನು, 'ಇರುವುದನ್ನು' ಸಂವಹನ ಮಾಡಲು ಬಳಸುತ್ತಿರುವುದಕ್ಕಿಂತ 'ಇಲ್ಲದ್ದನ್ನು' 'ಇದೆ' ಎಂಬಂತೆ ಆಭಾಸ ಉಂಟುಮಾಡಲು ಬಳಸಲಾಗುತ್ತಿದೆ. ಸಿಗರೇಟು, ಮಾದಕ ಪಾನೀಯಗಳಂತಹ ಉತ್ಪಾದನೆಗಳಿಗೂ ಭಾಷೆಯನ್ನು ಬಳಸಿ ಪ್ರಚಾರ ಕೊಡುತ್ತಿರುವುದನ್ನೇ ನೋಡಿ ಇವುಗಳ ಸೇವನೆ ಜನರ ಆರೋಗ್ಯಕ್ಕೆ ಹಾನಿಕರ ಎಂಬ ತಿಳುವಳಿಕೆಯನ್ನು ಮೂಡಿಸಲು ಯಾವ ಭಾಷೆಯನ್ನು ಬಳಸಲಾಗುತ್ತಿದೆಯೋ ಅದೇ ಭಾಷೆಯ ಅಪಬಳಕೆಯನ್ನು ಮಾಡಿ ಇವುಗಳು ಜೀವನಾನಂದದ ಸಾಧನಗಳೆಂಬುದನ್ನು ಸಾರಬಹುದು. ಮೇಲುನೋಟಕ್ಕೆ ಕಾನೂನನ್ನು ಹೇರಿ 'ಸಿಗರೇಟಿನ ಸೇವನೆ ಆರೋಗ್ಯಕ್ಕೆ ಹಾನಿಕರ ಎಂಬ ಮಾತನ್ನು ಸೇರಿಸುವಂತೆ ಮಾಡಲಾಯಿತೆನ್ನಿ. ಅದನ್ನು ಸೇರಿಸಿದ ನಂತರದಲ್ಲೂ 'ನಮ್ಮ ಬ್ರಾಂಡ್‌ನ ಸಿಗರೇಟಿನಲ್ಲಿ ಹಾನಿಕರ ಅಂಶವನ್ನು ತಡೆಯಲಾಗಿದೆ' ಎಂಬ ಮಾತನ್ನು ಜಾಹೀರಾತಿನಲ್ಲಿ ಸೇರಿಸಬಹುದು. ಉದಾಹರಣೆಗೆ: 'ಫಿಲ್ಟರ್ಡ್ ಟಿಪ್' ಅಂತಲೋ, ಮಹಿಳೆಯರೂ ಸೇದಬಹುದಾದಷ್ಟು 'ಮೈಲ್ಡ್' ಅಂತಲೋ ಹೇಳಿ, ಸಿಗರೇಟು ವಾಸ್ತವವಾಗಿ ಮಾಡುವ ಹಾನಿಯ ಅಂಶವನ್ನು ಮುಚ್ಚಿ ಹಾಕುವುದನ್ನು ಭಾಷೆಯ ಮೇಲಿನ ಅತ್ಯಾಚಾರವೆನ್ನದೆ ಏನೆಂದು ವಿವರಿಸಬಹುದು? 'ಇಂಥ ಬ್ರಾಂಡ್‌ನ ಬಿಯರ್ ಜೀವನ ಘನತೆಯ ಕುರುಹು' ಎಂಬಂತಹ ಜಾಹೀರಾತುಗಳನ್ನು ಸಹ ಇಲ್ಲಿ ನೆನಪಿಸಿಕೊಳ್ಳಬಹುದು. ಈ ಜಾಹೀರಾತುಗಳು ಮುಖ್ಯವಾಗಿ ಅಲ್ಲಿ ಬಳಕೆಯಾಗುವ ಭಾಷೆಯಿಂದಾಗಿಯೇ, ಜನತೆಯನ್ನು ಎಷ್ಟು ದಾರಿ ತಪ್ಪಿಸಬಹುದು ಎಂಬುದು ಇಲ್ಲಿ ಗಮನಿಸಬೇಕಾದ ಸಂಗತಿ.

ನಾಲ್ಕನೆಯದಾಗಿ, ದೇವರು ಹಾಗೂ ಧರ್ಮಗಳ ಪ್ರಸ್ತಾಪವನ್ನು ಮಾಡಿ, ತಮ್ಮನ್ನು ಮತ್ತೆ ಪ್ರಶ್ನಿಸಲಾಗದಂತೆ ಭಾಷೆಯನ್ನು ಬಳಸುವ ವಿಧಾನವನ್ನು ಗಮನಿಸೋಣ. ವ್ಯಕ್ತಿಗತ ಸಮಸ್ಯೆಗಳನ್ನು ವಸ್ತುವಾಗಿ ಉಳ್ಳ ಕಥೆ ಅಥವಾ ಅಂತಹ ಇತರ ಮನರಂಜನಾ ಕಾರ್ಯಕ್ರಮಗಳಲ್ಲಿ ತಮ್ಮ ಕಾರ್ಯಕ್ರಮಗಳ ಪ್ರಾಯೋಜಕರಿಗಾಗಲೀ, ಸರ್ಕಾರಕ್ಕಾಗಲೀ ವಿರೋಧವೆನಿಸಬಹುದಾದ ಅಂಶಗಳು ಇಲ್ಲದಿರಬಹುದು. ಕ್ರೀಡೆಗಳನ್ನು ವರದಿ ಮಾಡುವಾಗಲೂ ಸ್ವಲ್ಪಮಟ್ಟಿಗೆ ಇದು ನಿಜವಿರಬಹುದು. ಆದರೆ, ಒಂದು ವರ್ಗ ಅಥವಾ ಒಂದು ವ್ಯವಸ್ಥೆಯನ್ನು ಕುರಿತು ಹೇಳುವ ಜಾಹೀರಾತುಗಳಲ್ಲಿ ಭಾಷೆಯ ಬಳಕೆ ಯಾವ ಯಾವ ರೂಪಗಳನ್ನು ಪಡೆಯಬಲ್ಲುದೆಂಬುದನ್ನು ಗಮನಿಸಬಹುದು. ಇಲ್ಲಿ ವಾಸ್ತವಗಳನ್ನು ಅವು ಇರುವಂತೆಯೇ, ನಿರೂಪಿಸಲು ಸಾಧ್ಯವೇ ಇಲ್ಲವೇನೋ ಎಂಬ ಸಂದಿಗ್ಧ ಭಾಷೆಗೆ ಉಂಟಾಗುತ್ತದೆ. ವಾಸ್ತವ ಹಾಗೂ 'ವ್ಯವಹಾರ'ಗಳನ್ನು ಸರಿತೂಗಿಸಿ ನಡೆಸುವಾಗ 'ವ್ಯವಹಾರ'ವೇ ಇಡೀ ಪರಿಸ್ಥಿತಿಯ ಮೇಲೆ ನಿಯಂತ್ರಣವನ್ನು ಪಡೆದುಬಿಡುತ್ತದೆ ಎಂಬ ಅಂಶಕ್ಕೆ ನಿದರ್ಶನಗಳನ್ನು ಹುಡುಕಲು ವಿಶೇಷವಾದ ಶ್ರಮವನ್ನೇನೂ ಪಡಬೇಕಾಗಿಲ್ಲ. ರಾಜಕೀಯ, ಆರ್ಥಿಕ, ಸಾಮಾಜಿಕ ರಂಗಗಳಲ್ಲಿನ ವಾಸ್ತವದ ವರದಿಗಳನ್ನು ನಿರೂಪಿಸುವಾಗ, 'ವ್ಯವಹಾರ'ವು ಮೇಲುಗೈ ಪಡೆಯಲು ಮುಖ್ಯ ಕಾರಣ ಭಾಷೆಯ ಬಳಕೆಯೇ ಆಗಿರುತ್ತದೆ ಎಂಬುದನ್ನು ಇಲ್ಲಿ ಗಮನಿಸಬೇಕು.

ಸಂದೇಶಗಳನ್ನು ನೇರವಾಗಿ ತಲುಪಿಸಬೇಕೆನ್ನುವುದು ಸರಳ ಸಂಗತಿಯಲ್ಲ. ಅತ್ಯಂತ ನಿಷ್ಠವಾದ ಇಚ್ಛೆ ಹಾಗೂ ಅತ್ಯಂತ ಜಾಗರೂಕತೆಯಿಂದ ಆಯ್ದ ಪದಗಳು ಕೂಡಿಯೂ ಸಹ ವಾಸ್ತವದ ಚಿತ್ರಣವನ್ನು ಮಾಡದೆ ಇರಬಹುದು. ಏಕೆಂದರೆ, ಭಾಷೆಗೆ ಈ ಬಗೆಯ ಮಿತಿಗಳನ್ನು ಹಾಕುವುದು ಸಾಧ್ಯವಿಲ್ಲ. ಎಲ್ಲ ಮಿತಿಗಳನ್ನೂ ಭಾಷೆಯು ಮೀರಿ ನಡೆಯುತ್ತದೆ. ಅದು ನಮ್ಮೆದುರು ಚಿತ್ರಿಸುವೆನ್ನುವ ವಾಸ್ತವಗಳೂ ಎಷ್ಟೋ ಸಂಗತಿಗಳ ಮಂಜು ಕವಿದ ನಮ್ಮ ನೋಟಗಳ ಮುಂದೆಯೇ ಹಾದುಹೋಗಬೇಕಲ್ಲ. 'ಅರ್ಧ ಸತ್ಯ'ವನ್ನು ನುಡಿಯುವುದು 'ಅರ್ಧಂಬರ್ಧ ಸತ್ಯ'ವನ್ನು ನುಡಿಯುವುದಕ್ಕಿಂತ ಭಿನ್ನವೇನಲ್ಲ.

ಇಂತಿಂಥ ಸಂದರ್ಭಗಳಲ್ಲಿ ಹೀಗೆ ಹೀಗೆ ಜಾಗರೂಕರಾಗಿರಬೇಕೆಂದು ಹೇಳಿದ್ದೇನೋ ಆಯಿತು. ಆದರೆ ಈ ಜಾಗರೂಕತೆಗಳೆಲ್ಲ ಕೆಲವು ನಿರ್ದಿಷ್ಟ ಪರಿಸರ ನಿರ್ಮಾಣವನ್ನು ಬೇಡುತ್ತವೆ. ಉದಾಹರಣೆಗೆ 'ಸಂದೇಶಗಳು ಅವು ಇರುವಂತೆಯೇ ನಿರಾತಂಕವಾಗಿ ಹರಿಯಲು ಸಾಧ್ಯವಾಗುವಂತೆ ಭಾಷೆಯ ಬಳಕೆಯಾಗಬೇಕು' ಎಂದಾಗ ಭಾಷೆಯನ್ನು ಕುರಿತು ಚರ್ಚಿಸಲು ನಮಗೆ ಮುಕ್ತ ಅವಕಾಶವಿರಬೇಕಲ್ಲ. ವಿದ್ಯುತ್ ಹರಿಯುವ ತಂತಿಯನ್ನುಳ್ಳ ಸ್ವಿಚ್ಚಿನಲ್ಲಿ ವಿದ್ಯುತ್ತಿನ ಅಪಾಯವನ್ನೆದುರಿಸುವ ಮರದ ಚೌಕಟ್ಟು ಬೇಕು. ಹೀಗೆ ಒಂದು ಸುರಕ್ಷಿತ ನೆಲೆಯಲ್ಲಿ ನಿಂತು ಭಾಷೆಯ ಅಗ್ನಿಯನ್ನು ಬಳಸಬಹುದು. ಕೋರ್ಟ್ ವ್ಯವಹಾರ, ಜಾಹೀರಾತುಗಳಂತಹ ಸಂಘ ಸಂಸ್ಥೆಗಳ ಕಾರ್ಯವನ್ನಷ್ಟೇ

ಪ್ರಶ್ನಿಸಿದರೆ ಸಾಲದು, ಅಲ್ಲಿ ಬಳಸಿದ ಭಾಷೆ ಹಾಗೂ ಆ ಭಾಷೆಯನ್ನು ಬಳಸುವ ರೀತಿಗಳನ್ನು ಸಹ ಪ್ರಶ್ನಿಸುವ ಅವಕಾಶವಿರಬೇಕು. ಭಾಷೆಯು ಯಾರೊಬ್ಬರ ವೈಯಕ್ತಿಕ ಪ್ರಾಧಿಕಾರಕ್ಕೆ ಒಳಪಟ್ಟಿದ್ದಲ್ಲ. ಹೀಗಾಗಿ, ಇಲ್ಲಿ ನನಗೆ ಪ್ರವೇಶವಿದೆಯೋ ಇಲ್ಲವೋ ಎಂಬ ಸಂದೇಹ ಯಾರನ್ನೂ ಕಾಡಬೇಕಾಗಿಲ್ಲ. ಯಾವುದೋ ಒಂದು ಬಡಪ್ರಾಣಿಯ ಬೇಟೆಯ ಉದ್ದೇಶದಿಂದ ಪ್ರಯೋಗವಾಗುವ ಅಪಶಬ್ದ, ದ್ವಂದ್ವಾರ್ಥದ ವಾಕ್ಯ ಇಂತಹವುಗಳನ್ನು ಗುರುತಿಸಿ ತೋರಬೇಕಾದಾಗ ಯಾರೂ ನಾಚಬೇಕಾಗಿಲ್ಲ. ಸಾರ್ವಜನಿಕ ವ್ಯಕ್ತಿಗಳ ಆಸ್ತಿ ಪಾಸ್ತಿಗಳ ತನಿಖೆ ನಡೆಯಬೇಕು ಎಂಬಷ್ಟೇ ಸಹಜವಾಗಿ ಅವರ ಭಾಷಾ ಬಳಕೆಯ ತನಿಖೆಯೂ ನಡೆಯಬೇಕು. ಏಕೆಂದರೆ, ಈ ಎರಡು ಸಂದರ್ಭಗಳಲ್ಲೂ ಸಾರ್ವಜನಿಕರ ಸೊತ್ತೆನಿಸಿದ ಸಂಕೇತ ವ್ಯವಸ್ಥೆಗಳನ್ನು ಅವರು ತಮ್ಮ ಇಚ್ಛೆಯಂತೆ ಕುಣಿಸುತ್ತಿದ್ದಾರೆ.

ನೇರ ಸಂದೇಶಗಳನ್ನು ತಲುಪಿಸುವ ನಾಲ್ಕು ಮಾರ್ಗಗಳನ್ನು ಸೂಚಿಸಿದಾಕ್ಷಣಕ್ಕೆ ಅವು ಪೂರ್ಣ ಪ್ರಮಾಣದಲ್ಲಿ ಜಾರಿಗೊಳ್ಳುತ್ತದೆಂದು ನಿರೀಕ್ಷಿಸುವುದು, ನಕ್ಷತ್ರಗಳನ್ನು ನಿಲುಕಿಸಿಕೊಂಡಷ್ಟೇ ಆಶಾದಾಯಕ. ಆದರೂ, ಇರುವ ಮಿತಿಗಳಲ್ಲಿಯೇ ಒಂದಿಷ್ಟನ್ನಾದರೂ ಸಾಧಿಸಬಹುದಾದ ಭಾಗಗಳೂ ಕೆಲವು ಇವೆ. ಉದಾಹರಣೆಗೆ 'ಪಕ್ಷಪಾತ' ಎಂಬುದನ್ನು ನಿಲ್ಲಿಸಲಾಗದೆಂಬುದು ನಿಜ. ಇದು ಮನುಷ್ಯನ ಹಾಗೂ ಅವನೇ ಬಳಸುವ ಭಾಷೆಯ ಸಹಜ ಗುಣವೇ ಆಗಿದೆ. ಪ್ರಜ್ಞಾಪೂರ್ವಕವಾಗಿ ಇದನ್ನು ನಿರಾಕರಿಸಲು ಹೊರಟರೆ, ಇದು ಮತ್ತಷ್ಟು ಆಳದ ನೆಲೆಗೆ ಸರಿದು, ಕಣ್ಣಿಗೆ ಕಾಣದಂತೆ ಅವಿತು, ಕೆಲಸ ಮಾಡಲು ತೊಡಗುವ ಸಂಭವವೇ ಹೆಚ್ಚು. ಆದರೂ, ಅದನ್ನೇ ಗುಣಾತ್ಮಕವಾಗಿ ಬಳಸುವುದೂ ಸಾಧ್ಯವಿದೆ. ಬರಪೀಡಿತ ಪ್ರದೇಶಗಳಲ್ಲಿ ಖಾಲಿ ಕೊಡಗಳನ್ನು ಹಿಡಿದು, ಶಾಪ ಹಾಕುತ್ತಾ ಗುಂಪು ಗುಂಪಾಗಿ, ದಂಗೆ ಎದ್ದವರಂತೆ ಬರುವ ಹೆಂಗಸರು, ಗಂಡಂದಿರು ಕುಡಿದು ಬಂದರೆ ಮನೆಯೊಳಗೆ ಸೇರಿಸಬಾರದೆನ್ನುವ ಚಳುವಳಿ, ಮರಗಳನ್ನು ಕಡಿಯುವುದಾದರೆ ನಮ್ಮನ್ನು ಮೊದಲು ಕಡಿಯಿರಿ ಎಂಬ ಅಪ್ಪಿಕೋ ಚಳುವಳಿಗಳಂತಹವನ್ನು ಇಲ್ಲಿ ಉದಾಹರಿಸಬಹುದು. ತಾವು ತೊಡಗಿಕೊಂಡಿರುವ ಚಟುವಟಿಕೆಗಳು ಸರಿಯಾದದ್ದಲ್ಲ ಎಂಬ ನಿಶ್ಚಿತ ಅಧೈರ್ಯ ದಲ್ಲೂ ಅದೇ ಚಟುವಟಿಕೆಗಳಲ್ಲಿ ಮುಂದುವರಿಯುತ್ತಿರುವವರ ಎದುರು ಇಂತಹ ಸಾತ್ವಿಕ ವಿರೋಧಗಳು ಪ್ರಕಟವಾಗಿ, ಅಪಮಾರ್ಗದಲ್ಲಿರುವವರನ್ನು ಸರಿಯಾದ ದಾರಿಗೆ ಹಚ್ಚಬಲ್ಲ ಪ್ರಕರಣಗಳಿವು. ಸತ್ಯಕ್ಕೊಂದು ಶಕ್ತಿ ಇದೆ ಎಂಬುದನ್ನು ನಿರೂಪಿಸುವಂತಹವು. ಹೀಗೆ ಅನ್ಯಾಯದ ವಿರುದ್ಧ ಹೋರಾಡುವ ಬಗೆಗೆ ಮಾಹಿತಿಗಳನ್ನಷ್ಟೇ ನೀಡದೆ ಅವುಗಳ ಮಾರ್ಗಗಳನ್ನು ಆಯ್ಕೆ ಮಾಡಲು ಸಹ ಜನತೆಯನ್ನು ಪ್ರೇರಿಸಬಹುದು. ಭಾಷೆಯನ್ನು ಜನತೆಗೆ 'ಸಂದೇಶ'ಗಳನ್ನು ನೀಡುವ ನೆಲೆಗಿಂತ ಭಿನ್ನರೀತಿಯಲ್ಲಿ ಬಳಸಿ ಜನತೆಯೊಂದಿಗೆ 'ಸಂವಾದ' ನಡೆಸಲು ಸಾಧ್ಯವಾಗಿಸಬೇಕು. ದುಷ್ಪರಿಣಾಮಗಳ ಬಗೆಗಿನ ದೃಷ್ಟಿಕೋನವನ್ನೇ ಬದಲಿಸಲು ಈ ಸಂವಾದಗಳಲ್ಲಿ ಸಾಧ್ಯವಾದರೆ ಮಾತ್ರ, ವೈಯಕ್ತಿಕ ಆಸಕ್ತಿಯ ಭಯ

ಮಾಯವಾಗಲೂ ಸಾಧ್ಯ. ಹಾಗೂ ಇಂತಹ ಭಯವು ಮಾತ್ರವೇ ನಮ್ಮ ಭಾಷೆಯು ಗಂಟಲನ್ನು ಹಿಡಿದು ಹಿಂಸಿಸುವ ಅಂಶ ಎಂಬುದು ತಿಳಿಯಬೇಕಾದ ಸಂಗತಿ.

'ಜನಭಾಷೆಯು ಜನರ ಸ್ವತ್ತು' ಎಂಬುದು ನಿಜವಾದರೂ, ಸಮಾನ ಜನತಾ ನ್ಯಾಯವಿತರಣೆ ಇಲ್ಲದಲ್ಲಿ ಅದು ಜನರಿಗೆ ನಿಲುಕುವಲ್ಲಿ ಸಮಸ್ಯೆಗಳೇ ಇವೆ. ಉದಾಹರಣೆಗೆ ಪತ್ರಿಕೆ, ರೇಡಿಯೋ, ಟಿ.ವಿ.ಗಳ ಪ್ರಸಾರ ಸಮಯಗಳನ್ನು ಬಳಸಲು ಅಥವಾ ತಮ್ಮ ಜಾಹೀರಾತುಗಳನ್ನು ಅಲ್ಲಿ ನೀಡಲು ಯಾರಿಗೂ ಯಾವ ನಿರ್ಬಂಧವೂ ಇಲ್ಲ. ಎಲ್ಲರಿಗೂ ಸಮಾನ ಅವಕಾಶಗಳಿವೆ. ಆದರೆ ಈ ಮೂಲಕ ಯಾವುದೇ ಶಕ್ತಿ ವಿರೋಧಿಯನ್ನು ಎದುರಿಸುವುದೆಂದರೆ, ಆ ವಿರೋಧಿಗಿಂತ ಹೆಚ್ಚಿನ ಖರ್ಚನ್ನು ನಿರ್ವಹಿಸಲು ಅವನಿಗೆ ಸಾಧ್ಯವಾಗಬೇಕೆಂಬುದು ಆರ್ಥಿಕವ್ಯವಸ್ಥೆ ತೋರುವ ನ್ಯಾಯ. ಇಂದು ಒಬ್ಬ ವ್ಯಕ್ತಿಗೆ ನೆಲೆಯೂರಲು ಜಾಗವಿಲ್ಲವೆಂಬ ಸ್ಥಿತಿ ಉಂಟಾಗಿದ್ದರೆ ಅದು ಒಟ್ಟು ವ್ಯವಸ್ಥೆಯು ಆ ವ್ಯಕ್ತಿಯ ಮೇಲೆ ನಡೆಸಿದ ವ್ಯಭಿಚಾರವೇ ಆಗಿದೆ ಎಂಬ ಮಾತು ಇದೇ ಸಹಜ ಸ್ಥಿತಿ ಏನೋ ಎಂಬ ಭ್ರಮೆಯನ್ನುಂಟುಮಾಡುವಷ್ಟು ಪುರಾತನವಾಗಿದೆ. ವಾತಾವರಣದ ಗಾಳಿಯನ್ನೂ ಹೀಗೆ ಕೊಂಡು ದಾಸ್ತಾನು ಮಾಡಬಹುದಾದರೆ, ಹಾಗೆ ಮಾಡುವವರಿಗೇನೂ ಕೊರತೆಯಿಲ್ಲ. ಮುಂದೊಂದು ದಿನ ನೆಲದ ಬಗೆಗೆ ನಡೆದ ಅತ್ಯಾಚಾರವೇ ಗಾಳಿಯ ವಿಚಾರಕ್ಕೂ ನಿಜವಾಗುತ್ತದೆ. ಜನಭಾಷೆಯ ಬಗೆಗೂ ಇಂತಹುದೇ ಒಂದು ಕುತಂತ್ರ ನಡೆದಿದೆ. ಭಾಷೆಯು ಗಾಳಿಯಂತೆ ಸ್ವಚ್ಛಂದ ಎಂದು ನಾವಿನ್ನೂ ನಂಬಿರುವಾಗಲೇ, ಅದನ್ನು ಭಾಗ ಭಾಗಗಳಲ್ಲಿ ಪ್ರತ್ಯೇಕಿಸಿ ಸ್ವಂತಕ್ಕೆ ಸಾಗಿಸಿಬಿಡಲಾಗುತ್ತದೆ. ಭೂಮಿಕಾಣಿಯ ವ್ಯವಹಾರದಂತೆ. ಕೊನೆಗೊಮ್ಮೆ ಭಾಷೆಯೇ ಇಲ್ಲದಿದ್ದ ಕಾಲ ಸಹ ಬಂದೀತಲ್ಲ. ಹಾಗಾಗಿ ಮೇಲೆ ಹೇಳಿದ ರೀತಿಯ ಸಾಗಾಣಿಕೆಯಿಂದ ಏನಾದೀತು ಎನ್ನುವಂತಿಲ್ಲ. ಜನಭಾಷೆಯ ಮೇಲಿನ ಹಿಡಿತ ಜನರ ಕೈಗಳಿಂದಲೇ ಜಾರುತ್ತಿದೆ ಎಂಬುದು ಆತಂಕದ ಸಂಗತಿ. ಭಾಷೆಯು ಇಂದು ತಲುಪಿರುವ ಈ ಸ್ಥಿತಿಗೆ ಸಮೂಹ ಮಾಧ್ಯಮಗಳು ಪ್ರಧಾನ ಕಾರಣಗಳಾಗಿವೆ. ಹಾಗೆಂದು ಜನಭಾಷೆಯನ್ನು ಯಾರೂ ಮುಟ್ಟಬಾರದೆಂದೇನೂ ಇಲ್ಲ. ಸಮುದ್ರದ ಬೀಚನ್ನು ವ್ಯಕ್ತಿಯೊಬ್ಬನು ಕೊಂಡು ವೈಯಕ್ತಿಕ ಆಸ್ತಿಯೆಂದು ಹೇಳಿದರೂ, ಅವನು ಅದಕ್ಕೆ ಸರ್ವಾಧಿಕಾರಿಯಾಗಲಾರ, ಅಷ್ಟೆ. ಒಟ್ಟು ಜನತೆಯು ಒಡೆತನವನ್ನು ಸ್ಥಾಪಿಸಬಹುದಾದ ಕ್ಷೇತ್ರವೆಂಬುದು ಇದ್ದರೆ ಅದು ಭಾಷಾಕ್ಷೇತ್ರ ಮಾತ್ರವೇ. ಈ ಜನತಾ ಸ್ವಾಮ್ಯಕ್ಕೆ ಧಕ್ಕೆ ಬರಬಾರದಲ್ಲ!

ಆದರೆ, ಇಂದು ಭಾಷೆಯನ್ನು ಬಳಸಿ ಕ್ರಿಯಾತ್ಮಕ ನಿಯಂತ್ರಣವನ್ನು ಸಾಧಿಸುವ ತಂತ್ರವು, ಎಲ್ಲ ನಿಯಂತ್ರಣ ತಂತ್ರಗಳನ್ನೂ ಮೀರಿಸುವಷ್ಟು ಭಯಂಕರವಾಗಿದೆ. ಏಕೆಂದರೆ ಈ ತಂತ್ರ ಆಮೂಲಾಗ್ರವಾಗಿ ಪ್ರಭಾವವನ್ನು ಬೀರಬಲ್ಲಷ್ಟು ಶಕ್ತಿಯುತವಾಗಿದೆ. ಲಕ್ಷಾಂತರ ವರ್ಷಗಳ ವಿಕಸನ ಪಥದಲ್ಲಿ ಅತ್ಯಂತ ಪ್ರಯಾಸದಿಂದ ಮಾನವನು 'ಭಾಷೆ' ಎಂಬ ಸಾಧನವನ್ನು ರೂಪಿಸಿಕೊಂಡು, ಆ ಮೂಲಕವೇ ಸಹಕಾರಿ ಸಮಾಜಗಳನ್ನು ಪ್ರತಿಷ್ಠಾಪಿಸಿ

ನಡೆಸಿಕೊಂಡು ಬರುತ್ತಿದ್ದಾನೆ ಎಂದರೆ ಅತಿಶಯವಲ್ಲ. ಇಂದು ಭಾಷೆಯೇ ಆತ್ಮವೂ, ಭಾಷೆಯೇ ಸಾಧನವೂ ಆಗಿ ವರ್ತಿಸುತ್ತಿದೆ. ಈ ಜಗತ್ತಿನ ಇಡೀ ವ್ಯವಸ್ಥೆಯೇ ಶಬ್ದಗಳ ಯೋಜನೆಯಲ್ಲಿ ರೂಪುಗೊಂಡು ನಂತರದಲ್ಲಿಯೇ ವಾಸ್ತವಕ್ಕೆ, ಪರಿವರ್ತಿತವಾಗುವ ಸಂಭವ ಕಾಣುತ್ತಿದೆ. ಆದ್ದರಿಂದಲೇ, ವ್ಯವಸ್ಥೆಯ ವಾಸ್ತವ ಸತ್ಯವೆನಿಸುವ ಈ ಭಾಷೆಯನ್ನು ಯೋಜನೆಗಳು ಒಳಗೊಳ್ಳಲೇಬೇಕು. ಭಾಷೆಯೇ ವ್ಯವಸ್ಥೆಯ ಕಟ್ಟಡದ ವಾಸ್ತುಶಿಲ್ಪಿ. ಇಡೀ ಕಟ್ಟಡದ ಅಳಿವು ಉಳಿವು ಇದನ್ನು ತಾನೇ ಅವಲಂಬಿಸುತ್ತದೆ.

ಆಹಾರ, ರಕ್ಷಣೆ, ಜೀವನ ನಿರ್ವಹಣೆಗಳಂತಹ ವಿಚಾರಗಳನ್ನು ಪ್ರತಿಯೊಬ್ಬರೂ ಎಷ್ಟು ಸಹಜವಾಗಿ ಅತ್ಯಂತ ಗಂಭೀರವಾಗಿ ಪರಿಗಣಿಸುತ್ತಾರೋ ಅಷ್ಟೇ ಸಹಜ ಗಾಂಭೀರ್ಯದಲ್ಲಿ 'ಭಾಷೆ' ಎಂಬ ಸಂಗತಿಯನ್ನೂ ಪರಿಗಣಿಸಬೇಕು. ಜಾನ್ ಸಿಯಾರ್ಡಿ (John Ciardi) ಎಂಬಾತನು ಒಂದೆಡೆ ಹೀಗೆ ಬರೆದಿದ್ದಾನೆ: "ಒಂದು ದೇಶವು ತನ್ನ ಭಾಷೆಯ ಬಗೆಗೆ ಎಷ್ಟು ತಿಳಿದುಕೊಂಡಿದೆ ಎಂಬುದನ್ನು ನನಗೆ ಹೇಳಿ, ಆ ದೇಶಕ್ಕೆ ತನ್ನ ಅಸ್ತಿತ್ವದ ಬಗೆಗೆ ಎಷ್ಟು ಕಾಳಜಿ ಇದೆ ಎಂಬುದನ್ನು ನಾನು ಹೇಳುತ್ತೇನೆ."



# ಕಲೆಯ ಗ್ರಹಿಕೆ-ಒಂದು ನಿರ್ವಚನ

**ಜಿ. ಜಯಕುಮಾರ್**

ಮನುಷ್ಯ ಸ್ವಭಾವತಃ ಚಿಂತನಾಜೀವಿ. ಬದುಕಿನ ಅರ್ಥವಂತಿಕೆಗಾಗಿ ಮತ್ತು ಸಾರ್ಥಕತೆಗಾಗಿ ಅವನು ಸದಾ ತುಡಿಯುತ್ತಿರುತ್ತಾನೆ. ಆ ಮೂಲಕ ಸತ್ಯಶೋಧನೆ ಅವನ ಗುರಿಯಾಗಿರುತ್ತದೆ. ವಾಸ್ತವ ಬದುಕಿನಲ್ಲಿ ಅವನು ಕಂಡುಕೊಂಡದ್ದು ಅವನೊಳಗಿನ ಎಲ್ಲ ಪ್ರಶ್ನೆಗಳಿಗೆ ಸಮರ್ಪಕ ಉತ್ತರವಲ್ಲ. ನಿಜವಾದ ಉತ್ತರ ಪಡೆಯುವ ನಿಟ್ಟಿನಲ್ಲಿ ಅವನು ಶೋಧನೆಗೆ ಒಂದು ಹೊಸ ಮಾಧ್ಯಮದ ಹಾಗೂ ಒಂದು ನೂತನ ಅಭಿವ್ಯಕ್ತಿಯ ಮಾರ್ಗ ಕಂಡುಕೊಳ್ಳುತ್ತಾನೆ. ಈ ಮಾರ್ಗವೇ ಕಲೆ. ಈ ಶೋಧನೆ ನಿರಂತರವಾದದ್ದು. ಆದ್ದರಿಂದ ಕಲೆಯ ಬಗೆಗಿನ ಈ ತುಡಿತವೇ ಸೃಜನಶೀಲ ಜೀವನ.

ಈಗಾಗಲೇ ಹೇಳಿದಂತೆ ನಮ್ಮೊಳಗಿನ ನೂರಾರು ಪ್ರಶ್ನೆಗಳಿಗೆ ವಾಸ್ತವದಲ್ಲಿ ಉತ್ತರ ಸಿಗಲಾರದು. ಏಕೆಂದರೆ ಪ್ರಶ್ನೆ ಹುಟ್ಟುವುದೇ ವಾಸ್ತವವನ್ನು ಮೀರಿದ ವಿಸ್ಮಯದಲ್ಲಿ. ಇಲ್ಲಿ ವಾಸ್ತವದ ಬಗ್ಗೆ ಒಂದೆರಡು ಮಾತು ಹೇಳಬೇಕಾಗುತ್ತದೆ. ವಾಸ್ತವ ಎಂದರೆ ಸಾಮಾನ್ಯವಾಗಿ ನಾವೆಲ್ಲರೂ ಕಾಣುವ ನಮ್ಮೆದುರಿನ ಭೌತಿಕ ಜಗತ್ತು. ಈ ಜಗತ್ತನ್ನು ನಮ್ಮ ಕಣ್ಣು ಒಂದು ಸ್ತರದಲ್ಲಿ ಪರಿಭಾವಿಸುತ್ತದೆ. ಆದರೆ ಇದಷ್ಟೇ ಸತ್ಯವಾಗಿರುವದಿಲ್ಲ ಈ ಭೌತಿಕತೆಯನ್ನು ಮೀರಿದ ಸತ್ಯ ಗೋಚರವಾಗಬೇಕಾದರೆ ಒಂದು ಒಳಗಣ್ಣಿನ ಅಗತ್ಯ ಇರುತ್ತದೆ. ಈ ಒಳಗಣ್ಣಿನ ಹುಟ್ಟಿಗೆ ವಿಸ್ಮಯ ಪ್ರೇರಣೆಯಾಗುತ್ತದೆ. ಈ ಸ್ತರದಲ್ಲಿ ಕಲ್ಪನೆಯು ಒಂದು ಉಪಕರಣವಾಗಿ, ಗೋಚರವಾಗದ ಸತ್ಯಶೋಧನೆಗೆ ಮುಂದಾಗುತ್ತದೆ. ಇದನ್ನೇ ನಾವು ಸೃಜನಶೀಲ ಕ್ರಿಯೆ ಎಂದು ಕರೆಯುತ್ತೇವೆ. ಹೀಗೆ ಹೊಸದಕ್ಕೆ ತುಡಿದು, ವಿಸ್ಮಯಕ್ಕೆ ಒಳಗಾಗಿ, ಒಳಗಣ್ಣಿನಲ್ಲಿ ನೋಡುವ ಈ ಇಡೀ ಪ್ರಕ್ರಿಯೆಯೇ ಕಲೆ. ಈ ಪ್ರಕ್ರಿಯೆ ಕಲಾ ಜಗತ್ತಿನಂತೆಯೇ, ವಿಜ್ಞಾನವೂ ಸೇರಿದಂತೆ ಎಲ್ಲ ರಂಗಗಳಲ್ಲಿಯೂ ಒಂದೇ ಆಗಿರುತ್ತದೆ. ಆದರೆ ವಿಜ್ಞಾನಕ್ಕಿಂತ ಕಲೆಯ ಗ್ರಹಿಕೆ ಭಿನ್ನವಾದದ್ದು ಎಂಬುದು ಮಾತ್ರ ನಿರ್ವಿವಾದ. ವಿಜ್ಞಾನದಲ್ಲಾದರೆ ಒಂದೊಂದು ಹೊಸ ಶೋಧನೆಯೂ ಆಯಾ ಹಂತಗಳಲ್ಲಿ ವಾಸ್ತವವಾಗಿ ಪರಿಗಣಿತವಾಗುತ್ತದೆ. ಅಂದರೆ ಅಷ್ಟರ ಮಟ್ಟಿಗೆ ಅಲ್ಲಿನ ವಿಸ್ಮಯ ಜಗತ್ತು ಒಡೆದು ಹೋಗುತ್ತಾ ಸಾಗುತ್ತದೆ. ಅಲ್ಲದೆ, ವಿಜ್ಞಾನದಲ್ಲಿ ಒಂದು ದಾರಿ ಹಿಡಿದು ಹೊರಟರೆ ಹಿಂದಿರುಗುವ ಪ್ರಶ್ನೆಯಿಲ್ಲ. ಪ್ರತಿಹಂತವನ್ನು ಶೋಧಿಸುತ್ತಾ ಅದನ್ನು ವಾಸ್ತವಕ್ಕೆ ಪೋಣಿಸುತ್ತಾ ಹೋಗುವುದು ಅಲ್ಲಿನ ಕ್ರಮ. ವಿಜ್ಞಾನದ ಈ ಗ್ರಹಿಕೆಗೆ ಕಲ್ಪನೆಯು ಬೆನ್ನೇರಿಯೇ ಹೋಗಬೇಕಾದ ಅಗತ್ಯವಿಲ್ಲ. ವಿಜ್ಞಾನ ಜಗತ್ತಿನ ಮತ್ತೊಂದು ರೀತಿಯೆಂದರೆ ಸತ್ಯಶೋಧನೆಯಲ್ಲಿ ಬರುವ ಹಲವು ಘಟ್ಟಗಳಲ್ಲಿ ಒಂದು

ರಾಜೀವಗೌಡರ ಮನೆ - ರಾಯಚೂರು

ಜನಸಾಮಾನ್ಯರು ತಮ್ಮ ಅನಿಸಿಕೆಗಳನ್ನು ಮತ್ತು ಸೌಂದರ್ಯ ದೃಷ್ಟಿಯನ್ನು ವ್ಯಕ್ತಪಡಿಸಿ ರಚಿಸಿರುವ ಎರಡು ಕೃತಿಗಳು

ತೈಲ ವರ್ಣ ಆರ್. ಎಂ. ಹಡಪದ್

ಪ್ರಕೃತಿಯ ವೈವಿಧ್ಯಮಯ ಸೌಂದರ್ಯದ ಸ್ಫೂರ್ತಿಯಿಂದ ಚಿತ್ರಕಲಾವಿದನು ರಚಿಸಿದ ಪ್ರಕೃತಿ ಚಿತ್ರ ಹಾಗೂ ಮತ್ತೊಂದು ಮಾಧ್ಯಮದಲ್ಲಿ ಅಂಥದೇ ಸೌಂದರ್ಯವನ್ನು ಛಾಯಚಿತ್ರಗ್ರಾಹಕನು ಸೆರೆಹಿಡಿದಿರುವುದು



ಛಾಯಾಚಿತ್ರ [illegible]

ಘಟ್ಟದ ನಂತರ ಇನ್ನೊಂದು ಘಟ್ಟಕ್ಕೆ ಖಚಿತವಾಗಿ ಕಾಲಿಡಬೇಕಾಗುತ್ತದೆ. ಏಕಾಏಕಿ ಎಲ್ಲ ಘಟ್ಟಗಳನ್ನೂ ಕುರಿತು ಚಿಂತಿಸಲು ಸಾಧ್ಯವೇ ಇಲ್ಲ. ಅಂದರೆ ಭೃಂಗದ ಬೆನ್ನೇರಿದ ಕಲ್ಪನಾವಿಲಾಸ ಇಲ್ಲಿ ಸಾಧ್ಯವಿಲ್ಲ. ಆದರೆ ಕಲಾಜಗತ್ತಿನಲ್ಲಿ ಈ ವಿಲಾಸ ಸಾಧ್ಯ ಎಂಬುದನ್ನು ಪ್ರತಿಪಾದಿಸುವುದೇ ಇಲ್ಲಿಯವರೆಗಿನ ನನ್ನ ವಿಶ್ಲೇಷಣೆಯ ಹಿಂದಿನ ಆಶಯ. ಈ ದೃಷ್ಟಿಯಿಂದ ವಿಜ್ಞಾನ ಮತ್ತು ಕಲೆಯ ಬಗೆಗಿನ ಗ್ರಹಿಕೆಯ ವಿಧಾನ ಸಂಪೂರ್ಣ ಭಿನ್ನವಾಗುತ್ತವೆ.

ಇಲ್ಲಿನ ಬಹುಮುಖ್ಯ ವಿಚಾರವೆಂದರೆ ವಿಜ್ಞಾನವನ್ನು ನಾವು ಅರ್ಥ ಮಾಡಿಕೊಳ್ಳುತ್ತೇವೆ. ಆದರೆ, ಕಲೆಯನ್ನು ಅನುಭವಿಸುತ್ತೇವೆ. ಅಂದರೆ ವಿಜ್ಞಾನ ತರ್ಕಕ್ಕೆ ಸಿಗುತ್ತದೆ, ಕಲೆ ತರ್ಕಕ್ಕೆ ಸಿಗುವುದಿಲ್ಲ. ಹೀಗೆಂದಾಕ್ಷಣ ಕಲೆಗೆ ತರ್ಕದ ಬೆಂಬಲವಿಲ್ಲ ಎಂದಲ್ಲ. ವಿಜ್ಞಾನದ ತರ್ಕ ವಿವರಿಸಬಲ್ಲದ್ದು. ಕಲೆಯ ತರ್ಕ ವಿವರಣೆಗೆ ಸಿಗುವಂಥದ್ದಲ್ಲ. ಇದೇ ರಸಾನುಭವ. ಇದು ಕಲೆಯನ್ನು ಹೊರತುಪಡಿಸಿದ ಇನ್ನಿತರ ಕ್ಷೇತ್ರಗಳಿಗೂ ಅನ್ವಯಿಸುತ್ತದೆ. ಆದರೆ ಆಯಾ ಕ್ಷೇತ್ರಗಳಿಗೆ ಅವುಗಳದೇ ಆದ ಗ್ರಹಿಕೆಯ ವಿಭಿನ್ನ ನೆಲೆಗಳಿರುತ್ತವೆ. ಉದಾಹರಣೆಗೆ ಒಬ್ಬ ವ್ಯಕ್ತಿ ಸಂಬಂಧಪಟ್ಟ ಒಂದು ಕ್ಷೇತ್ರದಲ್ಲಿ ಪರಿಣತಿ ಪಡೆದಿರುತ್ತಾನೆ ಎಂದು ಇಟ್ಟುಕೊಂಡರೆ, ಆತ ಉಳಿದ ಕ್ಷೇತ್ರಗಳನ್ನು ಸ್ಪರ್ಶಿಸಲಾರ ಎಂದಲ್ಲ. ಏಕೆಂದರೆ ಗ್ರಹಿಕೆಯ ವಿಧಾನವನ್ನು ಮಾಧ್ಯಮಕ್ಕೆ ತಕ್ಕಂತೆ ಬದಲಾಯಿಸಿಕೊಂಡರೆ ಅದು ಸಾಧ್ಯ. ಇದು ಪಂಡಿತರ ಮಾತಾಯಿತು. ಒಬ್ಬ ಸಾಮಾನ್ಯನ ವಿಚಾರದಲ್ಲೂ ಇದು ಸತ್ಯ. ಅಂದರೆ ಯಾವೊಬ್ಬ ಸಾಮಾನ್ಯ ಮನುಷ್ಯನಿಗೂ ಇಂಥ ಗ್ರಹಿಕೆಯ ಮೂಲ ಶಕ್ತಿ ಇದ್ದೇ ಇರುತ್ತದೆ. ಆದರೆ ಅದೊಂದು ಮಿತಸ್ತರದಲ್ಲಿ ಇರುತ್ತದೆ. ಅಂದರೆ ಇದರ ಅರ್ಥ ಇಷ್ಟೆ. ಗ್ರಹಿಕೆಯ ಮೂಲ ಶಕ್ತಿ ಪ್ರತಿಯೊಬ್ಬ ಮನುಷ್ಯನಲ್ಲೂ ಸಹಜವಾಗಿಯೇ ಇರುತ್ತದೆ. ಆದರೆ ಅದು ಅವನ ಆಸಕ್ತಿ, ಶ್ರಮ ಹಾಗೂ ಪರಿಣತಿಯ ಕಾರಣಕ್ಕಾಗಿ ವಿವಿಧ ಸ್ತರಗಳಲ್ಲಿ ತಾನೇ ತಾನಾಗಿ ಊರ್ಧ್ವಮುಖಿಯಾಗುತ್ತಾ ಉದ್ದೀಪನಗೊಳ್ಳುತ್ತದೆ.

ಮೇಲಿನ ಮಾತುಗಳನ್ನು ಸೃಜನಶಕ್ತಿಗೂ ಅನ್ವಯಿಸಬಹುದು. ಸೃಜನಶೀಲತೆ ಅಂದರೆ ಏನು? ಯಾವುದೇ ವಿಚಾರವನ್ನಾದರೂ ಸರಿಯೇ, ಅದನ್ನು ಕ್ರಿಯಾಶೀಲ ಮುಖದಲ್ಲಿ ನೋಡುವುದು ಅಥವಾ ಆಲೋಚಿಸುವುದು ಅಥವಾ ಮಾಡುವುದು. ಇದು ಎಲ್ಲರಲ್ಲಿಯೂ ಅಪ್ರಜ್ಞಾಪೂರ್ವಕವಾದ ಒಂದು ನೆಲೆಯಲ್ಲಿರುತ್ತದೆ. ಆದರೆ ಒಬ್ಬ ಕಲಾವಿದನ ವಿಚಾರದಲ್ಲಿ ಈ ಸೃಜನಶಕ್ತಿಯ ಸ್ಥಾನವೇನು? ಇವನು ಅಪ್ರಜ್ಞಾಪೂರ್ವಕ ನೆಲೆಯಲ್ಲಿ ಅಮೂರ್ತವಾಗಿರುವದನ್ನು ಸೃಜನಶಕ್ತಿಯಿಂದ ಪ್ರಜ್ಞಾಪೂರ್ವಕ ನೆಲೆಗೆ ತಂದು ನಂತರ ಮೂರ್ತದಲ್ಲಿ ನಿಲ್ಲಿಸುತ್ತಾನೆ. ಕಲಾವಿದ ತನ್ನೊಡಲಿನ ಅಮೂರ್ತ ಜಗತ್ತನ್ನು ತಾನೇ ಪರಿಶೀಲನೆಗೊಳಪಡಿಸಿ, ತಾಕಲಾಟಕ್ಕೆ ಗುರಿ ಮಾಡಿ ಸತ್ಯವನ್ನು ಅಭಿವ್ಯಕ್ತಿಸಲು ಸಿದ್ಧವಾಗುತ್ತಾನೆ. ಇಲ್ಲಿಯವರೆಗೆ ಇದು ಅವನ ಅಂತರ್ಮುಖದ ಸಂಘರ್ಷ. ಆದರೆ ಆ ನಿಗೂಢವನ್ನು ಆಚೆಗೆ ಹಾಕುವ ಹಂತದಲ್ಲಿ ಅವನು ಅಮೂರ್ತದಿಂದ ಮೂರ್ತದ ಕಡೆಗೆ ಪಯಣಿಸುತ್ತಾನೆ. ಹೀಗಾಗಿ ಸತ್ಯದ ಸಂಪೂರ್ಣ ಮುಖವನ್ನು ಹಿಡಿಯಲಾಗದಿದ್ದರೂ ಮಿಂಚುವ ಜೆಳ್ಳಿಗೆರೆಗಳನ್ನು ಮೂಡಿಸುತ್ತಾನೆ.

ಕಲಾವಿದ ತನ್ನ ಚಿತ್ರಾಭಿವ್ಯಕ್ತಿಯ ಹಂತದಲ್ಲಿ ಒಂದು ಕಾಲಕ್ಕೆ ಬದ್ಧನಾಗಿರುತ್ತಾನೆ. ಆದರೆ ಅಭಿವ್ಯಕ್ತಿಗೊಂಡ ಅಥವಾ ರಚಿತವಾದ ಚಿತ್ರ ಹಾಗೆ ಕಾಲಬದ್ಧವಲ್ಲ. ಅದು ರಚನೆಗೊಂಡ ಕ್ಷಣದಿಂದ ಸಾರ್ವಕಾಲಿಕ ಸತ್ಯದ ಜೊತೆಗೆ ತನ್ನ ಸಂಬಂಧವನ್ನು ಸ್ಥಾಪಿಸಿ ಕೊಂಡು ಬಿಡುತ್ತದೆ. ತನ್ನ ಪಾಡಿಗೆ ತಾನು ಸ್ವತಂತ್ರವೆನಿಸಿಕೊಳ್ಳುತ್ತ, ಕಲಾವಿದನ ಜೊತೆಗಿನ ಸಂಬಂಧದಿಂದ ದೂರ ಸರಿಯುತ್ತದೆ. ಸ್ವತಃ ಕಲಾವಿದನೇ ಅದನ್ನು ಹೊರಗೆ ನಿಂತು ನೋಡತೊಡಗುತ್ತಾನೆ ಇದೇ ಕಲೆಯ ಹಿರಿಮೆ. ಆ ಚಿತ್ರ ಒಬ್ಬ ವ್ಯಕ್ತಿಯ ಅಥವಾ ಒಂದು ಕಾಲಘಟ್ಟದ ಅಥವಾ ಕೇವಲ ಒಂದು ಸಾಮಾಜಿಕ ಸಂಗತಿಯ ಸೀಮಿತತೆಗೆ ಒಳಪಟ್ಟದ್ದಲ್ಲ. ಅದರ ಅಭಿವ್ಯಕ್ತಿಯ ಹಿಂದೆ ವ್ಯಕ್ತಿಯ ನೂರಾರು ಭಾವನೆಗಳೂ ಇರುತ್ತವೆ. ಸಂಸ್ಕೃತಿಯ ಒತ್ತಡಗಳಿರುತ್ತವೆ: ಸಾಮಾಜಿಕ ಸಂಘರ್ಷಗಳಿರುತ್ತವೆ. ಇವು ಕೂಡಾ ಕಾಲಬದ್ಧವಾದ ಪ್ರಭಾವಗಳಲ್ಲ. ಬದಲಾಗಿ ಪರಂಪರೆಯ ಪ್ರಭಾವಗಳಾಗಿರುತ್ತವೆ. ಒಂದು ಚಿತ್ರದ ಹಿಂದೆ ಇಡೀ ಜಗತ್ತಿನ ಸಾಂಸ್ಕೃತಿಕ ಇತಿಹಾಸವೇ ಇರುತ್ತದೆ. ಹೀಗಾಗಿ ಒಂದು ಚಿತ್ರವೆಂದರೆ ನಾನಾ ಮುಖಗಳ ಒಂದು ಸಂಕೀರ್ಣ ಕೃತಿ. ಇಲ್ಲಿ ಯಾವುದೇ ಒಂದು ಮುಖದಿಂದಲಾದರೂ ಅಂತರ ಸಂಬಂಧವನ್ನು ಸ್ಥಾಪಿಸಬಹುದು. ಅಂದರೆ, ಒಂದು ಚಿತ್ರದ ಹಿಂದೆ ಒಂದು ಪ್ರಪಂಚವೇ ಇರುತ್ತದೆ. ಈ ಮಾತಿನ ಸ್ಪಷ್ಟತೆಗಾಗಿ ಒಂದು ಉದಾಹರಣೆ ಕೊಡಬಹುದು. ಒಬ್ಬ ವ್ಯಕ್ತಿಗೆ ಈಗ ೩೩ ವರ್ಷಗಳಾಗಿವೆ, ನಿಜ. ಆದರೆ ಅವನ ಹುಟ್ಟಿನ ಹಿಂದೆ ಒಂದು ಮನುಕುಲದ ಚರಿತ್ರೆಯೇ ಇದೆ. ಆ ಇತಿಹಾಸದಿಂದ ಈ ೩೩ ವರ್ಷದ ವ್ಯಕ್ತಿ ಹೊರತಲ್ಲ. ಹಾಗೆಯೇ ಭೌತಿಕವಾಗಿ ಅವನಿಗೊಂದು ಮನಸ್ಸಿದೆ. ಆದರೆ ಆ ಮನಸ್ಸಿನಲ್ಲಿ ಇಡೀ ಪ್ರಪಂಚವೇ ಅಡಗಿರುತ್ತದೆ. ಈ ದೃಷ್ಟಿಯಿಂದ, ಅಭಿವ್ಯಕ್ತಗೊಳ್ಳುವ ಯಾವುದೇ ಚಿತ್ರವೆಂದರೆ ಅದು ನೇರವಾಗಿ ಸೃಷ್ಟಿಯ ಜೊತೆಗಿನ ಅಲೌಕಿಕ ಸಂಬಂಧದ ಅಭಿವ್ಯಕ್ತಿ ಎಂದೇ ಹೇಳಬೇಕಾಗುತ್ತದೆ. ಇಲ್ಲಿ ಕಾಲ ದೇಶಗಳು ಮುಖ್ಯವಾಗುವುದಿಲ್ಲ. ಇದುವರೆಗಿನ ಚರ್ಚೆಯ ಹಿನ್ನೆಲೆಯಲ್ಲಿ ಕಲಾಕೃತಿಯೊಂದನ್ನು ಈ ರೀತಿಯಲ್ಲಿ ಅರ್ಥೈಸ ಬಹುದು. ಯಾವುದೇ ಕಲಾಕೃತಿಯನ್ನು ಭಾರತೀಯ ಕಲೆ ಎಂದಾಗಲೀ, ಪಾಶ್ಚಾತ್ಯ ಕಲೆ ಎಂದಾಗಲೀ ಸೀಮಿತ ದೃಷ್ಟಿಯಿಂದ ನೋಡಲು ಸಾಧ್ಯವಿಲ್ಲ. 'ಭಾರತೀಯ' ಅನ್ನುವುದು ಒಂದು ರಾಜಕೀಯ ಸತ್ಯವೇ ಹೊರತು ಆಧ್ಯಾತ್ಮಿಕ ಸತ್ಯವಲ್ಲ. 'ಇದು ಮನುಕುಲವನ್ನೂ ಒಳಗೊಂಡಂತೆ ಇಡೀ ಸೃಷ್ಟಿಗೆ ಸಂಬಂಧಿಸಿನ್ನು' ಎಂದು ಅರ್ಥಮಾಡಿಕೊಳ್ಳುವುದೇ ಆಧ್ಯಾತ್ಮಿಕ ಸತ್ಯ. ಇದೇ ನಿಜವಾದ ಕಲೆ.

(ಮೇಲಿನ ಮಾತುಗಳ ಹಿನ್ನೆಲೆಯಲ್ಲಿ, ಕೆಲವು ವರ್ಣ ಚಿತ್ರಗಳನ್ನು, ಈ ಬರೆಹದೊಂದಿಗೆ ಕೊಡಲಾಗಿದೆ. ಅವುಗಳೊಂದಿಗೆ ಪ್ರತಿಯೊಬ್ಬರೂ ವ್ಯಾಖ್ಯಾನರಹಿತವಾದ, ಸಂದರ್ಭಾತೀತವಾದ ಮುಖಾಮುಖಿ ಮತ್ತು ಸಂವಾದಗಳನ್ನು ನಡೆಸಬೇಕೆನ್ನುವುದು ಲೇಖಕರ ಅಪೇಕ್ಷೆ.)

# ಅನ್ಯಭಾಷಾ ಶಿಕ್ಷಣ ಮಾಧ್ಯಮ: ಭಾಷೆಯ ಹತ್ಯೆ, ಜನಾಂಗದ ಹತ್ಯೆ

**ಸ್ಕುಟನ್ಯಾಬ್ ಕಾಂಗಾಸ್**

(ಬಾಸ್ಕ್ ಎಂಬುದು ಒಂದು ಭಾಷೆಯ ಹೆಸರು. ಸುಮಾರು ಏಳು ಲಕ್ಷ ಜನ ಈ ಭಾಷೆಯನ್ನು ಮಾತಾಡುತ್ತಾರೆ. ಇವರೆಲ್ಲ ಫ್ರಾನ್ಸ್ ದೇಶದ ನೈಋತ್ಯ ಮತ್ತು ಸ್ಪೇನ್ ದೇಶದ ವಾಯುವ್ಯ ಪ್ರದೇಶದಲ್ಲಿ ವಾಸಿಸುವವರು. ಸ್ಪೇನ್ ಸರ್ಕಾರದ ಆಳ್ವಿಕೆ ಇದ್ದಾಗ, ಅಂದರೆ ೧೯೩೭ ರಿಂದ ೧೯೫೦ರ ದಶಕದವರೆಗೆ ಬಾಸ್ಕ್ ಭಾಷೆಯ ಮೇಲೆ ಅನೇಕ ಪ್ರತಿಬಂಧಗಳಿದ್ದವು. ಆ ಭಾಷೆಯನ್ನು ಶಾಲೆಗಳಲ್ಲಿ ಕಲಿಸುವಂತಿರಲಿಲ್ಲ, ಚರ್ಚುಗಳಲ್ಲಿ ಬಾಸ್ಕ್ ಭಾಷೆಯ ಪ್ರಾರ್ಥನೆಗಳನ್ನು ಹೇಳುವಂತಿರಲಿಲ್ಲ. ಅಷ್ಟೇ ಏಕೆ, ಬಾಸ್ಕ್ ಭಾಷೆಯ ಹೆಸರುಗಳನ್ನೂ ಮಕ್ಕಳಿಗೆ ಇಡುವಂತಿರಲಿಲ್ಲ. ಆ ಭಾಷೆಯನ್ನು ಸಾರ್ವಜನಿಕ ಸ್ಥಳಗಳಲ್ಲಿ ಆಡುವುದಕ್ಕೆ, ಆ ಭಾಷೆಯಲ್ಲಿ ಪತ್ರಿಕೆಗಳನ್ನು ಪ್ರಕಟಿಸುವುದಕ್ಕೆ ಕೂಡ ಅವಕಾಶವಿರಲಿಲ್ಲ. ಬಾಸ್ಕ್ ಭಾಷೆಯ ಪುಸ್ತಕಗಳನ್ನು ಸುಟ್ಟು ಹಾಕಲಾಗುತ್ತಿತ್ತು.

೧೯೬೦ರ ದಶಕದಿಂದ ಬಾಸ್ಕ್ ಭಾಷೆ ಮತ್ತೆ ಉಸಿರಾಡತೊಡಗಿತು. ಚರ್ಚಿನ ಪ್ರಾರ್ಥನೆಯ ಭಾಷೆಯಾಗಿ, ಚರ್ಚಿನ ಶಾಲೆಗಳ ಭಾಷೆಯಾಗಿ, ಪ್ರಾಥಮಿಕ ಹಂತದ ಶಿಕ್ಷಣ ಮಾಧ್ಯಮವಾಗಿ ಬಾಸ್ಕ್ ಭಾಷೆಗೆ ಅವಕಾಶ ದೊರೆಯಿತು. ೧೯೭೯ರಲ್ಲಿ ಎಲ್ಲ ಹಂತದ ಶಿಕ್ಷಣದಲ್ಲೂ ಆ ಭಾಷೆಗೆ ಅವಕಾಶ ದೊರೆಯಿತು. ೧೯೮೦ರಲ್ಲಿ ಬಾಸ್ಕ್ ಸಂಸತ್ತು ಅಸ್ತಿತ್ವಕ್ಕೆ ಬಂದಿತು. ಅನೇಕ ಬಗೆಯ ಆತಂಕಗಳನ್ನು ಎದುರಿಸಿದ ಬಾಸ್ಕ್ ಭಾಷಾ ಶಿಕ್ಷಣವನ್ನು ಕುರಿತ ಚಿಂತನೆಗಳು ಕನ್ನಡವು ಇಂದು ಎದುರಿಸುತ್ತಿರುವ ಆತಂಕಗಳಿಗೂ ಧ್ವನಿಕೊಡುವಂತಿವೆ. ತುಳು, ಕೊಡವ ಮುಂತಾದ ಅಲ್ಪಸಂಖ್ಯಾತ ಭಾಷೆಗಳ ಸಮಸ್ಯೆಗಳನ್ನು ಚರ್ಚಿಸಲೂ ಸೂಕ್ತವಾದ ತಾತ್ತ್ವಿಕ ಚೌಕಟ್ಟನ್ನು ಈ ಲೇಖನ ಒದಗಿಸುತ್ತದೆ.

ಇದು ಸ್ಕುಟನ್ಯಾಬ್ ಕಾಂಗಾಸ್ ಅವರ ಲೇಖನದ ವಿಚಾರಗಳ ಸಂಗ್ರಹಾನುವಾದ )

## ೧. ದ್ವಿತೀಯ ಭಾಷೆಯ ಮುಖಾಂತರ ಶಿಕ್ಷಣ: ಭಾಷೆಯನ್ನು ಕೊಲ್ಲುವ ಮೂಲಕ ಜನರನ್ನು ಕೊಲ್ಲುವುದು ಸಾಧ್ಯವೇ?

ಮಾತೃ ಭಾಷೆಯನ್ನು ಕೊಲ್ಲುವ ಮುಖಾಂತರ ಒಂದು ಜನ ಸಮುದಾಯವನ್ನು ಕೊಲ್ಲಲು ಸಾಧ್ಯವೇ? ಮಾತೃ ಭಾಷೆಯನ್ನು ಹೊಂದಿರುವುದನ್ನು ಒಂದು ಮಾನವ ಹಕ್ಕು ಎಂದು ಪರಿಗಣಿಸಲು ಸಾಧ್ಯವೇ? ಹಾಗಾದರೆ ವ್ಯಕ್ತಿಯೊಬ್ಬನ ಅಥವ ಸಮುದಾಯ

ವೊಂದರ ಮಾತ್ರ ಭಾಷೆಯನ್ನು ಮಾನವ ಹಕ್ಕುಗಳ ಕಾನೂನನ್ನು ಜಾರಿಮಾಡಿ ಕಾಪಾಡಲು ಆಗುತ್ತದೆಯೇ? ಒಂದು ಭಾಷೆಯನ್ನು ಕೊಲ್ಲುವ ಬಗೆ ಯಾವುದು? ಅಂತೆಯೇ ಒಂದು ಭಾಷೆಯನ್ನು ಬದುಕಿಸುವ ವಿಧಾನ ಯಾವುದು? ಭಾಷೆಯೊಂದನ್ನು ಕೊಲ್ಲುವಲ್ಲಿ ಶಿಕ್ಷಣಕ್ರಮ ಯಾವ ಪಾತ್ರವನ್ನು ವಹಿಸುತ್ತದೆ? ಒಂದು ಭಾಷೆಯ ಸ್ಥಾನವನ್ನು ಇನ್ನೊಂದು ಭಾಷೆ ಆಕ್ರಮಿಸಿದಾಗ ಅಥವಾ ನಾವೇ ಇನ್ನೊಂದು ಭಾಷೆಯನ್ನು ನಮ್ಮ ಮಾತೃ ಭಾಷೆಯ ಸ್ಥಾನದಲ್ಲಿ ತಂದಿಟ್ಟುಕೊಂಡಾಗ ಶಿಕ್ಷಣ ಕ್ರಮದ ಮುಖಾಂತರ ಜಾಗ ತಪ್ಪಿದ ಭಾಷೆಗೆ ಹೇಗೆ ಮತ್ತೆ ಜೀವ ತುಂಬಬಹುದು? ಈ ಪ್ರಶ್ನೆಗಳನ್ನು ಇಲ್ಲಿ ಪರಿಶೀಲಿಸಲು ಬಯಸಿದ್ದೇನೆ.

“ಶಿಕ್ಷಣದಲ್ಲಿ ಬದಲಾವಣೆ ಆಗುವ ಮೊದಲು ಸಮಾಜದಲ್ಲಿ ಬದಲಾವಣೆ ಆಗಬೇಕು ನಾವು ನಮ್ಮ ಶಿಕ್ಷಣ ಕ್ರಮವು ನಮ್ಮ ಬಾಸ್ಕ್‌ತನವನ್ನು ಬೆಳೆಸುತ್ತದೆಂದು ಆಶಿಸಿದ್ದೆವು ಆದರೆ ಅದು ಸಾಧ್ಯವಿಲ್ಲ. ನಮ್ಮ ಸಮಾಜ ಮತ್ತು ನಮ್ಮ ಶಾಲಾ ವ್ಯವಸ್ಥೆ ಎರಡೂ ಒಟ್ಟಿಗೆ ಬಾಸ್ಕ್ ಅನ್ನು ಕಲಿಯಬೇಕು. ಬೇರೆ ದಾರಿಯೆ ಇಲ್ಲ.” ಇದು ೧೯೮೬ರಲ್ಲಿ ಶಿಕ್ಷಣ ಸಚಿವರೊಬ್ಬರು ಹೇಳಿದ ಮಾತು.

ಇದು ಒಂದು ಧೋರಣೆ. ಈ ಧೋರಣೆಯು ಶಿಕ್ಷಣವೆಂಬುದು ಕೇವಲ ಪರಾವಲಂಬಿಯೆಂದೂ, ಸಮಾಜವೇ ಎಲ್ಲ ಬದಲಾವಣೆಗಳ ಮೂಲ ಕಾರಣವೆಂದೂ ನಂಬುತ್ತದೆ. ಸಮಾಜದಲ್ಲಿ ಬದಲಾವಣೆಯಾದರೆ ಮಾತ್ರ ಶಿಕ್ಷಣ ಕ್ರಮದಲ್ಲಿ ಬದಲಾವಣೆ ಸಾಧ್ಯ, ಶಿಕ್ಷಣವು ತನ್ನಷ್ಟಕ್ಕೇ ಬಾಸ್ಕ್ ಭಾಷೆಗೆ ಮತ್ತೆ ಜೀವ ತುಂಬಲಾರದು ಎಂದು ಭಾವಿಸುತ್ತದೆ.

“....ಕೇವಲ ಆರ್ಥಿಕ ಮೂಲದ ಶಕ್ತಿಗಳು ಹಾಗೂ ಶೋಷಣೆ ಮಾತ್ರವಲ್ಲ, ಶಿಕ್ಷಣ ಕ್ರಮ ಕೂಡ ಸ್ಥಳೀಯ ಜನರ ವೈಶಿಷ್ಟ್ಯ ಮತ್ತು ಸಾಂಸ್ಕೃತಿಕ ಚಹರೆಗಳನ್ನು ನಾಶ ಮಾಡಿದೆ.”

**(ಡೆರಿಡ್ರಿ ಜೋರ್ಡನ್)**

ಇದು ಇನ್ನೊಂದು ಬಗೆಯ ದೃಷ್ಟಿಕೋನ, ಸಮಾಜವನ್ನು ರೂಪಿಸುವ ಸ್ವತಂತ್ರ ಶಕ್ತಿಗಳಲ್ಲಿ ಶಿಕ್ಷಣವೂ ಒಂದು ಎಂದು ಈ ಧೋರಣೆ ನಂಬುತ್ತದೆ.

ಭಾಷೆ, ಸಮಾಜ ಮತ್ತು ಶಿಕ್ಷಣಗಳ ಸಂಬಂಧವನ್ನು ಕುರಿತು ಈ ಎರಡು ಧೋರಣೆಗಳಿವೆ. ಸಮಾಜವೇ ಎಲ್ಲ ಬದಲಾವಣೆಗಳ ಮೂಲ ಕಾರಣವೆಂದೂ, ಸಮಾಜದ ಸ್ವರೂಪದಲ್ಲಿ ಬದಲಾವಣೆಯಾಗದೆ ಶಿಕ್ಷಣ ಕ್ರಮದಲ್ಲಿ ಬದಲಾವಣೆ ಸಾಧ್ಯವಿಲ್ಲವೆಂಬುದೂ ಒಂದು ಧೋರಣೆ. ಆರ್ಥಿಕತೆ ಮತ್ತು ಶೋಷಣೆ ಇತ್ಯಾದಿಗಳು ಹೇಗೆ ಒಂದು ಸಮಾಜದ ಸ್ವರೂಪವನ್ನು ತಿದ್ದುವ ಸ್ವತಂತ್ರ ಶಕ್ತಿಗಳೋ ಹಾಗೆಯೇ ಶಿಕ್ಷಣವೂ ಸ್ವತಂತ್ರವಾದ ಶಕ್ತಿ ಎಂಬುದು ಇನ್ನೊಂದು ಧೋರಣೆ. ಆಸ್ಟ್ರೇಲಿಯಾ, ಕೆನಡಾ, ಆಫ್ರಿಕಾ ಮುಂತಾದ

ಸಮಾಜಗಳಲ್ಲಿನ ಆದಿವಾಸಿಗಳನ್ನು ಪರಕೀಯ ಶಿಕ್ಷಣ ಕ್ರಮ ಹೇಗೆ ಸಾಂಸ್ಕೃತಿಕ ವಿನಾಶದತ್ತ ದೂಡಿತು ಎಂಬುದನ್ನು ಅನೇಕರು ಗುರುತಿಸಿದ್ದಾರೆ.

ಆಫ್ರಿಕೆಯ ವಿದ್ವಾಂಸ ಎಡ್ವರ್ಡ್ ಬಲೈಡೆನ್ ೧೮೭೨ರಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯವನ್ನು ನೋಡಿ: ಬ್ರಿಟಿಷ್ ಶಿಕ್ಷಣವನ್ನು ಇಂಗ್ಲಿಷಿನ ಮೂಲಕ ನೀಡುವುದೆಂದರೆ ಯಾವ ಪರಿಷ್ಕಾರಕ್ಕೂ ಒಳಪಡಿಸದೆ ಯುರೋಪಿಯನ್ ಶಿಕ್ಷಣವನ್ನು ನೀಡುವುದೇ ಆಗಿದೆ. ಈ ಮುಖಾಂತರ ಯುರೋಪಿಯನ್ನರು ನಮ್ಮ ಜನಾಂಗವನ್ನು ಹಿಂದಿನಕಾಲದ ಕಬ್ಬಿಣದ ಸರಪಳಿಗಳಿಗಿಂತ ಬಲಿಷ್ಠವಾದ ಬಂಧನಕ್ಕೆ ಗುರಿಪಡಿಸುತ್ತಿದ್ದಾರೆ. ಒಂದು ಶತಮಾನದ ನಂತರ ದೇಬಿ ಪಟ್ಟನಾಯಕರೂ ಇದೇ ಅಭಿಪ್ರಾಯವನ್ನು ಸೂಚಿಸುತ್ತಾರೆ: ಸಮಕಾಲೀನ ಭಾರತದಲ್ಲಿ "ಇಂಗ್ಲಿಷ್ ಎಂಬುದು ಬ್ರಿಟಿಷರ ಸಾಮ್ರಾಜ್ಯಶಾಹಿಯ ಮತ್ತು ಭಾರತೀಯರ ಬೌದ್ಧಿಕಗುಲಾಮಗಿರಿಯ ಪ್ರಮುಖ ಸಂಕೇತವಾಗಿದೆ."

ಹಾಗೆ ನೋಡಿದರೆ, ಜಗತ್ತಿನಾದ್ಯಂತ ಸ್ಥಳೀಯ ಸಂಸ್ಕೃತಿಗಳು ಮತ್ತು ವಲಸೆ ಬಂದ ಅಲ್ಪಸಂಖ್ಯಾತ ಗುಂಪುಗಳು ತಮ್ಮ ಶೈಕ್ಷಣಿಕ ಅನುಭವದ ಅಪಾಯಕಾರೀ ಆಯಾಮಗಳ ಬಗೆಗೆ ಖಚಿತ ನಿಲುವನ್ನು ತಳೆದಿರುವುದು ಕಾಣುತ್ತದೆ. ಅದರಲ್ಲೂ ಶಿಕ್ಷಣದ ಅನುಭವದಲ್ಲಿ ವಿದೇಶೀ ಶಿಕ್ಷಣ ಮಾಧ್ಯಮದ ಬಗ್ಗೆ ದೃಢವಾದ ಅಭಿಪ್ರಾಯಗಳಿವೆ. ನವಾಜೋ ಮಕ್ಕಳ ಶಿಕ್ಷಣದ ಬಗೆಗಿನ ಈ ಮಾತುಗಳನ್ನು ನೋಡಿ:

"ನವಾಜೋ ಮಕ್ಕಳಿಗೆ ವಿದೇಶೀ ಭಾಷೆಯ ಮೂಲಕ ಕಲಿಸಲಾಗುತ್ತಿದೆ. ಅವರಿಗೆ ಪರದೇಶೀಯವಾದ ಪರಿಕಲ್ಪನೆಗಳನ್ನು, ಪರದೇಶೀಯವಾದ ಮೌಲ್ಯಗಳನ್ನು, ಪರದೇಶೀಯವಾದ ಬದುಕಿನ ಶೈಲಿಗಳನ್ನು ಮತ್ತು ಪರದೇಶೀಯವಾದ ಮನುಷ್ಯತ್ವದ ಮಾದರಿಗಳನ್ನು ಕಲಿಸಲಾಗುತ್ತಿದೆ. ಇಂತಹ ಶಿಕ್ಷಣದ ಉದ್ದೇಶವಾದರೋ ಮಾತು, ಕ್ರಿಯೆ ಮತ್ತು ಆಲೋಚನೆಗಳ ಮುಖಾಂತರ ನವಾಜೋ ಮಕ್ಕಳನ್ನು ಆಂಗ್ಲೋ ಸಾಕ್ಸನ್ ಸಂಸ್ಕೃತಿಯ ಮುಖ್ಯಧಾರೆಗೆ ಹೊಂದಿಕೊಳ್ಳುವ ಸದಸ್ಯರಾಗುವಂತೆ ರೂಪಿಸುವುದೇ ಆಗಿದೆ. ಇಂಗ್ಲೀಷನ್ನು ಮಾತನಾಡದಿರುವ ಸ್ಥಳೀಯ ಜನಾಂಗಗಳು ಮನುಷ್ಯರೇ ಅಲ್ಲ, ಸ್ಪರ್ಧೆ ಮತ್ತು ಯಶಸ್ಸಿನ ಕಲ್ಪನೆಯನ್ನು ಆಧರಿಸಿದ ಬಂಡವಾಳಶಾಹೀ ಸಮಾಜದ ಮೌಲ್ಯಗಳಿಗೆ ಅನುಸಾರವಾಗಿ ವರ್ತಿಸದಿದ್ದರೆ, ಬದುಕದಿದ್ದರೆ, ಅದು ಬದುಕೇ ಅಲ್ಲ ಎಂಬಂತಹ ನಂಬಿಕೆಗಳು ಈ ಶಿಕ್ಷಣ ಪದ್ಧತಿಯ ಹಿಂದೆ ಕೆಲಸಮಾಡಿವೆ. ಇಂತಹ ಶಾಲೆಗಳಲ್ಲಿ ಬೆಳೆಯುವ ಮಕ್ಕಳಿಗೆ.

೧) ಮನೆಯಲ್ಲಿ ಕಲಿಸಲಾಗುವ ಮೌಲ್ಯ ಮತ್ತು ವರ್ತನೆಯ ವಿಧಾನಗಳಿಗೂ ಶಾಲೆಯಲ್ಲಿ ಹೇಳಿಕೊಡುವುದಕ್ಕೂ ವ್ಯತ್ಯಾಸಗಳು ಕಂಡು ಗೊಂದಲ ಹುಟ್ಟುತ್ತದೆ. ೨) ತಮ್ಮತನದ ಬಗೆಗೆ, ತಮ್ಮ ನೊವಾಜೋ–ತನದ ಬಗೆಗೆ ಕೀಳರಿಮೆ ಹುಟ್ಟುತ್ತದೆ. ೩) ಮಕ್ಕಳು ಶಾಲೆಯ ಚಟುವಟಿಕೆಗಳಲ್ಲಿ ಹಿಂದೆ ಬಿದ್ದು ವಿಫಲತೆಯನ್ನು ಅನುಭವಿಸಬೇಕಾಗುತ್ತದೆ. ೪) ನೊವಾಜೋ ಭಾಷೆಯು ಕಳೆದುಹೋಗುತ್ತದೆ ಹಾಗೂ ಆ ಮುಖಾಂತರ

ನೊವಾಜೋ ಸಂಸ್ಕೃತಿಯು ಆಳವಾದ ತಿಳುವಳಿಕೆ ನಷ್ಟವಾಗುತ್ತದೆ."

ಅನೇಕ ಅಲ್ಪಸಂಖ್ಯಾತ ಗುಂಪುಗಳಿಗೆ ಮಾತೃಭಾಷೆಯೆಂಬುದು ತಮ್ಮತನದ ಕಲ್ಪನೆಯ ಹೃದಯಸ್ಥಾನವಾಗಿರುತ್ತದೆ. ಮಾತೃಭಾಷೆಯು ಅವರ ಮುಖ್ಯ ಸಾಂಸ್ಕೃತಿಕ ಮೌಲ್ಯಗಳಲ್ಲೊಂದು ಮಾತ್ರವಲ್ಲ,ಅವರ ಜನಾಂಗದ ತಳಹದಿಯೇ ಆಗಿರುವ ಅತಿ ಮುಖ್ಯ ಸಂಗತಿಯಾಗಿರುತ್ತದೆ. ಮಾತೃಭಾಷೆಯನ್ನು ಕಳೆದುಕೊಂಡಾಗ ಅವರ ಸಾಂಸ್ಕೃತಿಕ ಚಹರೆಯೇ ಕಳೆದು ಹೋಗುತ್ತದೆ. ಆ ಜನಾಂಗದ ಆತ್ಮದ ಹತ್ಯೆಯಾಗುತ್ತದೆ. ಅನ್ಟಿ ಜಲಾವಾ ಒಬ್ಬ ಫಿನ್ನಿಶ್ ಲೇಖಕ.ಈಗ ಸ್ವೀಡನ್ನಿಗೆ ವಲಸೆ ಬಂದು ಅಲ್ಲಿ ನೆಲಸಿರುವವನು, ತನ್ನ ಬದುಕಿಗೆಂದು ಆತ ಫಿನ್ನಿಶ್ ಭಾಷೆ ಕಲಿಯಬೇಕಾಯಿತು. ಆತ ತನ್ನ ಬಗ್ಗೆ ಹೀಗೆ ಹೇಳಿಕೊಳ್ಳುತ್ತಾನೆ: "ನಾನು ಪರಿಸ್ಥಿತಿಯ ಒತ್ತಡದಿಂದ ಸ್ವೀಡಿಶ್ ಭಾಷೆಯಲ್ಲಿ ಬರೆಯಬೇಕಾಯಿತು. ಆದರೆ ಫಿನ್ನಿಶ್ ನನ್ನ ಮಾತೃಭಾಷೆ, ಫಿನ್ನಿಶ್ ನನ್ನ ದೇಹದ ಚರ್ಮ, ನಾನು ಉಸಿರಾಡುವ ಗಾಳಿ, ನನ್ನ ನೆಲದಲ್ಲಿ ಬೀಳುವ ಹಿಮ, ನನ್ನ ಕೋಪ, ನನ್ನ ದುಃಖ. ನನ್ನ ಆಳವಾದ ಗಾಯಗಳು ಮಾಯುವುದು ಫಿನ್ನಿಶ್ ಭಾಷೆಯಲ್ಲಿ, ನನ್ನ ಆಳವಾದ ಭಾವನೆಗಳು ರೂಪ ಪಡೆಯುವುದು ಫಿನ್ನಿಶ್ ಭಾಷೆಯಲ್ಲಿ, ನನ್ನ ಫಿನ್ನಿಶ್ ಭಾಷೆ ನನ್ನ ವ್ಯಕ್ತಿತ್ವದ ಬುನಾದಿಯಾಗಿದೆ."

ಮಾತೃಭಾಷೆ ಇಷ್ಟೊಂದು ಪ್ರಮುಖವಾದುದಾದರೆ, ಭಾಷೆಯೊಂದನ್ನು ಕೊಲ್ಲುವ ಮೂಲಕ ಜನಾಂಗವೊಂದನ್ನು ಕೊಲ್ಲಲು ಸಾಧ್ಯ ಎಂದು ನಾವು ಹೇಳಬಹುದು. ಅನ್ಯ ಭಾಷಾ ಶಿಕ್ಷಣ ಮಾಧ್ಯಮವು ಜನರ ಮಾತೃಭಾಷೆಯನ್ನು ಕೊಲ್ಲುತ್ತದೆಂದಾದರೆ, ಶಿಕ್ಷಣವು ಜನರನ್ನು ಕೊಲ್ಲುತ್ತದೆ ಎಂದು ಹೇಳಬಹುದು. ಹೀಗೆ ಬಹುಸಂಖ್ಯಾತರು ಆಡುವ ವಿದೇಶೀ ಭಾಷೆಯು ಜನ ಸಮುದಾಯದ ಆತ್ಮದ ಹತ್ಯೆಗೆ ಒಂದು ಪ್ರಮುಖ ಕಾರಣವಾಗುತ್ತದೆ—ಇದು ಮೊದಲನೆಯ ತಾತ್ಕಾಲಿಕ ನಿರ್ಣಯ.

ಆದರೆ ಬಾಸ್ಕ್ ಭಾಷೆಗೆ ಸಂಬಂಧಿಸಿದಂತೆ ಇರುವ ಪ್ರಶ್ನೆಯೆಂದರೆ ಭಾಷೆಯನ್ನು ಹೇಗೆ ಶಿಕ್ಷಣ ಕ್ರಮದ ಮೂಲಕ ಪುನರುಜ್ಜೀವಿಸಬಹುದು? ಶಿಕ್ಷಣ ಕ್ರಮವು ಭಾಷೆಯನ್ನು ಕೊಲ್ಲಬಲ್ಲುದು ಹೇಗೋ, ಹಾಗೆಯೇ ಬದುಕಿಸಲೂಬಹುದಲ್ಲವೆ? ಶಿಕ್ಷಣ ಕ್ರಮ ಬದಲಾಗುವುದಕ್ಕೆ ಸಮಾಜವು ಬದಲಾಗುವುದು ಅಗತ್ಯ ಎಂದು ಸುಮ್ಮನೆ ಕೂರುವ ಬದಲು ಸಮಾಜ ವ್ಯವಸ್ಥೆಯನ್ನೇ ಬದಲಿಸಲು ಪ್ರಚೋದನೆಯನ್ನು ಒದಗಿಸುವಂಥ ಪ್ರತಿ ವ್ಯವಸ್ಥೆಯನ್ನು ಶಿಕ್ಷಣ ಕ್ರಮದ ಮೂಲಕ ಅಸ್ತಿತ್ವಕ್ಕೆ ತರಲು ಸಾಧ್ಯವೆ? ಅಥವಾ ಲೇಖಕ ಗೂಗಿಯು ಶಿಕ್ಷಣ ವ್ಯವಸ್ಥೆಯ ಆಚೆಗೆ ನಿಂತು ತನ್ನ ಮಾತೃಭಾಷೆಯ ಮೌಲ್ಯದ ಬಗ್ಗೆ ವ್ಯಕ್ತಪಡಿಸುವಂತಹ ಪ್ರಜ್ಞೆಯನ್ನು ಶಿಕ್ಷಣ ಕ್ರಮದಲ್ಲೇ ತರಲು ಸಾಧ್ಯವೆ?

"ನಾನು ೧೯೭೭ರಲ್ಲಿ ಗಿಕುಯು ಭಾಷೆಯಲ್ಲಿ ಬರೆಯಲು ಶುರು ಮಾಡಿದೆ. ಸುಮಾರು ೧೭ ವರ್ಷಗಳ ಕಾಲ ನಾನು ಆಫ್ರೋ-ಯೂರೋಪಿಯನ್ ಸಾಹಿತ್ಯವಲ್ಲಿ ಕೃಷಿ ಮಾಡುತ್ತಿದ್ದೆ. ನನ್ನ

ಮಟ್ಟಿಗೆ ಅದು ಆಫ್ರೋ–ಇಂಗ್ಲಿಷ್ ಸಾಹಿತ್ಯವಷ್ಟೇ ಆಗಿತ್ತು. ವಿಶೇಷವಾಗಿ, ಯುರೋಪಿನಲ್ಲಿ ನಾನು ಎಲ್ಲೇ ಹೋಗಲಿ 'ನೀವೇಕೆ ಈಗ ಗಿಕುಯು ಭಾಷೆಯಲ್ಲಿ ಬರೆಯುತ್ತಿದ್ದೀರಿ? ಆಫ್ರಿಕನ್ ಭಾಷೆಯಲ್ಲಿ ಬರೆಯುತ್ತಿದ್ದೀರಿ?' ಎಂಬ ಪ್ರಶ್ನೆಗಳನ್ನು ಎದುರಿಸುತ್ತಿದ್ದೆ. ಶೈಕ್ಷಣಿಕ ವಲಯುಗಳಲ್ಲಿ ನನ್ನನ್ನು ಬೇಡಿಕೆಯ ದನಿಯಲ್ಲಿ ಕೇಳುತ್ತಿದ್ದರು: 'ನೀವೇಕೆ ಈಗ ನಮ್ಮನ್ನು ತೊರೆದುಬಿಟ್ಟಂತೆ ಕಾಣುತ್ತದಲ್ಲ?' ನಾನು ಗಿಕುಯು ಭಾಷೆಯಲ್ಲಿ ಬರೆಯುವ ಮೂಲಕ ಅಸಹಜವಾದದ್ದೇನನ್ನೋ ಮಾಡುತ್ತಿದ್ದೇನೆಂದು ಅವರೆಲ್ಲ ಭಾವಿಸಿದಂತಿತ್ತು. ಆದರೆ ಗಿಕುಯು ನನ್ನ ಮಾತೃಭಾಷೆ!....ಗಿಕುಯುದಲ್ಲಿ ಬರೆಯುವುದೆಂದರೆ, ಕೆನ್ಯನ್ ಭಾಷೆಯಲ್ಲಿ ಬರೆಯುವುದೆಂದರೆ, ಒಂದು ಆಫ್ರಿಕನ್ ಭಾಷೆಯಲ್ಲಿ ಬರೆಯುವುದೆಂದರೆ ಅದು ಕೆನ್ಯಾ ಮತ್ತು ಆಫ್ರಿಕಾದ ಜನ ಸಾಮ್ರಾಜ್ಯಶಾಹಿಯ ವಿರುದ್ಧ ಹೋರಾಡುತ್ತಿದ್ದಾರಲ್ಲ ಆ ಹೋರಾಟದ ಒಂದು ಭಾಗವಾಗುವ ಕೆಲಸ. ನಮ್ಮ ಶಾಲೆ ಮತ್ತು ವಿಶ್ವವಿದ್ಯಾಲಯಗಳಲ್ಲಿ ಕೆನ್ಯಾ ಭಾಷೆಗಳನ್ನು–ಕೆನ್ಯಾದಲ್ಲಿ ನೆಲಸಿರುವ ಅಸಂಖ್ಯಾತ ರಾಷ್ಟ್ರೀಯತೆಗಳು ಬಳಸುವ ಭಾಷೆಗಳನ್ನು–ಹಿಂದುಳಿದಿರುವಿಕೆಯ, ದೈನ್ಯದ, ಸಂಕೇತಗಳೆಂದೇ ಭಾವಿಸಲಾಗುತ್ತಿದೆ. ಕೆನ್ಯಾದ ಜನಸಮುದಾಯಗಳು ಚರಿತ್ರಯುದ್ದಕ್ಕೂ ಶ್ರಮವಹಿಸಿ ರೂಪಿಸಿಕೊಂಡಿರುವ ಸಂವಹನದ ಉಪಕರಣಗಳ ಬಗ್ಗೆ ಸಾಮ್ರಾಜ್ಯಶಾಹಿಯು ಹೇರಿರುವ ತಿರಸ್ಕಾರದ ಪರಂಪರೆಯಲ್ಲಿ ನಮ್ಮ ಮಕ್ಕಳು ಬೆಳೆಯುವುದು ನನಗಿಷ್ಟವಿಲ್ಲ."

ಈ ವಿಷಯದಲ್ಲಿ ನನಗಿರುವ ಅನುಭವದ ಸ್ವರೂಪ ಸ್ವಲ್ಪ ಬೇರೆಯಾದದ್ದು, ಬಾಸ್ಕ್‌ನಲ್ಲಿಯಾದರೋ ಬಾಸ್ಕ್ ಜನರು, ವಯಸ್ಕರು, ಮಕ್ಕಳು ಮತ್ತು ಸರಕಾರ ಹಾಗೂ ಬಾಸ್ಕ್ ಭಾಷೆಯನ್ನು ಆಡದ ಜನ ಕೂಡ ಆ ಭಾಷೆಯನ್ನು ಮತ್ತೆ ಜೀವಂತಗೊಳಿಸಬೇಕೆಂಬ, ಬಾಸ್ಕಿತನವು ಹೊಸ ಹುಟ್ಟನ್ನು ಪಡೆಯಬೇಕೆಂಬ ಹಂಬಲವನ್ನು ಹೊಂದಿದ್ದಾರೆ. ನಾನು ಕೆಲಸ ಮಾಡುವುದು ಸ್ವೀಡನ್ನಿನಲ್ಲಿ, ವಲಸೆಬಂದಿರುವ ಫಿನ್ನಿಶ್ ಅಲ್ಪಸಂಖ್ಯಾತರ ಶಾಲೆಗಳಲ್ಲಿ, ಇಡೀ ಸ್ಕಾಂಡಿನೇವಿಯಾದಲ್ಲಿರುವ ವಲಸೆಗಾರ ಗುಂಪುಗಳಲ್ಲಿ ಫಿನ್ನಿಶ್‌ರವೇ ದೊಡ್ಡ ಗುಂಪು, ಆದರೆ ಅಲ್ಲಿನ ಸರಕಾರೀ ಅಧಿಕಾರಿಗಳು (ಅವರು ಕೇಂದ್ರ ಸರಕಾರದವರೂ ಹೌದು. ಸ್ಥಳೀಯ ಅಧಿಕಾರಿಗಳೂ ಹೌದು) ಮತ್ತು ಹೆಚ್ಚಿನ ಸಂಖ್ಯೆಯ ಅಧ್ಯಾಪಕರು, ಫಿನ್ನಿಶ್ ಜನರು ಫಿನ್ನಿಶ್ ಭಾಷಾ ಶಿಕ್ಷಣ ಪಡೆಯುವುದರ ವಿರುದ್ಧಾಭಿಪ್ರಾಯ ಹೊಂದಿದ್ದಾರೆ. ಅಲ್ಪಸಂಖ್ಯಾತರ ಮಾತೃಭಾಷೆಗಳ ಬಗೆಗೆ ರೋಚಕವಾಗಿ ಆಡುವ ಮಾತುಗಳಿಗೇನೂ ಕೊರತೆಯಿಲ್ಲ. ಆದರೆ ತೀರ ಕನಿಷ್ಠ ಪ್ರಮಾಣದಲ್ಲಾದರೂ ಫಿನ್ನಿಶ್ ಮಾಧ್ಯಮ ಶಿಕ್ಷಣ ಪಡೆಯಲು ಮುಷ್ಕರಗಳನ್ನು ನಡೆಸಬೇಕಾದ ಪರಿಸ್ಥಿತಿ ಇದೆ. ವಲಸೆಗಾರ ಕೂಲಿ ಕಾರ್ಮಿಕರಾಗಿರುವ ಫಿನ್ನಿಶ್ ಜನರಿಗೆ ಈ ಪರಿಸ್ಥಿತಿಯನ್ನು ಸುಧಾರಿಸಲು ಬೇಕಾದ ಅಧಿಕಾರಬಲವಿಲ್ಲ. ಅಂದರೆ ಅವರು ಇರುವ ಸಾಮಾಜಿಕ ಸ್ಥಿತಿ ಬದಲಾವಣೆಯಾಗಬೇಕಾದರೆ ಶಿಕ್ಷಣ ಒಂದು ಪ್ರಬಲ ಆಯುಧವಾಗಬೇಕಾಗಿದೆ. ಅವರು ತಾವು

ಯಾರು, ತಮ್ಮ ಪರಿಸ್ಥಿತಿ ಏಕೆ ಹೀಗಿದೆ, ತಾವು ಇದನ್ನು ಹೇಗೆ ಬದಲಾಯಿಸಿಕೊಳ್ಳ ಬಹುದು ಎಂಬುದನ್ನು ತಿಳಿಯಬೇಕಾಗಿದೆ. ಇಂಥ ವಿಶ್ಲೇಷಣೆಗೆ ಜ್ಞಾನ ಬೇಕು. ಆ ಜ್ಞಾನವನ್ನು ಸಂಪಾದಿಸಲು ಪ್ರಷ್ಟವಾಗಿ ಬೆಳೆದ ಭಾಷೆ ಬೇಕು. ಇವೆರಡೂ ಅವರಿಗೆ ಮಾತೃಭಾಷಾಮಾಧ್ಯಮದ ಮುಖಾಂತರ ನೀಡುವ ಶಿಕ್ಷಣದಿಂದ ಮಾತ್ರ ಸಿಗುವುದು ಸಾಧ್ಯ. (ಆದ್ದರಿಂದ, ಸಾಮಾಜಿಕ ಬದಲಾವಣೆಗೆ ಅಗತ್ಯವಾದ ಎಚ್ಚರವನ್ನು ಹುಟ್ಟಿಸಲು, ಅಗತ್ಯವಾದ ಜ್ಞಾನವನ್ನು ನೀಡಲು, ಮೊದಲು ಶಿಕ್ಷಣ ಕ್ರಮದಲ್ಲಿ, ಶಿಕ್ಷಣ ಮಾಧ್ಯಮದಲ್ಲಿ ಬದಲಾವಣೆಗಳು ಉಂಟಾಗಬೇಕು. ಮಾತೃಭಾಷೆಯ ಹಕ್ಕು ಮಾನವ ಹಕ್ಕುಗಳಲ್ಲಿ ಒಂದಾಗಬೇಕು.) ಇದು ಎರಡನೆಯ ತಾತ್ಕಾಲಿಕ ನಿರ್ಣಯ.

ಕೊಲೆಯಾಗಲಿರುವ ಭಾಷೆಗಳು ಎದುರಿಸುವ ಅಪಾಯಗಳಿಗೂ, ಮರುಹುಟ್ಟು ಪಡೆಯಲು ಬಯಸುತ್ತಿರುವ ಭಾಷೆಗಳು ಎದುರಿಸುವ ಸಮಸ್ಯೆಗಳಿಗೂ ವ್ಯತ್ಯಾಸಗಳಿವೆ. ನಾನು ಕೆಲಸ ಮಾಡುತ್ತಿರುವ ಜಾಗದಲ್ಲಿ ಫಿನ್ನಿಶ್ ಮಕ್ಕಳು ಎದುರಿಸುತ್ತಿರುವ ಅಪಾಯ ಗಳಿವೆಯಲ್ಲ, ಅವು ಜಗತ್ತಿನಾದ್ಯಂತ ಅಲ್ಪಸಂಖ್ಯಾತ ಮಕ್ಕಳು ಎದುರಿಸುತ್ತಿರುವ ಅಪಾಯ ಗಳು. ಅವರಿಗೆ "ವೈಯಕ್ತಿಕ (ಶೈಕ್ಷಣಿಕ) ಭಾಷಿಕ" ಹಕ್ಕುಗಳಿರಬೇಕು. ಈಗಿರುವಂತೆ ಸಾಮೂಹಿಕ ಹಕ್ಕುಗಳು ಮಾತೃಭಾಷಾ ಶಿಕ್ಷಣಕ್ಕೆ ಹೆಚ್ಚಿನ ಸಹಾಯ ಮಾಡುವುದಿಲ್ಲ, ಮರುಹುಟ್ಟು ಪಡೆಯುತ್ತಿರುವ ಸಮೂಹಗಳು ಸ್ವಲ್ಪಮಟ್ಟಿಗಾದರೂ ವೈಯುಕ್ತಿಕ ಹಕ್ಕು ಗಳನ್ನು ಪಡೆದುಕೊಂಡಿರುತ್ತಾರೆ. ಆದರೆ ಅವುಗಳನ್ನು ಬಳಸುವುದು ಹೇಗೆಂದು ಅವರಿಗೆ ತಿಳಿದಿರುವುದಿಲ್ಲ. ಅವರಿಗೆ ಬೇರೆಯದೇ ರೀತಿಯ "ವೈಯಕ್ತಿಕ ಮತ್ತು ಸಾಮೂಹಿಕ ಹಕ್ಕುಗಳ ಸಂಯೋಜನೆ" ಅಗತ್ಯವಾಗುತ್ತದೆ. ಇದು ಮೂರನೆಯ ತಾತ್ಕಾಲಿಕ ತೀರ್ಮಾನ.

ಈ ಬೇರೆ ಬೇರೆ ಪರಿಸ್ಥಿತಿಗಳಲ್ಲಿ ಭಾಷೆಗಳನ್ನು ಕಾಪಾಡುವುದು ಹೇಗೆ ಎಂಬುದು ನಮಗೆ ಸ್ಪಷ್ಟವಾಗಬೇಕಾದರೆ ನಾವು ಶಿಕ್ಷಣ ಕ್ರಮದಲ್ಲಿ "ಭಾಷಿಕ ಮಾನವ ಹಕ್ಕು"ಗಳನ್ನು ಪರಿಗಣಿಸಲೇಬೇಕು. ಈ ಪರಿಗಣನೆಯಲ್ಲಿ "ವ್ಯಕ್ತಿಯ ಮಾತೃಭಾಷೆ ಮತ್ತು ಸಮೂಹದ ಮಾತೃಭಾಷೆಗಳ ಭಿನ್ನ ವ್ಯಾಖ್ಯಾನಗಳು, ಲಕ್ಷಣಗಳು" ಯಾವುವು ಎಂದು ಪರಿಶೀಲಿಸ ಬೇಕು. ಏಕೆಂದರೆ ಮಾತೃಭಾಷೆಯೇ ಭಾಷಿಕ ಹಕ್ಕುಗಳ ತಳಹದಿಯಾಗಿರುತ್ತದೆ. ಹಕ್ಕು ಗಳನ್ನು ಸಂಪಾದಿಸುವುದೆಂದರೆ ಅಧಿಕಾರವನ್ನು ಸಂಪಾದಿಸುವುದೆಂದೇ ಅರ್ಥ. ಆದ್ದರಿಂದ "ಶೈಕ್ಷಣಿಕ-ಭಾಷಾ ಸಂಬಂಧಿತ ಯೋಜನೆಗಳಿಗೂ, ಸಾಮಾಜಿಕ ಅಧಿಕಾರ ವಿನ್ಯಾಸಗಳಿಗೂ" ಇರುವ ಸಂಬಂಧವನ್ನು ಮುಖ್ಯವಾಗಿ ಗಣಿಸಬೇಕಾಗುತ್ತದೆ. ಈ ಕೆಲಸವನ್ನು ಮಾಡಲು ಭಾಷೆಗಳು ಹೇಗೆ ಶ್ರೇಣೀಕರಣಕ್ಕೆ ಒಳಗಾಗುತ್ತವೆ, ಹೇಗೆ ಕೊಲೆ ಯಾಗುತ್ತವೆ ಎಂಬುದರ ತಾತ್ವಿಕತೆಯನ್ನು ಅರಿಯುವುದು ಅಗತ್ಯವಾಗುತ್ತದೆ. ಇದು ಭಾಷಾದ್ವೇಷದ (Linguicism) ಧೋರಣೆ.

## ೨. ಭಾಷಿಕ ಮಾನವ ಹಕ್ಕುಗಳು

ಭಾಷೆಗೆ ಸಂಬಂಧಿಸಿದ ನಿರ್ದಿಷ್ಟ ಕಾನೂನುಗಳ ಮುಖಾಂತರ ಭಾಷೆಗಳ ಸಮಾನತೆಯನ್ನು ಪೋಷಿಸಬಹುದು ಅಥವಾ ವಿರೋಧಿಸಬಹುದು. ಭಾಷೆಗಳಿಗೆ ಸಂಬಂಧಿಸಿದ ಮುಖ್ಯ ಕಾನೂನೆಂದರೆ ಮಾನವ ಹಕ್ಕುಗಳ ಕಾನೂನು.

ಮಾನವ ಹಕ್ಕುಗಳನ್ನು ಸಾಮಾನ್ಯವಾಗಿ "ಮೂರು ಭಿನ್ನ ತಲೆಮಾರು"ಗಳಿಗೆ ಸೇರಿದವುಗಳೆಂಬಂತೆ ಚರ್ಚಿಸುವ ವಾಡಿಕೆಯಿದೆ. ಈ ಕಲ್ಪನೆಯನ್ನು ಯುನೆಸ್ಕೋದ ಮಾನವಹಕ್ಕುಗಳು ಮತ್ತು ಶಾಂತಿಯ ವಿಭಾಗದ ನಿರ್ದೇಶಕನಾಗಿದ್ದ ಕಾರೆಲ್ ವಾಸಕ್ ಮೊದಲು ಬಳಕೆಗೆ ತಂದ. ನಾಗರಿಕ ಮತ್ತು ರಾಜಕೀಯ ಹಕ್ಕುಗಳನ್ನು ಮೊದಲ ತಲೆಮಾರಿನ ಮಾನವ ಹಕ್ಕುಗಳೆಂದೂ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳನ್ನು ಎರಡನೆಯ ತಲೆಮಾರಿನ ಹಕ್ಕುಗಳೆಂದೂ, ಐಕ್ಯತೆಯ ಹಕ್ಕುಗಳನ್ನು (ಅಭಿವೃದ್ಧಿ ಮತ್ತು ಶಾಂತಿಯ ಹಕ್ಕು) ಮೂರನೆಯ ತಲೆಮಾರಿನ ಹಕ್ಕುಗಳೆಂದೂ ಗುರುತಿಸಲಾಗುತ್ತಿದೆ. ಮೊದಲೆರಡು ತಲೆಮಾರಿನ ಹಕ್ಕುಗಳು ಮುಖ್ಯವಾಗಿ ವೈಯಕ್ತಿಕ ಹಕ್ಕುಗಳು. ಮೂರನೆಯ ತಲೆಮಾರಿನ ಹಕ್ಕುಗಳನ್ನು ಅಂಗೀಕರಿಸುವ ಮೊದಲು ಸುದೀರ್ಘ ಚರ್ಚೆ ನಡೆಯಿತು. ವೈಯಕ್ತಿಕ ಹಕ್ಕುಗಳಿಗೂ ಗುಂಪಿನ ಹಕ್ಕುಗಳಿಗೂ ಇರಬೇಕಾದ ಸಂಬಂಧ ಈ ಚರ್ಚೆಯ ವಿಷಯವಾಗಿತ್ತು. ಗುಂಪಿನ ಹಕ್ಕುಗಳೆಂದರೆ ರಾಜ್ಯ–ರಾಷ್ಟ್ರಕರು ಮುಂತಾದ "ಅಮೂರ್ತ" ಹಕ್ಕುಗಳು. ಅಭಿವೃದ್ಧಿಯ ಹಕ್ಕನ್ನು ಒಪ್ಪಿಕೊಂಡರೆ ಗುಂಪಿನ ಹಕ್ಕುಗಳಿಗೆ ಪ್ರಾಧಾನ್ಯ ಸಿಕ್ಕಿ ವೈಯಕ್ತಿಕ ಹಕ್ಕುಗಳಿಗೆ ಧಕ್ಕೆ ಬರುತ್ತದೆಂದು ಅನೇಕ ಪಾಶ್ಚಾತ್ಯ ರಾಷ್ಟ್ರಗಳು ಭಾವಿಸಿದವು. ಒಂದು ಇಡೀ ರಾಜ್ಯ ಅಥವ ರಾಷ್ಟ್ರಕ್ಕೆ ಹಿತವಾಗುವಂಥ ಹಕ್ಕುಗಳಿಗೆ ಪ್ರಾಮುಖ್ಯ ನೀಡುವ ನೆಪದಲ್ಲಿ ವೈಯಕ್ತಿಕ ಹಕ್ಕುಗಳು ಮೂಲೆಗುಂಪಾಗಬಹುದೆಂದು ಭಾವಿಸಲಾಯಿತು.

ಭಾಷಿಕ ಹಕ್ಕುಗಳು ಈ ಮೂರೂ ತಲೆಮಾರಿನ ಮಾನವ ಹಕ್ಕುಗಳಿಗೆ ಸಂಬಂಧಿಸಿವೆ ಮತ್ತು ಸಂಬಂಧಿಸಿರಲೇಬೇಕು. ಆದರೆ ವೈಯಕ್ತಿಕ ಮತ್ತು ಸಾಮುದಾಯಿಕ ಹಕ್ಕುಗಳನ್ನು ಸಂಯೋಜಿಸಿರುವ ಮೂರನೆಯ ತಲೆಮಾರಿನ ಮಾನವ ಹಕ್ಕುಗಳಲ್ಲಿ ಮಾತ್ರ ವೈಯಕ್ತಿಕ ಮತ್ತು ಸಾಮುದಾಯಿಕ ಮಾತೃಭಾಷೆಗಳನ್ನು ಅಭಿವೃದ್ಧಿಪಡಿಸುವಂತಹ ಅವಕಾಶಗಳಿವೆ ಎಂದು ನಾನು ತಿಳಿದಿದ್ದೇನೆ. ಏಕೆಂದರೆ ಶೈಕ್ಷಣಿಕ ಭಾಷೆಯ ಹಕ್ಕುಗಳನ್ನು ಇದುವರೆಗೂ ಯಾವುದೇ ಅಂತಾರಾಷ್ಟ್ರೀಯ ಸಮ್ಮೇಳನಗಳಲ್ಲಿ ಸ್ಪಷ್ಟವಾಗಿ ರೂಪಿಸಿ ಘೋಷಿಸಲಾಗಿಲ್ಲ. ಶೈಕ್ಷಣಿಕ ಭಾಷೆಯನ್ನು ಕುರಿತ ಅಂತಾರಾಷ್ಟ್ರೀಯ ಚರ್ಚೆಗಳಲ್ಲಿ ಪರಿಕಲ್ಪನೆಯ ಗೊಂದಲಗಳು, ಅಸ್ಪಷ್ಟತೆಗಳು ತುಂಬಿವೆ. ವ್ಯಕ್ತಿ ಮತ್ತು ಸಮುದಾಯಗಳು ತಮ್ಮ ಮಾತೃಭಾಷೆಯನ್ನು ಉಳಿಸಿ ಬೆಳೆಸಿಕೊಳ್ಳಲು ಅನುಕೂಲವಾಗುವಂತೆ ಮೂಲಭೂತ ಪರಿಕಲ್ಪನೆಗಳನ್ನು ಸ್ಪಷ್ಟಗೊಳಿಸುವುದು ಸಂಶೋಧಕರ ಜವಾಬ್ದಾರಿಯಾಗಿದೆ. ಮಾತೃಭಾಷೆಯ ಬೆಳವಣಿಗೆಯು ಶಾಲಾವ್ಯವಸ್ಥೆಯೊಳಗೇ ಬಹುಪಾಲು ಸಂಭವಿಸುವುದರಿಂದ ಯಾವ ಬಗೆಯ ಶೈಕ್ಷಣಿಕ

ಹಕ್ಕುಗಳಿಂದ ಮಾತೃಭಾಷೆ ಉಳಿಯಬಹುದು ಅಥವಾ ಯಾವ ಬಗೆಯ ಹಕ್ಕುಗಳಿಂದ ಮಾತೃಭಾಷೆಯು ಹತ್ತಿ ನಡೆಯಬಹುದು ಎಂಬುದನ್ನೂ ಸ್ಪಷ್ಟವಾಗಿ ತಿಳಿಯಬೇಕಾಗುತ್ತದೆ.

ಈ ವಿಷಯವನ್ನು ಸ್ಪಷ್ಟಗೊಳಿಸಿಕೊಳ್ಳಲು ಅಗತ್ಯವಾದ ಕೆಲವು ಮುಖ್ಯ ಸಂಗತಿಗಳನ್ನು ಗುರುತಿಸಿಕೊಳ್ಳಲು, ನನ್ನ ಪತಿ ಹಾಗೂ ಸಹೋದ್ಯೋಗಿ ರಾಬರ್ಟ್ ಫಿಲಿಪ್ಸನ್ ಮತ್ತು ನಾನು ಒಂದು ಕೋಷ್ಟಕವನ್ನು ರಚಿಸಿದ್ದೇವೆ. ಇದು ಭಾಷಿಕ ಹಕ್ಕುಗಳ ಕೆಲವು ಮುಖ್ಯ ಆಯಾಮಗಳನ್ನು ಗುರುತಿಸಲು ಸಹಾಯಮಾಡುತ್ತದೆ

ಚಿತ್ರ ೧. Degrees of overtness and promotion vis–a- vis Minority languages

**ಅಲ್ಪಸಂಖ್ಯಾತರ ಭಾಷೆಗಳನ್ನು ಕುರಿತಂತೆ ಪ್ರಕಟ-ಪ್ರತಿರೋಧ ಮತ್ತು ಪ್ರಚೋದನೆಯ ಮಟ್ಟಗಳು**

| ಅಳಿಸುವ ದೃಷ್ಟಿಯಿಂದ ಪ್ರೇರಿತ<br>Assmilation Oriented | | | | ಉಳಿಸುವ ದೃಷ್ಟಿಯಿಂದ ಪ್ರೇರಿತ<br>Maintenance Oriented |
|---|---|---|---|---|
| | | **ಪ್ರಕಟ**<br>Overt | | |
| **ನಿಷೇಧ**<br>(Prohibition) | ಸಹನೆ<br>(=ಅನಿಷಿದ್ಧ)<br>(Toleration) | ಭೇದವಿಲ್ಲದಿರುವಿಕೆಯ ನಿಯಾಮಕಗಳು<br>(Non-Discriminative Prescription) | ಅನುಮತಿ<br>(Permission) | ಕುಮ್ಮಕ್ಕು<br>(Promotion) |
| | | **ಅಪ್ರಕಟ**<br>Covert | | |

ಸಶಕ್ತ ಸಮಾಜವೊಂದರಲ್ಲಿ ಅಲ್ಪಸಂಖ್ಯಾತರ ಭಾಷೆ ಅಳಿಸಿ ಹೋಗುವ ಅಥವಾ ಕರಗಿಹೋಗುವ, ಇಲ್ಲವೇ ಉಳಿದುಕೊಳ್ಳುವ ಕ್ರಿಯೆಯನ್ನು ರಾಜ್ಯದ ಕಾನೂನು ಅಥವಾ ಅಧ್ಯಾದೇಶಗಳು ನಿಯಂತ್ರಿಸಲಾರವು. ರಾಜ್ಯಶಕ್ತಿಯು ಏನಿದ್ದರೂ ಭಾಷೆಯೊಂದು ಉಳಿದು ಬೆಳೆಯಲು ಸೂಕ್ತವಾದ ವಾತಾವರಣವನ್ನು ಕಲ್ಪಿಸಬಹುದು ಅಥವಾ ಭಾಷೆಯ ಬಳಕೆ ಮತ್ತು ಬೆಳವಣಿಗೆಗೆ ಪ್ರತಿರೋಧಗಳನ್ನು ಒಡ್ಡಬಹುದು. ಆದ್ದರಿಂದ ನಾವು ಭಾಷೆಯ ಅಳಿಯುವಿಕೆ ಅಥವ ಉಳಿಯುವಿಕೆಯನ್ನು ಅಂತಿಮ ಗುರಿ ಅಥವಾ ಫಲಿತಾಂಶವೆಂದು ಭಾವಿಸಿದ್ದೇವೆ. ಈ ಎರಡರಲ್ಲಿ ಯಾವುದೇ ಒಂದು ಸಂಭವಿಸಬೇಕಾದರೂ ಕೆಲವು ಬಗೆಯ ಹಕ್ಕುಗಳು ಅಥವ ಹಕ್ಕುಗಳ ಅಭಾವ ಕಾರಣವಾಗಿರುತ್ತದೆ. ಅಲ್ಪಸಂಖ್ಯಾತರ ಭಾಷೆಗಳಿಗೆ ಸಂಬಂಧಿಸಿದಂತೆ ಕಾನೂನುಗಳು ಮತ್ತು ಆದೇಶಗಳು ತೀರ ಪ್ರಕಟರೂಪದಲ್ಲಿರಬಹುದು (Overt). ಅಲ್ಪಸಂಖ್ಯಾತರ ಭಾಷೆಗಳು

ಅಥವಾ ಇಂಗ್ಲೀಷೇ ಶಿಕ್ಷಣದ ಪ್ರಮುಖ ಮಾಧ್ಯಮವಾಗಿರುವ ಝಾಂಬಿಯಾದ ಆಫ್ರಿಕನ್ ಭಾಷೆಗಳಂಥವನ್ನು ಶಾಲಾ ಕಾನೂನುಗಳಲ್ಲಿ ಹೆಸರಿಸದೆಯೇ ಇರಬಹುದು ಬಹುಸಂಖ್ಯಾತರ ಭಾಷೆಯ ಬಗ್ಗೆ ಅಥವಾ ಭಾಷೆಯ ಸಾಮಾನ್ಯ ಸ್ವರೂಪದ ಬಗ್ಗೆ ಹೇಳಲಾಗುವ ಮಾತುಗಳಿಂದ ಅಲ್ಪಸಂಖ್ಯಾತರು ತಮ್ಮ ಭಾಷೆಗಳ ಬಗೆಗೆ ಹೊಂದಿರುವ ಹಕ್ಕುಗಳನ್ನು ಪರೋಕ್ಷವಾಗಿಯೂ ಊಹಿಸಬಹುದು. ಶಾಲಾಶಿಕ್ಷಣದ ವಿವಿಧ ಮಟ್ಟಗಳಲ್ಲಿ ಭಾಷೆಯೊಂದನ್ನು ವಾರಕ್ಕೆ ಎಷ್ಟು ಗಂಟೆಗಳ ಕಾಲ ಕಲಿಸಲು ಅವಕಾಶವನ್ನೊದಗಿಸಲಾಗಿದೆ ಎಂಬುದನ್ನು ಗುರುತಿಸಿಕೊಂಡರೆ ಭಾಷೆಯನ್ನು ಕುರಿತಂತೆ ಇರುವ ಪ್ರಕಟ ಧೋರಣೆಗಳ ಬಿಂದುವಿಗೆ ಹತ್ತಿರದಲ್ಲಿರುತ್ತೇವೆ.

ಯುರೋಪಿನಲ್ಲಿ ನಡೆದಿರುವ ಅಸಂಖ್ಯಾತ ಸಮ್ಮೇಳನಗಳಲ್ಲಿ ಅಂಗೀಕಾರಗೊಂಡಿರುವ ಠರಾವುಗಳನ್ನು ಗಮನಿಸಿದರೆ ಅವು ಯಾವುವೂ ಮಾತೃಭಾಷೆಯ ಉಳಿಕೆಯನ್ನು ಗಮನದಲ್ಲಿಟ್ಟುಕೊಂಡಿಲ್ಲವೆಂಬ ಸಂಗತಿ ಗೋಚರಿಸುತ್ತದೆ. ಉದಾಹರಣೆಗೆ: Charter of the United Nations, 1945; The Universal Declaration of Human Rights. 1948; The UN-declaration of Children's Rights, 1959; The Council of Europe Convention for The Protection of Human Rights and Fundamental Freedoms, 1950 ಇತ್ಯಾದಿ. ಇವುಗಳೆಲ್ಲವೂ ಹೆಚ್ಚೆಂದರೆ ಪ್ರಕಟವಾಗಿ ಭಾಷಾಭೇದ ನೀತಿಯನ್ನು ಹೇಳುವುದಿಲ್ಲ ಅಷ್ಟೆ. ನಿಜವಾಗಿ ಈ ಎಲ್ಲ ಠರಾವುಗಳು ಅಲ್ಪಸಂಖ್ಯಾತರ ಮಾತೃಭಾಷೆಗಳನ್ನು ಅಪ್ರಕಟವಾಗಿ ಸಹಿಸುವುದಷ್ಟನ್ನೇ ಬಯಸುತ್ತವೆ. ಪ್ರಕಟವಾಗಿ ಭಾಷಾಬಳಕೆಗೆ ಅನುಮತಿ ನೀಡುವುದು ಕೂಡ ಸಮರ್ಪಕ ಪರಿಹಾರವಾಗುವುದಿಲ್ಲ. ಅಲ್ಪಸಂಖ್ಯಾತರ ಮಾತೃಭಾಷೆಗಳಿಗೆ ಅಥವಾ ಬಹುಸಂಖ್ಯಾತ ದುರ್ಬಲ ಜನರ ಮಾತೃಭಾಷೆಗಳಿಗೆ ನೇರವಾಗಿ ಕುಮ್ಮಕ್ಕು ನೀಡುವುದು ಅಗತ್ಯವಾಗುತ್ತದೆ. ಮಾತೃಭಾಷಾ ಮಾಧ್ಯಮದ ಶಾಲೆಗಳಿಗೆ ವಿಶೇಷ ಹಣಕಾಸಿನ ನೆರವು ನೀಡುವುದು ಒಂದು ಮುಖ್ಯವಾದ ಕ್ರಮವಾಗುತ್ತದೆ. ಆದರೆ ಯಾವ ಅಂತಾರಾಷ್ಟ್ರೀಯ ಸಮ್ಮೇಳನವೂ ಅಲ್ಪಸಂಖ್ಯಾತ ಗುಂಪುಗಳಿಗೆ ಈ ಭರವಸೆಯನ್ನು ನೀಡುವುದಿಲ್ಲ.

ಶಿಕ್ಷಣದಲ್ಲಿ ಮತ್ತು ಇತರೆಡೆಗಳಲ್ಲಿ ಅಲ್ಪಸಂಖ್ಯಾತರ ಮಾತೃಭಾಷೆಯನ್ನು ಬಳಸುವ ಮಗುವಿನ ವಿರುದ್ಧ ಭೇದಭಾವ ಆಚರಣೆ ನಿಲ್ಲಬೇಕಾದರೆ ಭಾಷೆಯ ಉಳಿಸುವಿಕೆಯ ಧೋರಣೆಯಿಂದ ರೂಪಿಸಲಾದ ಕಾನೂನುಗಳ ಅಗತ್ಯವಿದೆ. ಇಂಥ ಕಾನೂನು ಜಾರಿಗೆ ಬರಲು ಮಗುವಿಗೆ ಇರುವ ಭಾಷಿಕ ಮಾನವ ಹಕ್ಕಿನ ಕಲ್ಪನೆ ಮೊದಲು ಮೂಡಬೇಕಾಗಿದೆ...

ಈ ಬಗ್ಗೆ ನನ್ನ ಕರಡು ಘೋಷಣೆ ಹೀಗಿದೆ:

**ಮಗುವಿನ ಭಾಷಿಕ ಮಾನವ ಹಕ್ಕುಗಳ ಘೋಷಣೆ**
(The Declaration of Children's Linguistic Human Rights)

೧. ಪ್ರತಿಯೊಂದು ಮಗುವಿಗೂ ತನ್ನ ಮೂಲ ಮಾತೃಭಾಷೆಯನ್ನು (ಗಳನ್ನು) ತಾನೇ ಗುರುತಿಸಿಕೊಳ್ಳುವ ಹಕ್ಕು ಇರುತ್ತದೆ ಮತ್ತು ಅದನ್ನು ಇತರರೆಲ್ಲರೂ ಒಪ್ಪಿ ಗೌರವಿಸಬೇಕು.

೨. ಪ್ರತಿಯೊಂದು ಮಗುವಿಗೂ ತನ್ನ ಮಾತೃಭಾಷೆಯನ್ನು (ಗಳನ್ನು) ಸಂಪೂರ್ಣವಾಗಿ ಕಲಿಯುವ ಹಕ್ಕು ಇರುತ್ತದೆ.

೩. ಯಾವುದೇ ಮತ್ತು ಎಲ್ಲ ಸಂದರ್ಭಗಳಲ್ಲಿ ತನ್ನ ಮಾತೃಭಾಷೆಯನ್ನು ಬಳಸುವ ಹಕ್ಕು ಪ್ರತಿಯೊಂದು ಮಗುವಿಗೂ ಇರುತ್ತದೆ.

**೩. ಮಾತೃಭಾಷೆ: ಲಕ್ಷಣ ನಿರೂಪಣೆ ಮತ್ತು ಭಾಷಿಕ ಹಕ್ಕುಗಳ ಎಚ್ಚರ**
(Mother Tongue: Definitions and Linguistic Rights Awareness)

ಅನೇಕ ಘೋಷಣೆಗಳಲ್ಲಿ "ಮಾತೃಭಾಷೆ" ಎಂಬ ಮಾತನ್ನು ಬಳಸಿರುವುದು ಕಾಣುತ್ತದೆ. ಇದು ಬಹಳ ಮುಖ್ಯವಾದ ಒಂದು ಪರಿಕಲ್ಪನೆ. ಇದರ ಲಕ್ಷಣ ನಿರೂಪಣೆಯನ್ನು ಮಾಡಿಕೊಳ್ಳುವುದು ಅಗತ್ಯವಾಗಿದೆ. ವ್ಯಕ್ತಿಯೊಬ್ಬನ ಮಾತೃಭಾಷೆಯನ್ನು ಗುರುತಿಸಲು ಮತ್ತು ದ್ವಿಭಾಷಿಕತೆಯ(Bilingualism)ಸ್ವರೂಪವನ್ನು ತಿಳಿಯಲು ನಾನು ಮೂಲ (Origin) ನಿಯೋಗ (Function) ಸಾಮರ್ಥ್ಯ (Competence) ಮತ್ತು ಆಂತರಿಕ ಹಾಗೂ ಬಾಹ್ಯ ಚಹರೆ (Internal and External Identification) ಎಂಬ ತತ್ವಗಳನ್ನು ಆಧರಿಸಿದ್ದೇನೆ.

**ಕೋಷ್ಟಕ-೧**

| ತತ್ವ (Criterion) | ಲಕ್ಷಣ ನಿರೂಪಣೆ (Definition) |
|---|---|
| ಮೂಲ (Origin) | ವ್ಯಕ್ತಿಯು ಮೊದಲು ಕಲಿತ ಭಾಷೆ(ಗಳು) (The language(s) one learned first) |
| ಸಾಮರ್ಥ್ಯ (Competence) | ವ್ಯಕ್ತಿಯೊಬ್ಬ ಅತ್ಯಂತ ಚೆನ್ನಾಗಿ ತಿಳಿದ ಭಾಷೆ(ಗಳು) (The language(s) one knows best) |
| ನಿಯೋಗ (Function) | ವ್ಯಕ್ತಿಯೊಬ್ಬ ಅತಿ ಹೆಚ್ಚು ಬಳಸುವ ಭಾಷೆ(ಗಳು) (The language(s) one uses most) |
| ಚಹರೆ (Identification) | ವ್ಯಕ್ತಿಯೊಬ್ಬ ತಾನು ಯಾವ ಭಾಷೆಯೊಂದಿಗೆ (ಗಳೊಂದಿಗೆ) ಗುರುತಿಸಿಕೊಳ್ಳುತ್ತಾನೋ ಅದು (The language(s) one identifies with) |
| ಅ. ಆಂತರಿಕ (Internal) | |

| | |
|---|---|
| ಆ. ಬಾಹ್ಯ<br>(external) | ಇತರರು ವ್ಯಕ್ತಿಯೊಬ್ಬನನ್ನು ಯಾವ ಭಾಷೆ(ಗಳ) ಜೊತೆಗೆ ಗುರುತಿಸುತ್ತಾರೋ ಅದು<br>**the language(s) one is identified as a native speaker of by others** |

೧. ವ್ಯಕ್ತಿಯೊಬ್ಬನಿಗೆ ಹಲವು ಮಾತೃಭಾಷೆಗಳಿರಬಹುದು.

೨. ಈ ಸಂಗತಿಯು ಮಾತೃಭಾಷೆಯನ್ನು ಕುರಿತು ನಾವು ಯಾವ ಲಕ್ಷಣ ನಿರೂಪಣೆಯನ್ನು ಬಳಸುತ್ತೇವೆಂಬ ದನ್ನು ಆಧರಿಸಿರುತ್ತದೆ.

೩. ಒಬ್ಬ ವ್ಯಕ್ತಿಯ ಜೀವಿತದ ಅವಧಿಯಲ್ಲಿ ಅವನ ಮಾತೃಭಾಷೆಯು ಹಲವಾರು ಬಾರಿ ಬದಲಾಗಬಹುದು. 'ಮೂಲ'ದ ತತ್ತ್ವವನ್ನು ಆಧರಿಸಿದ ಲಕ್ಷಣ ನಿರೂಪಣೆಯನ್ನು ಹೊರತು ಪಡಿಸಿ, ಮಾತೃಭಾಷೆಯನ್ನು ಕುರಿತ ಮಿಕ್ಕೆಲ್ಲ ನಿರೂಪಣೆಗಳಲ್ಲೂ ಇದು ಸಾಧ್ಯವೆಂದು ತೋರುತ್ತದೆ.

೪. ಒಂದು ಸಮಾಜದಲ್ಲಿರುವ ಭಾಷಿಕ ಹಕ್ಕುಗಳ ಎಚ್ಚರವನ್ನು ಆಧರಿಸಿ ಮಾತೃಭಾಷೆಯ ಲಕ್ಷಣ ನಿರೂಪಣೆಗಳನ್ನು ತರ-ತಮಗಳ ಶ್ರೇಣಿಯಲ್ಲಿ ವಿಂಗಡಿಸಬಹುದು.

ಈಗ ನಾನು ಮಾತೃಭಾಷೆಯನ್ನು ಕುರಿತ ಲಕ್ಷಣ ನಿರೂಪಣೆಗಳನ್ನು ತರ-ತಮಗಳ ಶ್ರೇಣಿಯಲ್ಲಿ ಜೋಡಿಸಿ ಈ ಕಲ್ಪನೆಗಳು ಹೇಗೆ ಹಗಲು ಶುಶ್ರೂಷಾ ಕೇಂದ್ರಗಳಲ್ಲಿ ಮತ್ತು ಶಾಲೆಗಳಲ್ಲಿ ಬಳಕೆಗೊಳ್ಳುತ್ತಿವೆ ಎಂಬುದನ್ನು ವಿವರಿಸುತ್ತೇನೆ. ನಿಯೋಗ ತತ್ವವನ್ನು ಆಧರಿಸಿದ ಮಾತೃಭಾಷೆಯ ಕಲ್ಪನೆ ಅತ್ಯಂತ ರೂಕ್ಷವಾದುದೆಂದು ನನಗೆ ತೋರುತ್ತದೆ. ಏಕೆಂದರೆ ಇದು ಭಾಷಿಕ ಹಕ್ಕುಗಳನ್ನು ಕುರಿತ ಅತ್ಯಂತ ಕಡಿಮೆ ಪ್ರಮಾಣದ ಎಚ್ಚರವನ್ನು ಮಾತ್ರ ತೋರುತ್ತದೆ. "ಜರ್ಮನಿ/ಡೆನ್ಮಾರ್ಕ್/ಬ್ರಿಟನ್ನಿನಲ್ಲಿರುವ ಈ ಟರ್ಕಿಶ್ ಮಗುವು ಶಾಲೆಯಲ್ಲಿ ಇಡೀ ದಿನ ಜರ್ಮನ್/ಡೇನಿಷ್/ಇಂಗ್ಲಿಷ್ ಭಾಷೆಯನ್ನೇ ಬಳಸುತ್ತದೆ. ಟರ್ಕಿಶ್ ಭಾಷೆಯನ್ನು ಬಳಸುವುದೇ ಇಲ್ಲವೆಂದರೂ ಸರಿಯೇ. ಇತರ ಮಕ್ಕಳೊಂದಿಗೆ ಕೂಡ ಜರ್ಮನ್/ಡಚ್/ಡೇನಿಷ್/ಇಂಗ್ಲೀಷನ್ನು ಬಳಸುತ್ತದೆ. ಆದ್ದರಿಂದ ಆ ಮಗುವಿನ ಮಾತೃಭಾಷೆ ಈ ಯಾವುದಾದರೊಂದು ಮಾತ್ರ ಆಗಿದೆ" ಎಂಬಂತಹ ಮಾತುಗಳನ್ನು ನಾವು ಕೇಳಬಹುದು. ಈ ರೀತಿಯಲ್ಲಿ ವಾದ ಮಾಡುವವರು ಗಮನಿಸದೇ ಇರುವ ಒಂದು ಸಂಗತಿ ಇದೆ. ಅದೇನೆಂದರೆ, ಅಲ್ಪಸಂಖ್ಯಾತರ ಗುಂಪಿಗೆ ಸೇರಿದ ಅನೇಕ ಮಕ್ಕಳು ತಮ್ಮದಲ್ಲದ ದ್ವಿತೀಯ ಭಾಷೆಯೊಂದನ್ನು ಬಳಸಲೇಬೇಕಾದ ಒತ್ತಾಯಕ್ಕೆ ಗುರಿಯಾಗಿರುತ್ತಾರೆ. ಈ ಮಕ್ಕಳಿಗೂ ಅವರ ತಂದೆ ತಾಯಂದಿರಿಗೂ ಶಾಲೆಯಲ್ಲಿ ಭಾಷೆಯ ಆಯ್ಕೆಯಲ್ಲಿ ಮುಕ್ತ ಸ್ವಾತಂತ್ರ್ಯವಿರುವುದಿಲ್ಲ. ಯುರೋಪಿನಲ್ಲಿರುವ ವಲಸೆಗಾರರನ್ನು ಸ್ವೀಕರಿಸುವ ದೇಶಗಳ ಶಾಲೆಗಳಲ್ಲಿ ನಿಯೋಗ ತತ್ತ್ವಾಧಾರಿತ ಮಾತೃಭಾಷೆಯ ಕಲ್ಪನೆ ಪ್ರಕಟವಾಗಿ ಅಥವಾ ಅಪ್ರಕಟವಾಗಿ ಬಳಕೆಯಾಗುತ್ತಿದೆ.

ಭಾಷೆಯನ್ನು ಕುರಿತ ಸಾಮಾಜಿಕ ಅರಿವು ಮತ್ತು ತಮ್ಮತನದ ಪ್ರಜ್ಞೆ ಹೆಚ್ಚುತ್ತ ಒಂದಂತೆ ಸಾಮರ್ಥ್ಯ ತತ್ತ್ವವನ್ನು ಆಧರಿಸಿದ ಮಾತೃಭಾಷೆಯ ಕಲ್ಪನೆ ಚಾಲ್ತಿಗೆ ಬರುತ್ತದೆ. "ಸ್ವೀಡಿಶ್ ಭಾಷೆಯ ಪ್ರಾಬಲ್ಯದ ನಡುವೆ ಬೆಳೆದಿರುವ ಅಸ್ಸೀರಿಯನ್ ಮಕ್ಕಳು ಅಂಕೆಗಳನ್ನು ಸ್ವೀಡಿಶ್‌ನಲ್ಲಿ ಎಣಿಸಬಲ್ಲವರಾಗಿದ್ದರೇ ಹೊರತು ಅವರ ಮಾತೃಭಾಷೆ ಎಂದು (ಹೇಳಲಾದ) ಅಸ್ಸೀರಿಯನ್ ಭಾಷೆಯಲ್ಲಿ ಅಲ್ಲ" ಎಂಬಂತಹ ಮಾತುಗಳನ್ನು ಕೇಳಿದ್ದೇನೆ. ಇದರರ್ಥವೆಂದರೆ, ಅಸ್ಸೀರಿಯನ್ ಮಕ್ಕಳಿಗೆ ತಮ್ಮ ಪ್ರಥಮ ಭಾಷೆಗಿಂತ ಎರಡನೆಯ ಭಾಷೆಯಾದ ಸ್ವೀಡಿಶ್‌ನಲ್ಲಿ ಎಣಿಕೆಯ ಸಾಮರ್ಥ್ಯ ಇತ್ಯಾದಿಗಳು ಪ್ರಾಪ್ತವಾಗಿರುವುದರಿಂದ ಅವರು ಸಾಮರ್ಥ್ಯವನ್ನು ಬೆಳೆಸಿಕೊಂಡಿರುವ ಎರಡನೆಯ ಭಾಷೆಯೇ ಅವರ ಮಾತೃಭಾಷೆ! ಆದರೆ ಸಾಮರ್ಥ್ಯಾಧಾರಿತ ಮಾತೃಭಾಷೆಯ ಈ ಕಲ್ಪನೆ ಒಂದು ಮುಖ್ಯ ಅಂಶವನ್ನು ಕಡೆಗಣಿಸಿದೆ: ಅಸ್ಸೀರಿಯನ್ ಮಕ್ಕಳಿಗೆ ತಮ್ಮ ಮಾತೃಭಾಷೆಯಲ್ಲಿ ಸಾಮರ್ಥ್ಯ ಕಡಿಮೆಯಾಗುವುದಕ್ಕೆ ಕಾರಣವೇನೆಂದರೆ ಅವರು ಆ ಭಾಷೆಯನ್ನು ಬಳಸುವ ಮತ್ತು ಕಲಿಯುವ ಅವಕಾಶಗಳಿಂದ ವಂಚಿತರಾಗಿದ್ದಾರೆ. ಮಕ್ಕಳು ತಮ್ಮ ಇಡೀ ದಿನವನ್ನು ಕಳೆಯುವ ಶಾಲೆಯಂತಹ ಸಂಸ್ಥೆಗಳಲ್ಲಿ ಅವರಿಗೆ ತಮ್ಮ ಮಾತೃಭಾಷೆಯ ಸಾಮರ್ಥ್ಯವನ್ನು ಬೆಳೆಸಿಕೊಳ್ಳುವ ಅವಕಾಶ ದೊರೆತಿಲ್ಲ. ಈಗ ಬಹುಸಂಖ್ಯಾತರು ಮಾತನಾಡುವ ಭಾಷೆಯ ಪರಿಸರವಿರುವ ಶಾಲೆಯಲ್ಲಿ ಮಗುವಿಗೆ ಅನ್ಯಭಾಷೆಯ ಸಾಮರ್ಥ್ಯವನ್ನು ಬೆಳೆಸಿಕೊಳ್ಳದೆ ವಿಧಿ ಇಲ್ಲ. ಹೀಗೆ, ಮಾತೃಭಾಷೆಯ ಸಾಮರ್ಥ್ಯವೃದ್ಧಿಯ ಅವಕಾಶ ವಂಚಿತ ಮಗುವನ್ನು ಮತ್ತಷ್ಟು ಒತ್ತಾಯಕ್ಕೆ ಗುರಿಮಾಡಿ ಎರಡನೆಯ ಭಾಷೆಯ ಸಾಮರ್ಥ್ಯ ವೃದ್ಧಿಗೊಳಿಸಿ ಅದು ತನ್ನ ಮಾತೃಭಾಷೆಗಿಂತ ಬಹುಸಂಖ್ಯಾತರ ಭಾಷೆಯನ್ನೇ ಹೆಚ್ಚು ಚೆನ್ನಾಗಿ ಬಲ್ಲುದು ಎಂದು ಹೇಳುವುದು ಸರಿಯಲ್ಲ.

ಮೂಲ ಮತ್ತು ಚಹರೆಯ ತತ್ತ್ವಗಳನ್ನು ಆಧರಿಸಿದ ಮಾತೃಭಾಷೆಯ ಲಕ್ಷಣ ನಿರೂಪಣೆಯು ಅತಿ ಹೆಚ್ಚಿನ ಮಟ್ಟದ ಭಾಷಿಕ ಹಕ್ಕುಗಳ ಎಚ್ಚರವನ್ನು ಸೂಚಿಸುತ್ತದೆ:

ಒಬ್ಬ ವ್ಯಕ್ತಿಯು ಮೊದಲು ಕಲಿತ ಮತ್ತು ತನ್ನನ್ನು ತಾನು ಗುರುತಿಸಿಕೊಳ್ಳುವ ಭಾಷೆಗಳೇ ಅವನ ಮಾತೃಭಾಷೆ.(ಗಳು) (The Mother tongue(s) is (are) the language(s) one has learned first and identifies with.)

ಒಂದು ಭಾಷೆ, ಅಂದರೆ ಮಾತೃಭಾಷೆಯು ಜನಸಮುದಾಯವೊಂದರ ವಿಶಿಷ್ಟ ಗುಣಲಕ್ಷಣಗಳನ್ನು ನಿರೂಪಿಸುವಲ್ಲಿ ಪ್ರಮುಖ ಅಂಶವಾಗಿರುವುದು, ಆ ಸಮುದಾಯದ ಸಾಂಸ್ಕೃತಿಕ ತಿರುಳಿನ ಭಾಗವಾಗಿರುವುದು ನಿಜವಾದರೆ ಆಗ ಮಾತೃಭಾಷೆಯನ್ನು ಕೇವಲ ವೈಯಕ್ತಿಕ ಪ್ರಕ್ರಿಯೆಯಲ್ಲ ಸಾಮೂಹಿಕ ಪ್ರಕ್ರಿಯೆ ಎಂದು ವ್ಯಾಖ್ಯಾನಿಸುವುದು ಸಾಧ್ಯವಾಗಬೇಕು. ಆಗ ಮಾತೃಭಾಷೆಯನ್ನು ಭೌತಿಕ ಗಡಿರೇಖೆಗಳ ಆಧಾರದ ಮೇಲೂ ವಿವರಿಸುವುದು ಸಾಧ್ಯವಾಗಬಹುದು....

ಅಲ್ಪಸಂಖ್ಯಾತ ಸಮೂಹಕ್ಕೆ ಸೇರಿದ ಮಗುವಿನ ಮಾತೃಭಾಷೆಯನ್ನು ಕೇವಲ ಭಾಷಾ ಸಾಮರ್ಥ್ಯ ಅಥವಾ ಭಾಷಾ ನಿಯೋಗ ತತ್ತ್ವಗಳನ್ನು ಆಧರಿಸಿ ಗುರುತಿಸುವ ಶೈಕ್ಷಣಿಕ ಸಂಸ್ಥೆಗಳು ಸಾಂಸ್ಕೃತಿಕವಾಗಿ ಮತ್ತು ಸಾಂಸ್ಥಿಕವಾಗಿ ಭಾಷಾದ್ವೇಷವನ್ನು ಆಚರಿಸುವ ಅಪರಾಧದಲ್ಲಿ ತೊಡಗಿರುತ್ತವೆ. ವರ್ಗ ದ್ವೇಷ, ವರ್ಣ ದ್ವೇಷ, ಜಾತಿ ದ್ವೇಷ, ಜನಾಂಗ ದ್ವೇಷ, ಲಿಂಗ ದ್ವೇಷಗಳೆಂತೋ ಅಂತೆಯೇ ಭಾಷಾದ್ವೇಷವೂ ಕೂಡ. (Lingucisim) : "ಹಲವು ಗುಂಪುಗಳ ನಡುವೆ ಅಧಿಕಾರ ಮತ್ತು ಸಂಪನ್ಮೂಲಗಳ ಅಸಮಾನ ಹಂಚಿಕೆಯನ್ನು ಅಧಿಕೃತಗೊಳಿಸುವ, ಪರಿಣಾಮಕಾರಿಯನ್ನಾಗಿಸುವ ಮತ್ತು ಮುಂದುವರೆಸುವ ಎಲ್ಲ ವಿಚಾರಧಾರೆಗಳೂ, ಸಂರಚನೆಗಳೂ ಭಾಷೆಯ ತಳಹದಿಯ ಮೇಲೆ ನಿರ್ವಚನಗೊಂಡಿರುತ್ತವೆ." (Skutnach Kangas)

ತೀರ ಪ್ರಕಟವಾಗಿ ಒಂದು ಭಾಷೆಯನ್ನು ಅಳಿಸುವ ದೃಷ್ಟಿಕೋನವಿರುವ ದೇಶಗಳು ಸಾಮಾನ್ಯವಾಗಿ ಜನಾಂಗ ದ್ವೇಷದ ಧೋರಣೆಗಳನ್ನೂ ಒಳಗೊಂಡಿರುತ್ತವೆ. ಇವುಗಳನ್ನು ಗುರುತಿಸುವುದು ಸುಲಭ. ಅಪ್ರಕಟವಾಗಿ ಭಾಷೆಯನ್ನು ದ್ವೇಷಿಸುವ, ಆದರೆ ಪ್ರಕಟವಾಗಿ ಭಾಷೆಗಳ ಬಗ್ಗೆ ಸಹನೆಯನ್ನು ಪ್ರತಿಪಾದಿಸುವ ದೇಶಗಳಲ್ಲಿನ ಭಾಷಾದ್ವೇಷದ ಸ್ವರೂಪವನ್ನು ಕಂಡುಕೊಳ್ಳುವುದು ಕಷ್ಟ. ಇದನ್ನು ಅರಿಯಲು ಭಾಷಾದ್ವೇಷದ ತಾತ್ತ್ವಿಕತೆಯನ್ನು ತಿಳಿಯುವುದು ಅಗತ್ಯವಾಗುತ್ತದೆ.

**೪. ಭಾಷಾದ್ವೇಷದ ನಿರಂತರತೆ (The Linguicism Continuum)**

ಭಾಷೆಯೊಂದು ಸಾಯುವುದಕ್ಕೆ ಭಾಷಾದ್ವೇಷವೇ ಮುಖ್ಯಕಾರಣವಾಗಿರುತ್ತದೆ. ಭಾಷಾದ್ವೇಷವೆನ್ನುವುದು ಒಂದು ಪರಿಕಲ್ಪನೆ ಅದು ಭಾಷೆಯೊಂದರ ಶಕ್ತಿ ಸಾಮರ್ಥ್ಯ ಹಾಗೂ ಶೈಕ್ಷಣಿಕವಾಗಿ ಭಾಷಾಸಂಬಂಧೀ ಯೋಜನೆಗಳಿಗೂ ಸಮಾಜದ ವರ್ಗಗಳು ಪಡೆದಿರುವ ಅಧಿಕಾರಶಕ್ತಿಯ ವಿನ್ಯಾಸಗಳಿಗೂ ಇರುವ ಸಾಪೇಕ್ಷ ಸಂಬಂಧದ ಸ್ವರೂಪವನ್ನು ಸ್ಪಷ್ಟಪಡಿಸುವ ಪರಿಕಲ್ಪನೆ.

ಸಾಮ್ರಾಜ್ಯಶಾಹಿಯ ವ್ಯಾಪಕ ಪರಿಸರದಲ್ಲಿ ಭಾಷಾದ್ವೇಷ ಕಾಣಿಸಿಕೊಳ್ಳುತ್ತದೆ. ಸಾಮ್ರಾಜ್ಯಶಾಹಿ ಧೋರಣೆಯು ಭಾಷೆಯೊಂದಕ್ಕೆ ಸಂಬಂಧಿಸಿದಂತೆ ಭಾಷಿಕ ಸಾಮ್ರಾಜ್ಯಶಾಹಿ ರೂಪವನ್ನು ತಾಳಬಹುದು. ಭಾಷಿಕ ಸಾಮ್ರಾಜ್ಯಶಾಹಿಯು ಇರುವ ಎಡೆಗಳಲ್ಲಿ ಒಂದು ನಿರ್ದಿಷ್ಟ ಭಾಷೆಗೆ ಮಹತ್ವ ಪ್ರಾಪ್ತವಾಗುತ್ತದೆ. ಸಾಮಾಜಿಕ ವ್ಯವಸ್ಥೆಯ ಸ್ಥಾಪಿತ ಹಿತಾಸಕ್ತಿಗಳು ಆ ನಿರ್ದಿಷ್ಟ ಭಾಷೆಯ ಉಳಿವು ಮತ್ತು ಪ್ರಸಾರಕ್ಕೆ ಎಲ್ಲ ಬಗೆಯ ನೆರವು, ಪ್ರಚೋದನೆ ಮತ್ತು ಪ್ರೋತ್ಸಾಹ ನೀಡುತ್ತವೆ. ಇದರಿಂದ ಆ ನಿರ್ದಿಷ್ಟ ಭಾಷೆಯನ್ನು ಆಡುವವರ ಮತ್ತು ಇತರ ಭಾಷೆಗಳನ್ನು ಆಡುವವರ ನಡುವೆ ಸಾಂಸ್ಥಿಕವಾದ ಮತ್ತು ಸಾಂಸ್ಕೃತಿಕವಾದ ಅಸಮಾನತೆಗಳು ಉಂಟಾಗತೊಡಗುತ್ತವೆ. ಈ ಮಾತಿನಲ್ಲಿ ಸಾಂಸ್ಥಿಕ ಎಂಬುದು ಭೌತಿಕ ಗುಣಲಕ್ಷಣಗಳನ್ನೂ ಸಾಂಸ್ಕೃತಿಕ ಎಂಬುದು ಐಡಿಯಾಲಜಿಯ ಗುಣಲಕ್ಷಣಗಳನ್ನೂ ಹೊಂದಿದೆ. ಸಾಂಸ್ಥಿಕ ಮತ್ತು ಸಾಂಸ್ಕೃತಿಕ ಅಸಮಾನತೆಗಳಿಂದಾಗಿ ನಿರ್ದಿಷ್ಟ ಭಾಷೆ

ಯೊಂದಕ್ಕೆ ಎಲ್ಲ ಬಗೆಯ ಸಂಪನ್ಮೂಲಗಳೂ ದೊರೆಯುವಂತಾಗಿ ಇತರ ಭಾಷೆಗಳ ಏಳಿಗೆಗೆ ಸಂಪನ್ಮೂಲಗಳ ಕೊರತೆ ಕಾಣತೊಡಗುತ್ತದೆ. ಇದರಿಂದ ನಿರ್ದಿಷ್ಟ ಭಾಷೆಯಲ್ಲಿ ಸಾಮರ್ಥ್ಯವನ್ನು ಪಡೆದವರಿಗೆ ಮಾತ್ರ ಎಲ್ಲ ಬಗೆಯ ಸವಲತ್ತುಗಳು, ಲಾಭಗಳು ದೊರೆಯತೊಡಗುತ್ತವೆ. ಇತರ ಭಾಷಿಕರು "ವಂಚಿತ"ರಾಗುತ್ತಾರೆ. ಭಾಷಾ ದ್ವೇಷವು ಯಾವಾಗಲೂ ಪ್ರಬಲ ಭಾಷೆಗಳನ್ನು (ಇಂಗ್ಲಿಷ್, ಫ್ರೆಂಚ್, ಸ್ಪ್ಯಾನಿಶ್ ಇತ್ಯಾದಿ) ಮತ್ತಷ್ಟು ಪ್ರಬಲಗೊಳಿಸುತ್ತದೆ. ಅಂತಾರಾಷ್ಟ್ರೀಯವಾಗಿ ನೋಡಿದರೆ, ರಾಜ್ಯಶಕ್ತಿಯು ಅಧಿಕೃತ ಆಡಳಿತ ಭಾಷೆಗೆ ನೀಡುವ ಪ್ರೋತ್ಸಾಹವು ಆಡಳಿತ ಭಾಷೆಗಳಲ್ಲದ ಇತರ ಭಾಷೆಗಳ ಮಟ್ಟಿಗೆ ಭಾಷಾ ದ್ವೇಷದ ಪರಿಣಾಮವನ್ನೇ ಉಂಟುಮಾಡಿರುವುದು ತಿಳಿಯುತ್ತದೆ.

ಭಾಷಾ ದ್ವೇಷದ ಪ್ರಕ್ರಿಯೆಯನ್ನು ಎರಡನೆಯ ಚಿತ್ರದಲ್ಲಿ ವಿವರಿಸಲಾಗಿದೆ.




**ಸಮಗ್ರ ಭಾಷಾಪಲ್ಲಟ(Replacement):** ಒಂದು ಭಾಷಿಕ/ಸಾಂಸ್ಕೃತಿಕ ಸಮುದಾಯದ ಬದುಕಿನ ಎಲ್ಲ ವಲಯಗಳನ್ನು, ನಿಧಾನವಾಗಿ ಆದರೆ ಖಚಿತವಾಗಿ ಮತ್ತು ಸಮಗ್ರವಾಗಿ, ಇನ್ನೊಂದು ಭಾಷೆ ಅಥವಾ ಸಂಸ್ಕೃತಿಯು ಆಕ್ರಮಿಸಿಕೊಳ್ಳುವುದನ್ನು ಸಮಗ್ರ ಭಾಷಾ ಪಲ್ಲಟವೆನ್ನಬಹುದು, ಇಂಗ್ಲಿಷ್ ಭಾಷೆಯನ್ನು ಒಂದು ಉದಾಹರಣೆಯಾಗಿ ನೋಡಬಹುದು. ಇಂಗ್ಲಿಷಿಗಿಂತ ಸಾಮ್ರಾಜ್ಯಶಾಹಿಯಾದ ಭಾಷೆ ಇನ್ನೊಂದಿಲ್ಲ. ಇನ್ನಿತರ ಭಾಷೆಗಳನ್ನಾಡುವ ಯಾವುದೇ ಜನಸಮುದಾಯ ಇಂಗ್ಲಿಷನ್ನು ತಮ್ಮ ಭಾಷೆಯಾಗಿ ಅಳವಡಿಸಿಕೊಂಡು ಇಂಗ್ಲಿಷ್ ಏಕಭಾಷಿಕರಾಗಿ ಪರಿವರ್ತನೆ ಹೊಂದಿದರೆ ಆಗ ಇಂಗ್ಲಿಷ್ ಇತರ ಭಾಷೆಗಳನ್ನು ಸ್ಥಾನಾಂತರಿಸಿತು ಎನ್ನಬಹುದು. ರಾಜಧಾನಿಯಲ್ಲಿ ಬದುಕುತ್ತಿರುವ

ಮೂರನೆಯ ತಲೆಮಾರಿನ ವ್ಯಕ್ತಿಯೊಬ್ಬನು ತನ್ನ ತಾತ ಬದುಕಿದ ಹಳ್ಳಿಗೆ ಭೇಟಿ ನೀಡಿದರೆ ಕೇವಲ ಭಾಷೆ ಮಾತ್ರವಲ್ಲ, ಸಾಂಸ್ಕೃತಿಕ ಪಲ್ಲಟವೂ ಅವನ ಅನುಭವಕ್ಕೆ ಬರಬಹುದು.

**ಆಂಶಿಕ ಭಾಷಾ ಪಲ್ಲಟ** (Displacement) ಎಂದರೆ ಬದುಕಿನ ಕೆಲವು ಸಂದರ್ಭಗಳಿಗೆ ಮಾತ್ರ ಅನ್ವಯವಾಗುವಂತೆ ಅನ್ಯಭಾಷೆಯೊಂದರ ಬಳಕೆಯನ್ನು ಒಪ್ಪಿಕೊಂಡು ಇತರ ಸಂದರ್ಭಗಳಿಗೆ ತಮ್ಮ ಭಾಷೆಯನ್ನೇ ಉಳಿಸಿಕೊಳ್ಳುವುದು. ಉದಾಹರಣೆಗೆ, ಅನ್ಯ ಭಾಷಿಕರು ತಮ್ಮ ಉದ್ಯೋಗಕ್ಕೆ ಸಂಬಂಧಿಸಿದಂತೆ ಅಥವಾ ಕಛೇರಿ ವ್ಯವಹಾರಗಳಿಗೆ ಸಂಬಂಧಿಸಿದಂತೆ ಇಂಗ್ಲೀಷನ್ನು ಉಪಯೋಗಿಸುತ್ತಾ ಉಳಿದಂತೆ ತಮ್ಮ ಭಾಷೆಯನ್ನೇ ಬಳಸುತ್ತಿದ್ದರೆ ಆಗ ಆಂಶಿಕ ಭಾಷಾ ಪಲ್ಲಟದ ಪರಿಸ್ಥಿತಿಯು ಏರ್ಪಡುತ್ತದೆ. ಇದರಿಂದಾಗಿ ಸ್ಥಳೀಯ ಭಾಷೆ/ಸಂಸ್ಕೃತಿಗಳು ಒಟ್ಟು ಬದುಕಿನ ಹಲವಾರು ವಲಯಗಳಲ್ಲಿ ಅಪಮೌಲ್ಯಕ್ಕೆ ಗುರಿಯಾಗುತ್ತವೆ. ವ್ಯಕ್ತಿಗಳು ದ್ವಿಭಾಷಿಕರಾಗಿ ಇಬ್ಬಗೆಯ ಸಂಸ್ಕೃತಿಗಳೊಂದಿಗೆ ಹೊಂದಿಕೊಳ್ಳಬೇಕಾಗುತ್ತದೆ. ದ್ವಿಭಾಷಿಕತೆಯೆಂದರೆ ಬಹುಭಾಷಿಕತೆ ಎಂದೇ ಅರ್ಥ.

**ನವ ನಿಯೋಗ** (Neoplacement) ಪರಕೀಯ ಭಾಷೆ/ಸಂಸ್ಕೃತಿಯ ಕಾರಣದಿಂದ ಸಮುದಾಯದ ಬದುಕಿಗೆ ಸಂಪೂರ್ಣವಾಗಿ ಹೊಸದಾದ ಸಾಮಾಜಿಕ ನಿಯೋಗಗಳು ಪರಿಚಿತವಾಗಿ ಬಳಕೆಯಾಗತೊಡಗಿದರೆ, ಅದನ್ನು ನವ ನಿಯೋಗವೆಂದು ಗುರುತಿಸಬಹುದು. ವಿಶ್ವದಾದ್ಯಂತ ಕಂಪ್ಯೂಟರುಗಳ ಬಳಕೆ ಹೆಚ್ಚುತ್ತಿರುವುದು ಮತ್ತು ಈ ವಲಯದಲ್ಲಿ ಇಂಗ್ಲಿಷೇ ಆಧಿಪತ್ಯ ನಡೆಸುತ್ತಿರುವುದು ನವ ನಿಯೋಗಕ್ಕೆ ಉತ್ತಮ ಉದಾಹರಣೆ. ಇಂಗ್ಲಿಷ್ ಭಾಷೆಯನ್ನು ಬಳಸದ ಜನ ಸಮುದಾಯಗಳು ಈ ಹೊಸ ತಾಂತ್ರಿಕತೆಯ "ತಿರುಳ"ನ್ನೂ ಮತ್ತು ಅದರ ಭಾಷೆ ಅಥವಾ "ರೂಪ"ವನ್ನೂ ಒಪ್ಪಿಕೊಂಡಾಗ ಇಂಗ್ಲಿಷೇತರ 'ಭಾಷೆ'ಗಳ ಪಲ್ಲಟವು, ಇಂಥ ಚಟುವಟಿಕೆಯೇ ಹೊಸತಾದ್ದರಿಂದ, ಮೊದಮೊದಲು ಕೇವಲ ಆಂಶಿಕವಾಗಿರುತ್ತದೆ. ಆದರೆ ದೀರ್ಘಕಾಲಾವಧಿಯಲ್ಲಿ ಇಂಥ ತಾಂತ್ರಿಕತೆಯಿಂದ ಇಂಗ್ಲಿಷೇತರ "ಭಾಷೆ"ಗಳ ಮೇಲೆ ಗಣನೀಯ ಪ್ರಭಾವವಾಗುವುದು ನಿಶ್ಚಿತ. ಅತ್ಯಲ್ಪ ಕಾಲದಲ್ಲೇ ಇಂಥ ಹೊಸ ತಾಂತ್ರಿಕತೆ ಮತ್ತು ಇಂಗ್ಲಿಷ್ ಭಾಷೆ "ಸಾಮಾಜಿಕ-ಸಾಂಸ್ಕೃತಿಕ" ಪರಿಣಾಮಗಳನ್ನು ಬೀರುವುದು ನಮ್ಮ ಗಮನಕ್ಕೆ ಬರುತ್ತದೆ. ಉದಾಹರಣೆಗೆ ಹೊಸ ಬಗೆಯ ಸಾಮಾಜಿಕ ಶ್ರೇಣೀಕರಣಗಳು ಏರ್ಪಡುತ್ತವೆ. ಜೀವನದಲ್ಲಿ 'ಯಶಸ್ವಿ'ಯಾಗಬೇಕಾದರೆ, ಉದ್ಯೋಗದಲ್ಲಿ ಮುಂದುವರೆಯಬೇಕಾದರೆ ಕಂಪ್ಯೂಟರಿನ ಮತ್ತು ಅದಕ್ಕಾಗಿ ಇಂಗ್ಲೀಷ ಭಾಷೆಯ ಜ್ಞಾನ ಅನಿವಾರ್ಯವಾಗಿ ಕಂಪ್ಯೂಟರ್ ತಂತ್ರಜ್ಞಾನ ಬಲ್ಲವರ ಮತ್ತು ಇಲ್ಲದವರ ವರ್ಗಗಳು ಸೃಷ್ಟಿಯಾಗತೊಡಗುತ್ತವೆ.

ಎರಡನೆಯ ಚಿತ್ರದಲ್ಲಿರುವ ಚೌಕುಗಳು ಭಾಷಿಕ ಸಮುದಾಯವೊಂದರ ಅಭಿವ್ಯಕ್ತಿಯ 'ಸ್ಥಳಾವಕಾಶ'ಗಳನ್ನು ಸೂಚಿಸುತ್ತವೆ. ಅದರೊಳಗಿನ ಚಿಕ್ಕ ಚಿಕ್ಕ ವರ್ತುಲಗಳು ಭಾಷಾ

ಬಳಕೆಯ ವಲಯಗಳನ್ನು ಸೂಚಿಸುತ್ತವೆ. ಮಾತೃಭಾಷೆಯನ್ನು ಹಲವಾರು ವಲಯಗಳಲ್ಲಿ ಬಳಸುತ್ತಿರಬಹುದು- ಮನೆಯಲ್ಲಿ, ಗೆಳೆಯರೊಡನೆ, ಮನರಂಜನೆಯ ಸಂದರ್ಭದಲ್ಲಿ, ಆಡಳಿತ, ರಾಜಕೀಯ, ಧರ್ಮ ಇತ್ಯಾದಿ ವಲಯಗಳಲ್ಲಿ. ವರ್ತುಲಗಳ ಆಚೆಗಿರುವ ಖಾಲಿ ಜಾಗಗಳು ಹೊಸ ಹೊಸ ಚಟುವಟಿಕೆಗಳನ್ನು ಆಳವಡಿಸಿಕೊಳ್ಳಬಹುದಾದ ಜಾಗಗಳಾಗಿರುತ್ತವೆ. ಇಷ್ಟು ವಿವರಗಳೊಂದಿಗೆ ಪ್ರಧಾನ ಭಾಷೆ ಮತ್ತು ಅಧೀನ ಭಾಷೆಗಳ ಸಂಬಂಧವನ್ನೂ ಭಾಷಾದ್ವೇಷದ ಚಲನಶೀಲತೆಯನ್ನೂ ಗುರುತುಮಾಡಿಕೊಳ್ಳಲು ಪ್ರಯತ್ನಿಸಬಹುದು

**ಪ್ರಬಲ ಅಸ್ತಿತ್ವದ ಸ್ಥಿತಿ** (Strong Maintenance) ಜನ ಸಮುದಾಯವೊಂದರ ಮಾತೃಭಾಷೆಯೇ ಅದರ ಬದುಕಿನ ಅತಿಹೆಚ್ಚು ಚಟುವಟಿಕೆಗಳನ್ನು ನಿರ್ವಹಿಸುತ್ತಿರುವಾಗ ಭಾಷೆಯ ಪ್ರಬಲ ಅಸ್ತಿತ್ವದ ಸ್ಥಿತಿ ಇರುತ್ತವೆ. ಐಸ್‌ಲ್ಯಾಂಡಿಕ್ ಭಾಷೆಯನ್ನು ಸುಮಾರು ೨೪೦,೦೦೦ ಜನರು ಬಳಸುತ್ತಾರೆ. ಆ ಭಾಷೆಗೆ ಸುಮಾರು ೧೦೦೦ ವರ್ಷಗಳ ಸಾಹಿತ್ಯಕ ಪರಂಪರೆ ಇದೆ. ಇದು ಭಾಷೆಯ ಪ್ರಬಲ ಅಸ್ತಿತ್ವದ ಸ್ಥಿತಿಗೆ ಉತ್ತಮ ಉದಾಹರಣೆ. ಹೊರಗಿನಿಂದ ಹೊಸದಾಗಿ ಬಂದ ದ್ವಿತೀಯ ಭಾಷೆಯು ಐಸ್‌ಲ್ಯಾಂಡಿಕ್ ಭಾಷೆಯ ಬಳಕೆಯ ಸ್ಥಾನವನ್ನು ಹೊಸ ವಲಯಗಳನ್ನು ಸೃಷ್ಟಿಸಿ ಆಕ್ರಮಿಸಿಕೊಳ್ಳಬಹುದು. ಆದರೆ ಕ್ರಮೇಣ ಪ್ರಬಲ ಅಸ್ತಿತ್ವದ ಸ್ಥಿತಿಯನ್ನು ಹೊಂದಿರುವ ಭಾಷೆಯು ಈ ಹೊಸತಾಗಿ ಸೃಷ್ಟಿಗೊಂಡ ವಲಯ ಗಳನ್ನೂ ಒಳಗೊಳ್ಳುವಂತೆ ವಿಸ್ತಾರಗೊಳ್ಳಬಹುದು.

**ದುರ್ಬಲ ಅಸ್ತಿತ್ವದ ಸ್ಥಿತಿ** (Weak Maintenance Situation) ಯಲ್ಲಿ ಬದುಕಿನ ಹೆಚ್ಚಿನ ವಲಯಗಳಿಗೆ ಸಂಬಂಧಿಸಿದ ನಿಯೋಗಗಳಿಗೆ ಮಾತೃಭಾಷೆಯೇ ಉಪಯೋಗವಾಗುತ್ತಿದ್ದರೂ ತಂತ್ರಜ್ಞಾನದಂತಹ ಕೆಲವಾರು ಅನಿವಾರ್ಯ ವಿಷಯಗಳಿಗೆ ಸಂಬಂಧಿಸಿದಂತೆ ಅನ್ಯಭಾಷೆಯ ಬಳಕೆ ಅಗತ್ಯವಾಗುತ್ತದೆ. ಏಕೆಂದರೆ ಈ ವಿಷಯಗಳಿಗೆ ಸಂಬಂಧಿಸಿದಂತೆ ಮಾತೃಭಾಷೆಯಲ್ಲಿ ಪದಕೋಶಗಳ ಬೆಳವಣಿಗೆಯಾಗಿರುವುದಿಲ್ಲ. ಹೀಗಾಗಿ ಸಮುದಾಯದ ಬದುಕಿನ ಹೊಸ ವಲಯಗಳಲ್ಲಿ ಅನ್ಯಭಾಷೆಯ ಪ್ರಭಾವವು ಹೆಚ್ಚುತ್ತಾ ಹೋಗುತ್ತದೆ. ತಜ್ಞರ ಸಂಖ್ಯೆಯು ಕಡಿಮೆ ಇರುವ ದೇಶಗಳಲ್ಲಿ ಮತ್ತು ಪಿರಮಿಡ್ಡಿನ ರಚನೆಯಂತಹ ಶಿಕ್ಷಣ ಪದ್ಧತಿ ಇರುವ ದೇಶಗಳಲ್ಲಿ ಈ ಪರಿಸ್ಥಿತಿ ಸಾಮಾನ್ಯವಾಗಿರುತ್ತದೆ. ಏನಿದ್ದರೂ ತಮ್ಮ ಮಾತೃಭಾಷೆಯನ್ನು ಉಳಿಸಿಕೊಳ್ಳುವ ಹಂಬಲ ಇದ್ದೇ ಇರುತ್ತದೆ. ಸಾಂಪ್ರದಾಯಿಕವಾಗಿ ಏಕಭಾಷಿಕಗಳಾಗಿರುವ ಮತ್ತು ಮಾತೃಭಾಷೆಯ ಬಗ್ಗೆ ಕಡಿಮೆ ಪ್ರಮಾಣದ ಎಚ್ಚರವಿರುವ ದೇಶಗಳಲ್ಲಿ ಕೂಡ ಭಾಷೆಯ ದುರ್ಬಲ ಅಸ್ತಿತ್ವದ ಪರಿಸ್ಥಿತಿಯನ್ನು ಕಾಣಬಹುದು. ಇಂಥಲ್ಲಿ ತಮ್ಮ ಭಾಷೆಯ ಬಗೆಗೆ ಒಂದು ಬಗೆಯ ಕೀಳರಿಮೆಯೂ ಇರುತ್ತದೆ. ಹೊಸ ಹೊಸ ಕಾರ್ಯವಲಯಗಳಿಗೆ ಸಂಬಂಧಿಸಿದಂತೆ ತಮ್ಮದೇ ಭಾಷೆಯ ಪದಕೋಶಗಳ ನಿರ್ಮಾಣ ಮುಖ್ಯವೆಂಬುದನ್ನೂ ಜನರು ಮನಗಾಣುವುದಿಲ್ಲ ಅನ್ಯಭಾಷಾ ಪದಕೋಶಗಳ ಸ್ವೀಕಾರದಿಂದ ತಮ್ಮ ಭಾಷೆಗೆ ಏನೂ ಕೇಡು ಆಗದೆಂದೇ ಭಾವಿಸಲಾಗಿರು

ತ್ತದೆ. ಸ್ವೀಡನ್ ಮತ್ತು ಡೆನ್ಮಾರ್ಕ್ ಈ ಬಗೆಯ ಉತ್ತಮ ಉದಾಹರಣೆಗಳು. ಈ ದೇಶಗಳು ಭಾಷಿಕವಾಗಿ ಇಂಗ್ಲೀಷಿನ ವಸಾಹತುಗಳಾಗಿವೆ.

**ದುರ್ಬಲ ಆಂಶಿಕ ಭಾಷಾ ಪಲ್ಲಟ** (Weak Displaccment) ಪರಿಸ್ಥಿತಿಯು ದ್ವಿಭಾಷಿಕತೆ ಇರುವ ಎಡೆಗಳಲ್ಲಿ ಸಾಮಾನ್ಯವಾದುದಾಗಿರುತ್ತದೆ. ಮನೆ, ಸ್ನೇಹಿತರ ಸಂಪರ್ಕ ಇತ್ಯಾದಿ ಪರಿಮಿತ ವಲಯಗಳಲ್ಲಿ ಮಾತೃಭಾಷೆಯೂ, ಕಛೇರಿಗಳು, ಎಲ್ಲ ಬಗೆಯ ಆಡಳಿತ ವ್ಯವಹಾರಗಳು, ಶಾಲೆ ಮತ್ತು ಶಿಕ್ಷಣ ಇಂಥ ವಲಯಗಳಲ್ಲಿ ಅನ್ಯಭಾಷೆಯೂ ಬಳಕೆಯಾಗುತ್ತಿರುತ್ತವೆ. ಅನ್ಯಭಾಷಾ ಬಳಕೆಯ ವಲಯಗಳಲ್ಲಿ ಹೊಸ ಹೊಸ ಆವಿಷ್ಕಾರಗಳು ಸಂಭವಿಸುತ್ತಿರುತ್ತವೆ. ಈ ದ್ವಿಭಾಷಿಕ ಪರಿಸ್ಥಿತಿಯು ಸದೃಢವಾಗಿದ್ದು ಅಲ್ಪಸಂಖ್ಯಾತರು ಭಾಷೆಗಳ ಈ ಬಗೆಯ ವಿಂಗಡಣೆಯನ್ನು ಉಳಿಸಿಕೊಳ್ಳಲು ಬಯಸಿದರೆ ಅದು ಮಾತೃಭಾಷೆಯು ಜೀವಂತವಾಗಿ ಉಳಿಯುವುದಕ್ಕೆ, ದುರ್ಬಲ ಅಸ್ತಿತ್ವದ ಪರಿಸ್ಥಿತಿಗಿಂತ, ಹೆಚ್ಚು ಸಹಕಾರಿಯಾಗಿರುತ್ತದೆ.

ಹಿಂದಿನ ಕಾಲದಲ್ಲಿ ವಸಾಹತುಗಳಾಗಿದ್ದ ದೇಶಗಳಲ್ಲಿ ಮತ್ತು ವಲಸೆಗಾರರು ಹೆಚ್ಚಾಗಿ ಇರುವ ದೇಶಗಳಲ್ಲಿ ಪ್ರಧಾನ ಭಾಷೆಗಳನ್ನು ವೈಭವೀಕರಿಸುವುದು ಮತ್ತು ಅಧೀನ ಭಾಷೆಗಳನ್ನು ಹೀಗಳೆಯುವುದು ಕಂಡುಬರುತ್ತದೆ. ಮೂರನೆಯ ಜಗತ್ತಿನ ದೇಶಗಳ ಶಿಕ್ಷಣ ಕ್ರಮದಲ್ಲಿ ಇಂಗ್ಲಿಷ್‌ಗೆ ಇರುವ ಪ್ರಾಧಾನ್ಯವು ಹೆಚ್ಚಿದಂತೆಲ್ಲ ಮಾತೃಭಾಷೆಗಳ ಪಲ್ಲಟ ಆರಂಭವಾಗತೊಡಗುತ್ತದೆ. ಇದು ಕ್ರಮೇಣ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಾಮ್ರಾಜ್ಯಶಾಹಿಗೆ ದಾರಿಮಾಡಿಕೊಡುತ್ತದೆ. ಸಾರ್ವಜನಿಕ ಜೀವನದಲ್ಲಿನ ಇಂತಹ ಶಿಕ್ಷಣ ತತ್ತ್ವಗಳು ಕ್ರಮೇಣ ಕುಟುಂಬದ ಖಾಸಗೀವಲಯಕ್ಕೂ ಪ್ರವೇಶಿಸತೊಡಗುತ್ತವೆ. ಇಂಗ್ಲಿಷನ್ನು ಬಳಸಬಲ್ಲ ಜನ ಮನೆಗಳಲ್ಲೂ ಇಂಗ್ಲಿಷನ್ನೇ ಬಳಸಲು ತೊಡಗುತ್ತಾರೆ....

ಸಾಮ್ರಾಜ್ಯಶಾಹಿಯ ಅನೇಕ ರೂಪಗಳಲ್ಲಿ ಭಾಷಿಕ ಸಾಮ್ರಾಜ್ಯಶಾಹಿಯೂ ಒಂದು. ಇಲ್ಲಿಯೂ ನಾವು ಸಾಮ್ರಾಜ್ಯಶಾಹಿಯ ಐಡಿಯಾಲಜಿಗಳನ್ನು, ಸಂರಚನೆಗಳನ್ನು ಕಾಣಬಹುದು. ಸಾಮ್ರಾಜ್ಯಶಾಹಿ ಕೇಂದ್ರಗಳು ತಮ್ಮ ವಸಾಹತುಗಳನ್ನು ಅಧೀನದಲ್ಲಿಟ್ಟುಕೊಳ್ಳಲು ಮತ್ತು ತಮ್ಮ ಪ್ರಭಾವವನ್ನು ಇತರ ಎಡೆಗಳಿಗೂ ವಿಸ್ತರಿಸಲು ತಮ್ಮ ಭಾಷೆಯನ್ನೂ ಒಂದು ಉಪಕರಣವಾಗಿ ಬಳಸುತ್ತಾರೆ. ಭಾಷಾದ್ವೇಷದ ಧೋರಣೆ ಇತರ ಭಾಷೆಗಳನ್ನು ಕುಂಠಿತಗೊಳಿಸಿ ಇಂಗ್ಲೀಷನ್ನು ಪ್ರಬಲಗೊಳಿಸುತ್ತದೆ. ಇದು ನವ ಸಾಮ್ರಾಜ್ಯಶಾಹಿಯ ಇನ್ನೊಂದು ಮುಖ. ಸಾಮ್ರಾಜ್ಯಶಾಹಿ ಕೇಂದ್ರದ ಭಾಷೆಯು ಆ ಕೇಂದ್ರದ ಸನಿಹದಲ್ಲಿರುವ ಅಲ್ಪಸಂಖ್ಯಾತರ ಇತರ ಭಾಷೆಗಳನ್ನು ಮತ್ತು ತನ್ನ ವಲಯದ ಅಂಚಿನಲ್ಲಿರುವ ಇನ್ನಿತರ ಭಾಷೆಗಳನ್ನು ಕ್ರಮವಾಗಿ ದುರ್ಬಲಗೊಳಿಸುತ್ತಾ ಹೋಗುತ್ತದೆ. ಇದರಿಂದ ಅಧಿಕಾರ ಮತ್ತು ಐಶ್ವರ್ಯಗಳನ್ನು ಒಂದು ಕೇಂದ್ರದಲ್ಲಿ ಜಮಾಯಿಸಲು ಅನುಕೂಲವಾಗುತ್ತದೆ. ಭಾಷಾದ್ವೇಷವು ಎಷ್ಟು ಸೂಕ್ಷ್ಮವಾಗಿರುತ್ತದೆಂದರೆ ಸಾಮ್ರಾಜ್ಯಶಾಹಿಯನ್ನು ಬಲಪಡಿಸುವಲ್ಲಿ ಭಾಷೆಯು ವಹಿಸುವ ಪಾತ್ರ ನಮ್ಮ ಅರಿವಿಗೇ ಬರುವುದಿಲ್ಲ.

ಅಧಿಕಾರದ ಅಸಮಾನ ಹಂಚಿಕೆಯ ವ್ಯವಸ್ಥೆಯನ್ನು ಬಲಪಡಿಸುವಲ್ಲಿ ಭಾಷಾದ್ವೇಷ ಪ್ರಮುಖ ಪಾತ್ರವನ್ನು ವಹಿಸುತ್ತದೆ.

**೫. ಜೈವಿಕ ವರ್ಣದ್ವೇಷದಿಂದ ಜನಾಂಗದ್ವೇಷ ಮತ್ತು ಭಾಷಾದ್ವೇಷಗಳತ್ತ...**

(From Biological Racisim To Ethnicism and Linguicism)

ಭಾಷಾದ್ವೇಷವು ಪ್ರಕಟವಾಗಿ, ಪ್ರಜ್ಞಾಪೂರ್ವಕವಾಗಿ ಮತ್ತು ಸಕ್ರಿಯ ಧೋರಣೆಗಳಲ್ಲಿ ವ್ಯಕ್ತವಾಗಬಹುದು. ಅಲ್ಪಸಂಖ್ಯಾತರ ಶಿಕ್ಷಣದ ಇತಿಹಾಸದ ಆರಂಭ ಕಾಲದಲ್ಲಿ ಇದು ಎದ್ದು ಕಾಣುತ್ತದೆ. ಹಾಗೆಯೇ ಭಾಷಾದ್ವೇಷವು ಅಪ್ರಕಟವಾಗಿ, ಅಪ್ರಜ್ಞಾಪೂರ್ವಕವಾಗಿ, ಅಪ್ರತ್ಯಕ್ಷವಾಗಿ ಮತ್ತು ನಿಷ್ಕ್ರಿಯತೆಯ ರೂಪದಲ್ಲೂ ವ್ಯಕ್ತವಾಗಬಹುದು. ಅನೇಕ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಈಗ ಅಲ್ಪಸಂಖ್ಯಾತರಿಗೆ ದೊರೆಯುತ್ತಿರುವ ಶಿಕ್ಷಣ ಕ್ರಮದಲ್ಲಿ ಇದನ್ನು ಕಾಣಬಹುದು. ವಸಾಹತುಶಾಹಿಯ ಅನುಭವಪಡೆದು ಈಗ ಸ್ವತಂತ್ರವಾಗಿರುವ ದೇಶಗಳಲ್ಲೂ ಈ ಸೂಕ್ಷ್ಮ ಭಾಷಾದ್ವೇಷ ಕಾಣಸಿಗುತ್ತದೆ. ವಸಾಹತುಶಾಹಿ ಆಡಳಿತವಿದ್ದಾಗ ಸ್ಥಳೀಯ ಭಾಷೆಗಳನ್ನು ನೇರ ಕ್ರಮಗಳ ಮುಖಾಂತರ ದಮನಿಸಲಾಗಿತ್ತು. ಈಗ ಆ ದೇಶಗಳಲ್ಲಿ ಭಾಷಾದ್ವೇಷವು ಸೂಕ್ಷ್ಮ ರೂಪವನ್ನು ತಾಳಿದೆ. ತಾಂತ್ರಿಕ ಪ್ರಗತಿಯನ್ನು ಸಾಧಿಸಿರುವ ಮತ್ತು ಸಾಂಸ್ಕೃತಿಕವಾಗಿ ಬೆಳೆದಿರುವ, ಆದರೆ ವರ್ಣದ್ವೇಷದ ಭಾವನೆಯನ್ನು ಇನ್ನೂ ಉಳಿಸಿಕೊಂಡಿರುವ ದೇಶಗಳಲ್ಲಿ ಭಾಷಾ ದ್ವೇಷಕೂಡ ಸೂಕ್ಷ್ಮ ರೂಪವನ್ನು ತಾಳಿರುತ್ತದೆ.

ಜೈವಿಕ ವ್ಯತ್ಯಾಸಗಳನ್ನು ಆಧರಿಸಿ ಒಂದು ಜನಾಂಗಕ್ಕಿಂತ ಮತ್ತೊಂದು ಜನಾಂಗವು ಹೆಚ್ಚು ಸಮರ್ಥವಾದದ್ದು ಹೆಚ್ಚು ಬುದ್ಧಿಶಾಲಿಯಾದದ್ದು ಎಂದು ವಿಂಗಡಿಸುವುದು ತಪ್ಪು ಎಂದು ಈಗ ನಮಗೆ ತಿಳಿದಿದೆ. ಅಂದರೆ ಜೈವಿಕ ಆಧಾರದ ಮೇಲೆ ಒಟ್ಟು ಜನ ಸಮುದಾಯವನ್ನು ಉತ್ತಮ, ಮಧ್ಯಮ, ಸಾಮಾನ್ಯ ಇತ್ಯಾದಿಯಾಗಿ ಶ್ರೇಣೀಕರಿಸಿದಾಗ ಆ ಶ್ರೇಣೀಕರಣವೇ ಜನತೆಯ ನಡುವಿನ ಅಧಿಕಾರ ಮತ್ತು ಸಂಪನ್ಮೂಲಗಳ ಅಸಮಾನ ಹಂಚಿಕೆಗೆ ಒಂದು ಸಮರ್ಥನೆಯನ್ನು ಒದಗಿಸುತ್ತಿರುತ್ತದೆ. ಇದು ತಪ್ಪು. ಈಗ ಸಂಸ್ಕೃತಿಯ ಆಧಾರದ ಮೇಲೆ ಮನುಷ್ಯ ಸಮುದಾಯವನ್ನು ವರ್ಗೀಕರಿಸಲಾಗುತ್ತಿದೆ. ಸಂಸ್ಕೃತಿಯೆಂಬುದು ಭಾಷೆಯನ್ನೂ ಒಳಗೊಳ್ಳುತ್ತದೆ ಯಾರು ಉಳ್ಳವರು, ಯಾರು ಇಲ್ಲದವರು, ಯಾರಿಗೆ ಹೆಚ್ಚು ಅಧಿಕಾರ ಇರಬೇಕು, ಯಾರಿಗೆ ಹೆಚ್ಚು ಸಂಪನ್ಮೂಲಗಳು ದೊರೆಯಬೇಕು ಇತ್ಯಾದಿಗಳನ್ನು ಈಗ ಜನಾಂಗಗಳನ್ನು ಸಾಂಸ್ಕೃತಿಕವಾಗಿ ವರ್ಗೀಕರಿಸುವ ಮೂಲಕ ನಿರ್ಧರಿಸಲಾಗುತ್ತಿದೆ. ಸಂಸ್ಕೃತಿ ಮತ್ತು ಭಾಷೆಗಳಿಗೆ ಶ್ರೇಣೀಕರಣವನ್ನು ಸಮರ್ಥಿಸುವ ಶಕ್ತಿ ಇದೆಯೆಂದು ನಂಬಲಾಗುತ್ತಿದೆ. ಕೆಲವು ಸಂಸ್ಕೃತಿಗಳಿಗೆ, ಕೆಲವು ಭಾಷೆಗಳಿಗೆ ಸೇರಿದ ಜನರು ಮಾತ್ರ ಅಧಿಕಾರವನ್ನು ನಡೆಸಲು ಯೋಗ್ಯರು, ತಮ್ಮ ಪ್ರಭಾವವನ್ನು ವಿಸ್ತರಿಸಿಕೊಳ್ಳುವುದಕ್ಕೆ ಸಮರ್ಥರು ಎಂದು ತಿಳಿಯಲಾಗುತ್ತಿದೆ. ಇದು ಹೊಸ ರೂಪ, ಹೊಸ ವೇಷಗಳನ್ನು ತಾಳಿ ಬಂದಿರುವ ವರ್ಣ ದ್ವೇಷ, ಜನಾಂಗ

ದ್ವೇಷಗಳಲ್ಲದೆ ಬೇರೇನೂ ಅಲ್ಲ. ನಿಜವಾಗಿ ಇದು ಭಾಷಾದ್ವೇಷ.ಹಿಂದೆ ಭೌತಿಕವಾಗಿ, ದೈಹಿಕ ವಾಗಿ ಮಾತ್ರ ಮನುಷ್ಯರನ್ನು ಆಳಲಾಗುತ್ತಿತ್ತು, ದಮನಿಸಲಾಗುತ್ತಿತ್ತು. ಈಗಿನ ಭಾಷಾ ದ್ವೇಷವು ಇನ್ನೂ ಸೂಕ್ಷ್ಮವಾದದ್ದು. ಇದು ಪ್ರಜ್ಞೆಯನ್ನೇ ಅಧೀನಕ್ಕೊಳಪಡಿಸಿಕೊಳ್ಳು ತ್ತದೆ. ಇದರಿಂದಾಗಿ ದಮನಕ್ಕೊಳಗಾದ ಭಾಷಿಕರ ವಾಸ್ತವದ ಕಲ್ಪನೆಯೇ ಪಲ್ಲಟಕ್ಕೆ ಒಳಗಾಗುತ್ತದೆ. ಪ್ರಧಾನಭಾಷೆಯನ್ನಾಡುವ "ಭಾಷಿಕ ಸಾಮ್ರಾಜ್ಯಶಾಹಿಗಳು" ಯಾವುದನ್ನು ಸತ್ಯ ಅಥವಾ ವಾಸ್ತವಿಕ ಎಂದು ಗ್ರಹಿಸುತ್ತಾರೋ ಅದನ್ನೇ ತಾವೂ ನಂಬಲು ತೊಡಗುತ್ತಾರೆ. ತಮ್ಮ ಸ್ವಂತ ಭಾಷೆ ಮತ್ತು ಸಂಸ್ಕೃತಿಗಳು ಕೆಳಮಟ್ಟದವು, ಪ್ರಧಾನ ಭಾಷೆ ಮತ್ತು ಸಂಸ್ಕೃತಿಗಳು ಉಜ್ವಲವಾದವು ಎಂಬ ಕೀಳರಿಮೆ ಮತ್ತು ವೈಭವೀ ಕರಣಗಳು ಕ್ರಮೇಣ "ವೈಚಾರಿಕ"ವಾಗಿಯೂ ಸತ್ಯವೆನಿಸತೊಡಗುತ್ತವೆ. ನಂತರದ ಹಂತ ದಲ್ಲಿ ಅಸಮಾನತೆಯನ್ನು ಆಧರಿಸಿದ ಸಾಮಾಜಿಕ ಶಕ್ತಿ ಸಂಬಂಧಗಳು "ದೈವದತ್ತ" ಅಥವ "ಸಹಜ" ಎನಿಸತೊಡಗುತ್ತವೆ. ಹೀಗೆ ವಿಕೃತಗೊಂಡ ವಾಸ್ತವದ ಕಲ್ಪನೆಯು ಅಂತರಂಗ ದಲ್ಲಿ ಬೇರುಬಿಟ್ಟು ಬೆಳೆಯತೊಡಗುತ್ತದೆ. ಇಲ್ಲಿ ಒಂದು ಸಂಗತಿಯನ್ನು ನಾವು ನೆನಪಿಡ ಬೇಕು. ಭಾಷೆಯೊಂದಕ್ಕೆ ಮತ್ತೆ ಜೀವ ತುಂಬುವ ಕೆಲಸ ನಡೆದರೂ ದಮನಕ್ಕೊಳಗಾದ ಅವಧಿಯಲ್ಲಿ ಮೂಡಿದ ಮಾನಸಿಕ ಸಂರಚನೆಗಳು ಬದಲಾಗುತ್ತವೆಂಬ ಖಾತ್ರಿಯಿಲ್ಲ. ಇದಕ್ಕೆ ಆಫ್ರಿಕೆಯೇ ಅತ್ಯುತ್ತಮ ಉದಾಹರಣೆ. ಆಫ್ರಿಕನ್ ಭಾಷೆಗಳ ಏಳಿಗೆಗೆ ಎಷ್ಟೇ ಪ್ರಯತ್ನಪಟ್ಟರೂ ಅನ್ಯ ವಿದೇಶೀ ಭಾಷೆಗಳು ವಸಾಹತುಶಾಹಿ ಕಾಲದಲ್ಲಿದ್ದುದ ಕ್ಕಿಂತ ಈಗ "ಹೆಚ್ಚು" ಪ್ರಮಾಣದಲ್ಲಿ ಬಳಕೆಯಾಗತೊಡಗಿವೆ. ಭಾಷೆಯೊಂದರ ಪುನರುಜ್ಜೀವನ ಪ್ರಯತ್ನದಲ್ಲಿ ಇಂಥ ಪ್ರಸಂಗಗಳೂ ಎದುರಾಗಬಹುದು.

ಸಾಮ್ರಾಜ್ಯಶಾಹೀವಾದ, ಜನಾಂಗಭೇದವಾದ, ಲಿಂಗಭೇದವಾದ ಮುಂತಾದವುಗಳು ಬಳಸುವ ನಿಯಂತ್ರಣ ತಂತ್ರಗಳು ಸೂಕ್ಷ್ಮಗೊಳ್ಳುತ್ತ ಹೋದ ಚರಿತ್ರೆಗೂ, ಭಾಷಾದ್ವೇಷದ ಬೆಳವಣಿಗೆಗೂ ಅನೇಕ ಸಮಾನ ಅಂಶಗಳಿವೆ. ಮೊದಲಾದರೆ ಅಲ್ಪಸಂಖ್ಯಾತ ಸಮುದಾಯ ಗಳಿಗೆ ಸೇರಿದ ಮಕ್ಕಳು ತಮ್ಮ ಮಾತೃಭಾಷೆಯನ್ನು ಬಳಸದಂತೆ, ತಮ್ಮ ಭಾಷಿಕರೊಂದಿಗೆ ಸಂಪರ್ಕ ಇಟ್ಟುಕೊಳ್ಳದಂತೆ "ದೈಹಿಕವಾಗಿ" ಪ್ರತಿಬಂಧಿಸಲಾಗುತ್ತಿತ್ತು. "ದೈಹಿಕ ಶಿಕ್ಷೆ" ವಿಧಿಸಲಾಗುತ್ತಿತ್ತು. ಈಗ ಅಲ್ಪಸಂಖ್ಯಾತ ಸಮುದಾಯಗಳಿಗೆ ಸೇರಿದ ಮಕ್ಕಳಿಗೆ ತಮ್ಮ ಭಾಷೆಯ ಬಗ್ಗೆ ನಾಚಿಕೆ ಹುಟ್ಟುವಂತೆ ಮಾಡಲಾಗುತ್ತಿದೆ, ತಮ್ಮ ಭಾಷೆಯ ನ್ನಾಡುವ ಜನರೊಂದಿಗೆ ಒಡನಾಟವಿಟ್ಟುಕೊಳ್ಳುವುದು ಅಪಮಾನದ ಸಂಗತಿ ಎಂಬ ಧೋರಣೆಯನ್ನು ಬೆಳೆಸಲಾಗುತ್ತಿದೆ. ಭಾಷಾದ್ವೇಷ ಈಗ ಮಾನಸಿಕ ರೂಪ ತಳೆದಿದೆ. ಇತರ ಭಾಷೆಗಳನ್ನು ಕುರಿತು ಸಹನೆ ಇರುವ ಎಡೆಗಳಲ್ಲೂ, ವ್ಯಕ್ತರೂಪದ ಭಾಷಾದ್ವೇಷ ಇಲ್ಲದ ಎಡೆಗಳಲ್ಲೂ ಇದು ಕಾಣತೊಡಗಿದೆ. ಇತರ ಭಾಷೆಗಳ ಬಗೆಗೆ ಸಹನೆ, ಇತರ ಭಾಷಾ ಬಳಕೆಯ ಬಗೆಗೆ ತೋರಿಕೆಯ ಉದಾರತೆ ಇವುಗಳೆಲ್ಲ ಭಾಷಾದ್ವೇಷದ ಇತರ ರೂಪಗಳೇ ಆಗಿವೆ.

ಹೇಗೆ ಜನಾಂಗದ್ವೇಷ ವಿರೋಧೀ ಶಿಕ್ಷಣ ನೀತಿಯು ಮಾತ್ರ ಜನಾಂಗ ದ್ವೇಷವನ್ನು ಕೊನೆಗಾಣಿಸಲು ಸಹಾಯಕವಾಗಲಾರದೋ ಹಾಗೆಯೇ ಭಾಷಾದ್ವೇಷ ವಿರೋಧೀ ಶಿಕ್ಷಣ ನೀತಿಯು ಮಾತ್ರ ಭಾಷಾದ್ವೇಷವನ್ನು ಕೊನೆಗಾಣಿಸಲಾರದು. ಅಂದರೆ, ಅಧೀನ ಭಾಷೆಗಳಿಗೆ ಪ್ರಕಟವಾಗಿ, ಅತಿ ಹೆಚ್ಚಿನ ಪ್ರಮಾಣದಲ್ಲಿ ಕುಮ್ಮಕ್ಕು ನೀಡುವುದು ಮಾತ್ರ ಸರಿಯಾದ ಉಪಾಯವಾಗುತ್ತದೆ.

## ೬. ಪುನರುಜ್ಜೀವನದ ನಿರಂತರತೆ ಮತ್ತು ಸಮೂಹದ ಮಾತೃಭಾಷೆ
(Revitalisation continuum and the mother tongue of a group)

ಅಲ್ಪಸಂಖ್ಯಾತ ಸಮೂಹಗಳಿಗೆ ಸೇರಿದ ಮಕ್ಕಳು ತಮ್ಮ ಮಾತೃಭಾಷೆಯನ್ನು ಬಳಸದಂತೆ, ಅವರ ಭಾಷಿಕ ಮಾನವ ಹಕ್ಕುಗಳಿಗೆ ಅಡ್ಡಿಯನ್ನುಂಟುಮಾಡುವ ನಿರಂತರತೆಯನ್ನು ಇದುವರೆಗೆ ಎತ್ತಿ ಹೇಳಲಾಯಿತು. ಆದರೆ ಇದರ ವಿರುದ್ಧ ದಿಕ್ಕಿನ ಚಲನೆಯೂ ಒಂದಿದೆ. ಅಲ್ಪ ಪ್ರಮಾಣದಲ್ಲಿ ಬಳಕೆಯಾಗುತ್ತಿರುವ ಒಂದು ಭಾಷೆಯು ಮತ್ತೆ ಪ್ರಬಲವಾಗತೊಡಗಿದಾಗ ಪುನರುಜ್ಜೀವನದ ನಿರಂತರತೆಯು ಆರಂಭವಾಗುತ್ತದೆ. ಉದಾಹರಣೆಗೆ ಮಾನ್ಕ್ಸ್ ಭಾಷೆ. ಕೆಲವೇ ವರ್ಷಗಳ ಹಿಂದೆ ಅದನ್ನು ಮಾತೃಭಾಷೆಯಾಗಿ ಉಳ್ಳವರು ಇರಲೇ ಇಲ್ಲ. ಆದರೆ ಈಗ ಇದ್ದಾರೆ. ಆ ಭಾಷೆ ಮತ್ತೆ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುವತ್ತ ಸಾಗತೊಡಗಿದೆ. ಹೀಗಾದಾಗ ಉಂಟಾಗುವ ಪ್ರಕ್ರಿಯೆಯನ್ನು ಪುನರುಜ್ಜೀವನದ ನಿರಂತರತೆಯೆಂದು ಗುರುತಿಸಬಹುದು. ಆದರೆ ಈ ಪ್ರಕ್ರಿಯೆಯಿಂದ ಭಾಷಾದ್ವೇಷದ ನಿರಂತರತೆಯ ಪ್ರಕ್ರಿಯೆಗೆ ಹಿನ್ನಡೆ ಉಂಟಾಗುತ್ತದೆಯೇ? ಈ ಪ್ರಶ್ನೆಗೆ ಉತ್ತರವಾಗಿ ಕೆಲವು ಊಹೆಗಳನ್ನು ಮಾತ್ರ ಮಾಡಬಹುದು. ಒಂದು ವೇಳೆ ಭಾಷೆಯೊಂದರ ಪುನರುಜ್ಜೀವನ ಪರಿಸ್ಥಿತಿಯಲ್ಲಿ ಬೇರೆಯದೇ ರೀತಿಯ ಭಾಷಾ ನೀತಿಗಳನ್ನು ರೂಪಿಸಿಕೊಳ್ಳಬೇಕಿದ್ದರೆ, ಅಂಥ ಭಾಷೆಯನ್ನಾಡುವ ಅಲ್ಪಸಂಖ್ಯಾತರ ಶೈಕ್ಷಣಿಕ-ಭಾಷಿಕ ಹಕ್ಕುಗಳು ವೈಯಕ್ತಿಕ ಮತ್ತು ಸಾಮೂಹಿಕ ಹಕ್ಕುಗಳನ್ನೂ ಒಳಗೊಂಡಿರಬೇಕು ಎಂದಾದರೆ, ಪುನರುಜ್ಜೀವನದ ಪ್ರಕ್ರಿಯೆಯ ವಿವಿಧ ಹಂತಗಳನ್ನು ಸ್ಪಷ್ಟಗೊಳಿಸಿಕೊಳ್ಳಬೇಕಾದರೆ ಮತ್ತು ಇಂಥ ಪುನರುಜ್ಜೀವನದಲ್ಲಿ ಭಾಗಿಯಾಗಿರುವ ಜನ ಸಮುದಾಯದ ಭಾಷಿಕ ಹಕ್ಕುಗಳನ್ನು ಖಚಿತಗೊಳಿಸಿಕೊಳ್ಳಬೇಕಾದರೆ, ಒಂದು ಗುಂಪಿನ ಮಾತೃಭಾಷೆಗೂ, ಒಂದು ಇಡೀ ಜನಾಂಗದ ಮಾತೃಭಾಷೆಗೂ, ಆ ಗುಂಪುಗಳಲ್ಲಿರುವ ವ್ಯಕ್ತಿಗಳ ಮಾತೃಭಾಷೆ(ಗಳ)ಗೂ ಇರುವ ಸಂಬಂಧವನ್ನು ಸ್ಪಷ್ಟಗೊಳಿಸಿಕೊಳ್ಳಬೇಕಾಗುತ್ತದೆ.

ಗುಂಪುಗಳ ಮಾತೃಭಾಷೆಯನ್ನು ವಿವರಿಸಲು ನಾನು ವೈಯಕ್ತಿಕ ಮಾತೃಭಾಷೆಯ ನಿರ್ವಚನವನ್ನು ಬಳಸಿಕೊಳ್ಳುತ್ತೇನೆ ಒಂದು ಗುಂಪಿನ ಮಾತೃಭಾಷೆಯ ನಿರ್ವಚನಗಳನ್ನು ಏರಿಕೆಯ ಮತ್ತು ಇಳಿಕೆಯ ಕ್ರಮಗಳಲ್ಲಿ ಜೋಡಿಸುತ್ತೇನೆ. ಇದರಿಂದ ಭಾಷಾಹತ್ಯೆ ಮತ್ತು ಭಾಷಾ ಪುನರುಜ್ಜೀವನದ ಪ್ರಕ್ರಿಯೆಗಳ ವಿವಿಧ ಹಂತಗಳನ್ನು ಗುರುತಿಸ

ಕೊಳ್ಳಲು ಸಹಾಯವಾಗುತ್ತದೆ. ಆನಂತರ ನಿಯೋಗ, ಸಾಮರ್ಥ್ಯ, ಮೂಲ, ಹೊರ ಧೋರಣೆಗಳು ಮತ್ತು ಒಳ ಧೋರಣೆಗಳನ್ನು ಆಧರಿಸಿ ಭಾಷಿಕ ಹಕ್ಕುಗಳನ್ನು ಕುರಿತು ಇರುವ ಎಚ್ಚರದ ಪ್ರಮಾಣವನ್ನು ಗುರುತಿಸಬಹುದು.

ಕಛೇರಿ, ಸಾರ್ವಜನಿಕ ಆಡಳಿತ, ಶಿಕ್ಷಣ ಮುಂತಾದ ವಲಯಗಳಲ್ಲಿ ಭಾಷೆಯೊಂದರ ಬಳಕೆಗೆ ಪ್ರಕಟ ರೂಪದಲ್ಲಿ ನಿಷೇಧಗಳಿದ್ದಾಗ ಅಥವಾ ಆ ಭಾಷೆಯ ಬಳಕೆಗೆ ಪ್ರಕಟ ರೀತಿಯಲ್ಲಿ ಕುಮ್ಮಕ್ಕು ಇರದಿದ್ದಾಗ ಆ ಭಾಷೆಯ ಬಳಕೆ ನಿಲ್ಲತೊಡಗುತ್ತದೆ. ಹೀಗೆ ಭಾಷೆಯ ಬಳಕೆ ನಿಂತು ಹೋದಾಗ ಅದು ನಿಯೋಗತತ್ವವನ್ನು ಆಧರಿಸಿದ ಮಾತೃಭಾಷೆಯ ನಿರ್ವಚನದ ಪ್ರಕಾರ ಒಂದು ಗುಂಪಿನ ಮಾತೃಭಾಷೆಯಾಗಿ ಉಳಿಯುವುದೇ ಇಲ್ಲ. ಏಕೆಂದರೆ ಆ ಭಾಷೆಯನ್ನು ಜನ ಅತಿ ಹೆಚ್ಚಾಗಿ ಬಳಸುತ್ತಿರುವುದಿಲ್ಲ. ಆದರೆ ವೈಯಕ್ತಿಕ ನೆಲೆಯಲ್ಲಿ ಆ ಭಾಷೆಯ ಬಳಕೆಯಲ್ಲಿ ವೈವಿಧ್ಯಗಳೂ ವ್ಯತ್ಯಾಸಗಳೂ ಕಾಣುತ್ತವೆ. ಕೆಲವರು ಅನ್ಯಭಾಷೆಯನ್ನು, ದ್ವಿತೀಯ ಭಾಷೆಯನ್ನು ಹೆಚ್ಚಾಗಿ ಬಳಸುತ್ತಿರಬಹುದು. ಕಡಿಮೆ ಶಿಕ್ಷಣವನ್ನು ಹೊಂದಿರುವ, ಅಂದರೆ ಆಡಳಿತ ಮತ್ತು ಶಿಕ್ಷಣ ಕ್ಷೇತ್ರಗಳೊಂದಿಗೆ ಹೆಚ್ಚಿನ ಸಂಪರ್ಕವಿಲ್ಲದ, ಹಳ್ಳಿಗಾಡಿನ ಜನ ಮತ್ತು ಮಹಿಳೆಯರು(?) ತಮ್ಮ ಮಾತೃ ಭಾಷೆಯನ್ನೇ ಬಳಸುತ್ತಿರಬಹುದು. 'ಹೀಗಾದಾಗ ನಿಯೋಗ ತತ್ವವನ್ನು ಆಧರಿಸಿದ ನಿರ್ವಚನದ ಪ್ರಕಾರ, ದ್ವಿತೀಯ ಭಾಷೆಯು ಇಡೀ ಜನಸಂಖ್ಯೆಯ ಮಾತೃಭಾಷೆಯಾಗಿಯೂ, ಪ್ರಥಮ ಭಾಷೆಯು ಕೆಲವು ವ್ಯಕ್ತಿಗಳ ಮಾತೃಭಾಷೆಯಾಗಿಯೂ ಉಳಿದಿರುತ್ತದೆ. ಈ ಮಾತೃ ಭಾಷೆಯನ್ನು ಬಳಸುವ ಜನರು ಒಟ್ಟು ಜನ ಸಮುದಾಯದಲ್ಲಿ ಬಹುಸಂಖ್ಯಾತರೇ ಆಗಿದ್ದಿರ ಬಹುದು. ಆದರೆ ಅವರು ಅಧಿಕಾರ ಹೀನ, ದುರ್ಬಲ ಬಹುಸಂಖ್ಯಾತರಾಗಿರುತ್ತಾರೆ. ಸಂವಿಧಾನದ ಮತ್ತು ಆಡಳಿತದ ವಲಯಗಳು ದ್ವಿತೀಯ ಭಾಷೆಯ ಆಧೀನಕ್ಕೆ ಒಳಪಟ್ಟಿರುತ್ತವೆ. ಅಧಿಕಾರಶಾಹಿಗೆ ಸಂಖ್ಯಾಪರಿಮಾಣಗಳೇ ಮುಖ್ಯವಾಗಿರುತ್ತವೆ. ನಿಯೋಗ ತತ್ವವನ್ನು ಆಧರಿಸಿದ ಮಾತೃಭಾಷೆಯನ್ನು ಕುರಿತ ನಿರ್ವಚನವು ಮಾತೃಭಾಷೆಗಿಂತ ಹೆಚ್ಚಾಗಿ ಸಮಾಜದ ಅಧಿಕಾರ-ಶಕ್ತಿ ಸಂಬಂಧಗಳನ್ನು ಕುರಿತು ಹೇಳುತ್ತಿರುತ್ತದೆ.

ಮುಖ್ಯವಾಗಿ ಶೈಕ್ಷಣಿಕ ವಲಯದಲ್ಲಿ ಭಾಷೆಯೊಂದರ ಬಳಕೆ ನಿಂತು ಹೋಗ ಬಹುದು. ಆಗ ಜನರ ಭಾಷಿಕ ಸಾಮರ್ಥ್ಯದ ಮೇಲೆ ಶೀಘ್ರವಾಗಿ ದುಷ್ಪರಿಣಾಮಗಳಾಗುತ್ತವೆ. ಫ್ರಾಂಕೋನ ಅವಧಿಯಲ್ಲಿ ಬಾಸ್ಕ್ ಭಾಷೆಯ ಮೇಲೆ ಇಂಥ ಪರಿಣಾಮಗಳು ಆದದ್ದನ್ನು ಕಾಣುತ್ತೇವೆ. ೧೯೩೦ರ ದಶಕದಲ್ಲಿ ಬಾಸ್ಕ್ ಭಾಷೆಯನ್ನು ಶಿಕ್ಷಣ ಕ್ಷೇತ್ರದಲ್ಲಿ ಬಳಸಬಾರದೆಂಬ ನಿರ್ಬಂಧಗಳಿದ್ದವು. ಆ ಸಮಯದಲ್ಲಿ ಬೆಳೆದು ದೊಡ್ಡವರಾಗಿ ಮುಂದೆ ೧೯೭೬-೭೭ರಲ್ಲಿ ಶಿಕ್ಷಕರಾದವರ ಪೈಕಿ ೯೫.೪% ಜನಕ್ಕೆ ಬಾಸ್ಕ್ ಭಾಷೆ ತಿಳಿದಿರಲೇ ಇಲ್ಲ. ಬಾಸ್ಕ್ ಭಾಷೆ ತಿಳಿದಿದ್ದ ಶಿಕ್ಷಕರು ೧೯೩೬ಕ್ಕೂ ಹಿಂದಿನ, ಬಾಸ್ಕ್ ಬಳಕೆಯ ಬಗ್ಗೆ ನಿಷೇಧಗಳು ಇಲ್ಲದಿದ್ದ ತಲೆಮಾರಿಗೆ ಸೇರಿದವರಾಗಿದ್ದರು.

ಆಂಶಿಕ ಭಾಷಾ ಪಲ್ಲಟಗಳ ಸಂದರ್ಭದಲ್ಲಿ ಮಾತೃಭಾಷೆಯ ಉಪಯೋಗವು ಕೆಲವೇ ವಲಯಗಳಿಗೆ ಸೀಮಿತಗೊಂಡು ಇತರ ವಲಯಗಳಲ್ಲಿ ದ್ವಿತೀಯ ಭಾಷೆಯ ಬಳಕೆ ಹೆಚ್ಚುತ್ತದೆಯಷ್ಟೆ. ಹೀಗಾದಾಗ ಜನ ಸಮುದಾಯದಲ್ಲಿ ಎರಡು ಸ್ತರಗಳ ಭಾಷಿಕತೆ **Diaglossia** ಉಂಟಾಗುತ್ತದೆ. ಆಗ ಸಾಮರ್ಥ್ಯ ತತ್ವಕ್ಕೆ ಅನುಸಾರವಾಗಿ ಮಾಡುವ ನಿರ್ವಚನದಂತೆ ಕೆಲವು ವಲಯಗಳಲ್ಲಿ ಪ್ರಥಮ ಭಾಷೆಯೇ ಮಾತೃಭಾಷೆಯಾಗಿಯೂ ಇನ್ನು ಕೆಲವು ವಲಯಗಳಲ್ಲಿ ದ್ವಿತೀಯ ಭಾಷೆಯೇ ಮಾತೃಭಾಷೆಯಾಗಿಯೂ ಇರುತ್ತದೆ. ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣವನ್ನು ಸಾಧಿಸಲಾಗದ ದೇಶಗಳಲ್ಲಿ ಇದು ಸಾಮಾನ್ಯ ಪರಿಸ್ಥಿತಿಯಾಗಿರುತ್ತದೆ. ಇಂಥ ದೇಶಗಳಲ್ಲಿ ಅಧಿಕಾರದ ಶ್ರೇಣೀಕರಣಕ್ಕೂ ಶಿಕ್ಷಣದ ಶ್ರೇಣೀಕರಣಕ್ಕೂ ನೇರವಾದ ಸಂಬಂಧವಿರುತ್ತದೆ. ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣವಿಲ್ಲದ ದೇಶಗಳಲ್ಲಿ ಬಹುಸಂಖ್ಯಾತರು ತಮ್ಮ ಪ್ರಥಮ ಭಾಷೆಯನ್ನೇ ನಿಷೇಧಿತ, ಸಾರ್ವಜನಿಕ ವಲಯಗಳಲ್ಲೂ ಸಮರ್ಥವಾಗಿ ಬಳಸುತ್ತಿರಬಹುದು. ಕುರ್ದಿಸ್ತಾನದ ಟರ್ಕಿ ಪ್ರದೇಶದಲ್ಲಿ ವಾಸಿಸುವ ಕುರ್ದರು ಇದಕ್ಕೆ ಒಂದು ಉದಾಹರಣೆ. ಜನಸಂಖ್ಯೆಯ ಹೆಚ್ಚಿನ ಭಾಗವು ಅನ್ಯ ಭಾಷಾ ಮಾಧ್ಯಮದ ಶಾಲೆಗಳ ಸಂಪರ್ಕಕ್ಕೆ ಬರುವುದೇ ಇಲ್ಲವಾದ್ದರಿಂದ ಅವರು ನಿಷೇಧಿತ ಪ್ರಥಮ ಭಾಷೆಯ ಸಾಮರ್ಥ್ಯವನ್ನು ಉಳಿಸಿಕೊಳ್ಳುವಲ್ಲಿ ಸಫಲರಾಗುತ್ತಾರೆ. ಅಂದರೆ, ಸಾಮರ್ಥ್ಯ ತತ್ವವನ್ನು ಆಧರಿಸಿ ಮಾಡುವ ನಿರ್ವಚನದ ಪ್ರಕಾರ ಮಾತೃಭಾಷೆಯನ್ನು ಕುರಿತು ತಿಳಿಯುವುದಕ್ಕಿಂತ, ವಿವಿಧ ವಲಯಗಳಿಗೆ ಸಂಬಂಧಿಸಿದಂತೆ ಸಾಮರ್ಥ್ಯ ವೃದ್ಧಿಯ ಅವಕಾಶಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುತ್ತದೆ. ಯಾವ ವಲಯವನ್ನು ಯಾವ ಭಾಷೆಯಲ್ಲಿ ಅಭಿವೃದ್ಧಿಪಡಿಸಬೇಕೆಂಬ ಅಧಿಕಾರ ಯಾರಿಗೆ ಇದೆ ಎಂದು ತಿಳಿಯುತ್ತದೆ.

(ಭಾಷೆಯೊಂದನ್ನು ಬಳಸುವ ಸಾಮರ್ಥ್ಯವು ಸಂಪೂರ್ಣವಾಗಿ ಇಲ್ಲವಾದಾಗ ಏನಾಗುತ್ತದೆಂಬುದನ್ನು ತಿಳಿಯುವುದಕ್ಕೆ ನಮಗೆ ಪರಿಚಿತವಾದ ಕನ್ನಡ ಮತ್ತು ಇಂಗ್ಲೀಷಿನ ಉದಾಹರಣೆಗಳನ್ನಿಟ್ಟುಕೊಂಡು ನೋಡೋಣ. ೧. ಕನ್ನಡವನ್ನು ಬಳಸುವ ಸಾಮರ್ಥ್ಯವು ಪೂರ್ತಿ ಹೊರಟೇ ಹೋಯಿತೆಂದುಕೊಳ್ಳೋಣ. ಆಗ ತಂದೆ ತಾಯಿಗಳು ತಮ್ಮ ಮಕ್ಕಳಿಗೆ ಪ್ರಥಮ ಭಾಷೆಯಾದ ಕನ್ನಡವನ್ನು ಮಾತೃಭಾಷೆಯಾಗಿ ಹೇಳಿಕೊಡುವುದೇ ಇಲ್ಲ. ೨. ಆದರೆ ಇಂಥ ಸ್ಥಿತಿ ಒದಗುವುದಕ್ಕೂ ಬಹಳ ಮೊದಲೇ ತಂದೆ ತಾಯಿಗಳು ತಮ್ಮ ಮಕ್ಕಳೊಂದಿಗೆ ದ್ವಿತೀಯ ಭಾಷೆಯಾದ ಇಂಗ್ಲೀಷಿನಲ್ಲಿ ಮಾತನಾಡಲು ತೊಡಗಿರುತ್ತಾರೆ. ದ್ವಿತೀಯ ಭಾಷಾ ಬಳಕೆಯ ಈ ಪರಿಸ್ಥಿತಿಯು ಅಲ್ಪಸಂಖ್ಯಾತ ವಲಸೆಗಾರರು ಇರುವ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಅಲ್ಲದೆ ಮೇಲುವರ್ಗದ ಜನರು ತಾವು ಯಾವುದನ್ನು "ಅಧಿಕ ಸೌಲಭ್ಯಗಳು" ಎಂದು ಭಾವಿಸುತ್ತಾರೋ ಅದು ತಮ್ಮ ಮಕ್ಕಳಿಗೆ ದೊರೆಯಲಿ ಎಂಬ ಅಭಿಲಾಷೆಯಿಂದಲೂ ಹೀಗೆ ಮಾಡತೊಡಗಬಹುದು. ೩. ಕೆಲವು ಸಂದರ್ಭಗಳಲ್ಲಿ ಮನೆಯ ಮಕ್ಕಳು ತಮ್ಮ ತಮ್ಮ ನಡುವೆ ದ್ವಿತೀಯ ಭಾಷೆಯಾದ ಇಂಗ್ಲೀಷಿನಲ್ಲಿ ಮಾತನಾಡಿಕೊಳ್ಳುತ್ತಾ ತಂದೆತಾಯಿಯರೊಂದಿಗೆ ಪ್ರಥಮ ಭಾಷೆ ಕನ್ನಡದಲ್ಲಿ

ಮಾತನಾಡಬಹುದು. ೪. ಮಕ್ಕಳು ತಮ್ಮ ತಮ್ಮ ನಡುವೆ ಮತ್ತು ತಂದೆ ತಾಯಿಯ ರೊಡನೆ ಇಂಗ್ಲಿಷಿನಲ್ಲೇ ಮಾತನಾಡತೊಡಗಬಹುದು. ೫. ತಂದೆತಾಯಿಗಳು ಇಂಗ್ಲಿಷನ್ನು ಬಳಸುವ ಮಕ್ಕಳಿಗೆ ಕನ್ನಡದಲ್ಲಿ ಉತ್ತರವನ್ನು ನೀಡಬಹುದು ೬. ಅಪ್ಪ ಅಮ್ಮಂದಿರು ತಮ್ಮತಮ್ಮಲ್ಲಿ ಕನ್ನಡವನ್ನೇ ಬಳಸುತ್ತಾ ಮಕ್ಕಳೊಂದಿಗೆ ಇಂಗ್ಲೀಷನ್ನು ಬಳಸಬಹುದು. ೭. ಅಪ್ಪ ಅಮ್ಮಂದಿರು ತಮ್ಮ ತಮ್ಮ ನಡುವೆ ಇಂಗ್ಲೀಷನ್ನು ಬಳಸುತ್ತಾ ತಮ್ಮ ಹಿರಿಯ ತಲೆಮಾರಿನೊಂದಿಗೆ ಮಾತನಾಡುವಾಗ ಕನ್ನಡವನ್ನು ಬಳಸಬಹುದು.) ಒಂದೇ ಮನೆಯಲ್ಲಿ ವಿವಿಧ ತಲೆಮಾರುಗಳ ನಡುವೆ ಭಿನ್ನ ಭಾಷಾ ಬಳಕೆಗಳ ಕುತೂಹಲಕಾರೀ ಅಧ್ಯಯನವನ್ನು ನಡೆಸಲಾಗಿದೆ.

'ಮೂಲ' ತತ್ವವನ್ನು ಆಧರಿಸಿದ ನಿರ್ವಚನದ ಪ್ರಕಾರ ಪ್ರಥಮ ಭಾಷೆಯೊಂದು ವ್ಯಕ್ತಿಗಳ ಮಾತೃಭಾಷೆಯಾಗಿಲ್ಲದಿದ್ದರೂ ಒಟ್ಟು ಜನಸಂಖ್ಯೆಯ ಮೂಲ ಮಾತೃಭಾಷೆ ಯಾಗಿರಬಹುದು....

ಆಂತರಿಕ ಅಥವಾ ಬಾಹ್ಯಚಹರೆಯನ್ನು ಆಧರಿಸಿ ಮಾತೃಭಾಷೆಯನ್ನು ನಿರ್ವಚಿ ಸುವುದು ಮುಖ್ಯವಾಗಿ ಐಡಿಯಾಲಜಿಯನ್ನು ಆಧರಿಸಿಕೊಂಡಿರುತ್ತದೆ ಆರ್ಥಿಕ ಮತ್ತು ಸಾಮಾಜಿಕ ಪ್ರಾಬಲ್ಯವು ವರ್ಗವು ಭಾಷೆಯೊಂದಿಗೆ ತಮ್ಮನ್ನು ತಾವು ಗುರುತಿಸಿಕೊಳ್ಳುವುದು ಲಾಭಕರವೋ ಅಲ್ಲವೋ ಎಂಬುದನ್ನು ನಿರ್ಧರಿಸುತ್ತಿರುತ್ತದೆ....

ಮೊದಲು ಬದಲಾಗಬೇಕಾದದ್ದು "ಶಿಕ್ಷಣವೋ" ಅಥವಾ "ಸಮಾಜವೋ" ಎಂಬ ಪ್ರಶ್ನೆಯನ್ನು ಈ ಲೇಖನದ ಆರಂಭದಲ್ಲಿ ಎತ್ತಲಾಯಿತು. ಈಗ ಆ ಪ್ರಶ್ನೆಯನ್ನು ಭಾಷೆಯ "ಬಳಕೆ" ಮತ್ತು ಭಾಷೆಯ "ಸಾಮರ್ಥ್ಯ"ಗಳ ನಡುವಿನ ಸಂಬಂಧ ಎಂದು ವಿವರಿಸಬಹುದೆಂದು ತೋರುತ್ತದೆ. ಶಾಲೆಗಳು ಸಾಮರ್ಥ್ಯವನ್ನು ನೀಡಬಹುದು ಆದರೆ ಶಾಲಾವ್ಯವಸ್ಥೆಯ ಆಚೆಗೆ ಭಾಷಾ ಬಳಕೆಯ ಅವಕಾಶಗಳನ್ನು ಕಲ್ಪಿಸಿಕೊಡಲಾರವು. ಇದೇ ಐರ್ಲೆಂಡಿನಲ್ಲಿ ನಡೆಯುತ್ತಿರುವ ಭಾಷಾ ಪುನರುಜ್ಜೀವನ ಪ್ರಯತ್ನಗಳ ದುರಂತ ವಾಗಿದೆ. ಬಳಕೆಯ ಅವಕಾಶವಿಲ್ಲದಿದ್ದರೆ ಭಾಷಾ ಸಾಮರ್ಥ್ಯವನ್ನು ವೃದ್ಧಿಪಡಿಸಿಕೊಳ್ಳುವ ಆಕಾಂಕ್ಷೆ ಬೆಳೆಯಲಾರದು. ಅಲ್ಲದೆ ಸಂಪಾದಿಸಿದ ಅಲ್ಪ ಸಾಮರ್ಥ್ಯವೂ ನಶಿಸತೊಡಗುತ್ತದೆ. ಸಾಮಾಜಿಕ ವರ್ಗಗಳಲ್ಲಿರುವ ಶಕ್ತಿ ಸಂಬಂಧಗಳ ಸ್ವರೂಪವು ಭಾಷಾ ಬಳಕೆಯ ವಿನ್ಯಾಸ ವನ್ನೂ ನಿರ್ಧರಿಸುತ್ತಿರುತ್ತದೆ. ಭಾಷೆಯ ಸಾವು, ಭಾಷೆಯ ಹತ್ಯೆ, ಭಾಷೆಯ ಪುನರುಜ್ಜೀವನ ಇವೆಲ್ಲ ಪ್ರಕ್ರಿಯೆಗಳೂ ತಮ್ಮಷ್ಟಕ್ಕೆ ತಾವೇ ನಡೆಯಲಾರವು. ಈ ಪ್ರಕ್ರಿಯೆಗಳು ಆರ್ಥಿಕ ಮತ್ತು ರಾಜಕೀಯ ಅಭಿವೃದ್ಧಿಯ ಪ್ರಕ್ರಿಯೆಗಳೊಂದಿಗೆ ಸಮಾನಾಂತರವಾಗಿ ಸಾಗುತ್ತವೆ. ಭಾಷಿಕ ಅಭಿವೃದ್ಧಿಯಲ್ಲಿ ಆಗುವ ಎಲ್ಲ ಬದಲಾವಣೆಗಳೂ ಅಥವಾ ನೀಡಲಾಗುವ ಎಲ್ಲ ಸವಲತ್ತುಗಳೂ ಸಮಾಜದ ಮೇಲು ವರ್ಗಗಳು ತಮ್ಮ ಹಿತವನ್ನು ಕಾಪಾಡಿಕೊಳ್ಳಲು ಮಾಡಿಕೊಳ್ಳುವ ಹೊಂದಾಣಿಕೆಗಳ ಇನ್ನೊಂದು ರೂಪವೇ ಆಗಿರುತ್ತವೆ. ತಮ್ಮ

ಪ್ರಾಧಾನ್ಯವನ್ನು ಭಾಷೆಯನ್ನಾಧರಿಸಿ ಗುರುತಿಸಿಕೊಳ್ಳುವುದರಿಂದ ಆಗುವ ಪರಿಣಾಮಗಳು ಹೀಗಿರುತ್ತವೆ: ಸಂವಹನ ಮಾಧ್ಯಮದ ಮೇಲೆ ಅಧಿಕಾರ ಪ್ರಾಪ್ತವಾಗುತ್ತದೆ; ಭಾಷೆಯೇ ಮುಖ್ಯ ಉಪಕರಣವಾಗಿರುವ ಶಿಕ್ಷಣ ವ್ಯವಸ್ಥೆಯಲ್ಲಿ ಯಶಸ್ಸು ಸುಲಭ ಸಾಧ್ಯವಾಗುತ್ತದೆ; ಅಧಿಕೃತವಾದ 'ಜ್ಞಾನ'ವೆಂದರೆ ಏನು, ಕೌಶಲವೆಂದರೆ ಏನು ಎಂಬುದನ್ನು ವ್ಯಾಖ್ಯಾನಿಸುವ ಹಕ್ಕು ದೊರೆಯುತ್ತದೆ. ಭಾಷಾಪತ್ಯೆಯ ಮುಖ್ಯ ಉದ್ದೇಶವೇ ಅಧಿಕಾರದ ಹಕ್ಕನ್ನು ಸ್ಥಾಪಿಸುವುದಾಗಿರುತ್ತದೆ ಮತ್ತು ಸಾಮಾಜಿಕ ವಾಸ್ತವದ ಪರಿಕಲ್ಪನೆಯ ನಿರ್ವಚನದ ಏಕಸ್ವಾಮ್ಯವನ್ನು ಮುಂದುವರೆಸುವುದಾಗಿರುತ್ತದೆ...

ನಾವು ತಲುಪಬಹುದಾದ ತೀರ್ಮಾನ ಹೀಗಿರಬಹುದು: ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಶ್ರೇಣೀಕರಣವನ್ನು ಇರುವಂತೆಯೇ ಉಳಿಸಿಕೊಳ್ಳುವುದಕ್ಕಾಗಿಯೇ ಭಾಷಾ ಶಿಕ್ಷಣವನ್ನು ಉಪಯೋಗಿಸಿಕೊಳ್ಳಲಾಗುತ್ತಿರುವುದರಿಂದ, ಸಮಾಜದಲ್ಲಿರುವ "ಶಕ್ತಿ ಸಮೀಕರಣ"ವು ವ್ಯತ್ಯಾಸ ಹೊಂದಿದಾಗ ಮಾತ್ರ ಭಾಷಾ ಶಿಕ್ಷಣವು ಬದುಕಿನಲ್ಲಿ ಬದಲಾವಣೆಯನ್ನು ತರಬಹುದು. ಆದರೆ ನಮ್ಮೆದುರು ಇರುವ ಕೆಲವು ಉದಾಹರಣೆಗಳಿಂದ ದುರ್ಬಲ ಅಲ್ಪಸಂಖ್ಯಾತರು ಪ್ರತಿ ಶ್ರೇಣೀಕರಣವನ್ನು ಸಾಧಿಸಲು ಭಾಷಾ ಶಿಕ್ಷಣವನ್ನು ಬಳಸಿಕೊಳ್ಳಬಹುದು ಎಂದೂ ತಿಳಿದಿದೆ. ಆದರೆ, ಭಾಷೆಯ ಪುನರುಜ್ಜೀವನ ಸಂದರ್ಭದಲ್ಲಿ ಸಹನೆಯನ್ನು ತೋರುವುದು, ಭಾಷೆಯ ಉಳಿವಿಗೆ ಸಹಾಯ ಘೋಷಿಸುವುದು ಇತ್ಯಾದಿ ಕ್ರಿಯೆಗಳು, ಪ್ರಧಾನ ವರ್ಗಗಳು ತಮ್ಮ ಹಿತವನ್ನು ಕಾಯ್ದುಕೊಳ್ಳಲು ಬಳಸುತ್ತಿರುವ ಅತಿ ಪರಿಷ್ಕೃತ ಸೂಕ್ಷ್ಮ ವಿಧಾನಗಳಾಗಿಬಿಟ್ಟಿವೆಯೇ ಎಂಬ ಬಗೆಗೂ ನಾವು ಎಚ್ಚರವನ್ನು ಹೊಂದಿರಬೇಕು. ಗುಂಪುಗಳಿಗೆ ಭಾಷಿಕ ಹಕ್ಕುಗಳು ಬೇಕು ಎಂದು ಹೋರಾಡುವಾಗ ನಾವು ಈ ಹಕ್ಕುಗಳಿಂದಾಗಿ ಅಲ್ಪಸಂಖ್ಯಾತರು ತಮ್ಮತನವನ್ನು ಉಳಿಸಿಕೊಳ್ಳಲು ಸಹಾಯವಾಗುತ್ತದೆಯೋ ಅಥವಾ ಯಜಮಾನಿಕೆಯನ್ನು ಮತ್ತಷ್ಟು ದೃಢಪಡಿಸುತ್ತದೆಯೋ ಎಂಬುದನ್ನು ಅರಿಯಬೇಕು.

ಕನ್ನಡಕ್ಕೆ: **ಓ. ಎಲ್. ನಾಗಭೂಷಣಸ್ವಾಮಿ**



# ಭಾರತದಲ್ಲಿ ಭಾಷಾಯೋಜನೆ: ಮರಾಠಿಯ ಪ್ರಾಯೋಗಿಕ ಅಧ್ಯಯನ

**ಅಶೋಕ್ ಆರ್. ಕೇಳ್ಕರ್**

ಜೀವನವೆಂದರೇ ನಿರಂತರ ಪರಿವರ್ತನೆ. ಆದರೆ ಜೀವನವೆಂದರೆ ಇದ್ದುದರ ಸಂರಕ್ಷಣೆಯೂ ಹೌದು. ಬದುಕು, ಬದಲಾಣೆಯ ಮೂಲಕವೇ ಸಮತೋಲನವನ್ನು, ಸಮನ್ವಯವನ್ನು ಕಾಪಾಡಿಕೊಳ್ಳಲು ಪ್ರಯತ್ನಿಸುತ್ತದೆ. ಇದು ಜೀವಂತವಾಗಿರುವವರ ಅಪೇಕ್ಷೆಗಳಿಗೂ ಮತ್ತು ಸುತ್ತಲಿನ ಪರಿಸರದ ಸ್ಥಿತಿಗತಿಗಳಿಗೂ ನಡುವೆ ಇರುವ ಸಮನ್ವಯ. ಇಂಥ ಪರಿವರ್ತನಶೀಲ ಸಮನ್ವಯವನ್ನು ಸಾಧಿಸುವ ಉಪಕರಣವಾಗಿ, ಜೀವನವು ಮೊದಲು ಆನುವಂಶಿಕತೆಯೆಂಬ ಗುಣವನ್ನು ರೂಪಿಸಿಕೊಂಡಿತು. ತನ್ನ ವಿಕಾಸವಾದದಲ್ಲಿ ಡಾರ್ವಿನ್, ಈ ವಿಕಸನಶೀಲವಾದ ಜೈವಿಕಕ್ರಾಂತಿಯ ಬಗೆಗೆ ವಿವರಗಳನ್ನು ನೀಡಿದನು. ಆದರೆ ಜೈವಿಕವಿಕಾಸವು ಮನುಷ್ಯನ ಹಂತವನ್ನು ತಲುಪಿದಾಗ, ವಿಕಸನವೆನ್ನುವುದು ಕೇವಲ ಜೀವಶಾಸ್ತ್ರದ ಪ್ರಶ್ನೆಯಾಗಿ ಉಳಿಯಲಿಲ್ಲ. ಮನುಷ್ಯನು ವಿಕಸನದ ವೇಗವನ್ನು ಹೆಚ್ಚಿಸಿದನು. ಪ್ರಕೃತಿಯು ರೂಪಿಸಿಕೊಂಡಿದ್ದ ಆನುವಂಶಿಕತೆಯ ಜೊತೆಗೆ ಅವನು ಸಂಸ್ಕೃತಿಯನ್ನು ಸೇರಿಸಿದನು. ಮಾನವಶಾಸ್ತ್ರದ ಪ್ರಕಾರ ಸಂಸ್ಕೃತಿ ಎಂದರೇನು? ಒಂದು ಜನಸಮುದಾಯವು ತನ್ನ ಪರಿಸರದೊಂದಿಗೆ ಸಹಜೀವನ ನಡೆಸಲು ನೆರವಾಗುವ ಸಂಪ್ರದಾಯಗಳ (Customs) ಸಮಗ್ರವನ್ನೇ ಸಂಸ್ಕೃತಿ ಎಂದು ಕರೆಯಲಾಗಿದೆ. ಅವರ ಸಂಪ್ರದಾಯಗಳು, ಹಾಗೆಯೇ ಗಾದೆಗಳು ಹಿಂದಿನ ಪೀಳಿಗೆಯ ವಿವೇಕವನ್ನು ಇಂದಿನ ಪೀಳಿಗೆಗೆ ದಾಟಿಸುತ್ತವೆ. ಆದರೆ ಯಾವಾಗಲೂ ವಿವೇಕದ ಜೊತೆಜೊತೆಗೆ ಸ್ವಲ್ಪಮಟ್ಟಿನ ಅವಿವೇಕವೂ ಬೆರೆತು ಬರುತ್ತದೆ ಅಥವಾ ಒಂದು ಕಾಲದಲ್ಲಿ ವಿವೇಕ ಆಗಿದ್ದು ಕಾಲ ಬದಲಾದಂತೆ ಅವಿವೇಕವಾಗುತ್ತದೆ. ಹೀಗೆ ಕ್ರಮೇಣ ಹಳೆಯ ಜೀವನ ಕ್ರಮ ಬದಲಾಗಿ ಹೊಸದಕ್ಕೆ ದಾರಿಮಾಡಿಕೊಡುತ್ತದೆ. ಆದರೆ ಈ ಬದಲಾವಣೆಯ ವೇಗ ಬಹಳ ಕಡಿಮೆ. ಮಾನವಶಾಸ್ತ್ರದ ನೆಲೆಯಲ್ಲಿ ನಡೆಯುವ ಪರಿವರ್ತನೆಗಳು ಜೈವಿಕ ನೆಲೆಯ ಬದಲಾವಣೆಗಳಿಗಿಂತ ವೇಗವಾಗಿರಬಹುದು. ಆದರೆ ಇಂದಿನ ಜಗತ್ತಿನ ಕ್ಷಿಪ್ರಗತಿಗೆ ಈ ವೇಗ ಸಾಲದು. ಆಧುನಿಕ ಭಾರತದ ನಿರ್ಮಾಪಕರಾದ ಎಂ. ಜಿ. ರಾನಡೆ, ರಾಜಾ ರಾಮ ಮೋಹನರಾಯ್ ಮುಂತಾದವರು ಈ ಅಂಶವನ್ನು ಗುರುತಿಸಿದರು. ನಮ್ಮ ಜೀವನ ಕ್ರಮದಲ್ಲಿ ಪ್ರಜ್ಞಾಪೂರ್ವಕವಾದ ಬದಲಾವಣೆಗಳನ್ನು ನಾವೇ ತಂದುಕೊಳ್ಳಬೇಕೆಂದು ಅವರು ಒತ್ತಾಯಪಡಿಸಿದರು. ಭಾರತದ ಮಟ್ಟಿಗಂತೂ "ಯೋಜನೆ" ಎಂಬ ಪ್ರಕ್ರಿಯೆಯು

ನಾಂದಿ ಇದರಿಂದಲೇ ಆಯಿತು. ಅನುವಂಶಿಕತೆ ಮತ್ತು ಸಂಪ್ರದಾಯಗಳ ಜೊತೆಗೆ ವಿಕಸನದ ಮೂರನೆಯ ಮುಖ್ಯ ನೆಲೆಯೆಂದರೆ ಯೋಜನೆಯೇ ಆಗಿದೆ. ಹೀಗೆ ಇಲ್ಲಿ ವಿಕಾಸವಾದವೇ ಇನ್ನೊಂದು ಹಂತವನ್ನು ತಲುಪಿದಂತೆ ಕಾಣುತ್ತದೆ.

ಸಾಮಾನ್ಯವಾಗಿ ಯೋಜನೆಯೆಂದಕೂಡಲೇ ನಮ್ಮ ನೆನಪಿಗೆ ಬರುವುದು ಆರ್ಥಿಕ ಯೋಜನೆಯೇ ಆಗಿದೆ. ಆರ್ಥಿಕ ಯೋಜನೆ ಎಂದ ತಕ್ಷಣ ನಮಗೆ ಎರಡು ಗುಂಪುಗಳಿಗೆ ಸೇರಿದ ಚಿಂತಕರ ನಡುವೆ ನಡೆದ ದೊಡ್ಡ ಚರ್ಚೆಯೊಂದು ನೆನಪಾಗುತ್ತದೆ. ಒಂದು ಕಡೆ ಮನುಷ್ಯನ ಮಿತವಾದ ಸಂಪನ್ಮೂಲಗಳು ಮತ್ತು ಅಮಿತವಾದ ಆಸೆಗಳ ನಡುವೆ ಅಗತ್ಯವಾದ ಸಮತೋಲನವನ್ನು ಸ್ಥಾಪಿಸಲು, ಅರ್ಥಶಾಸ್ತ್ರದ, ಬೇಡಿಕೆ ಮತ್ತು ಸರಬರಾಜುಗಳಿಗೆ ಸಂಬಂಧಿಸಿದ ನಿಯಮಗಳೇ ಸಾಕು ಎಂದು ನಂಬಿರುವ ಅರ್ಥಶಾಸ್ತ್ರಜ್ಞರಿದ್ದಾರೆ. ಮತ್ತೊಂದು ಗುಂಪಿನ ಚಿಂತಕರು ಬೇಡಿಕೆ ಹಾಗೂ ಸರಬರಾಜುಗಳ ಮೇಲೆ ಸಾಮಾಜಿಕ ನಿಯಂತ್ರಣವಿರಬೇಕೆಂದು ವಾದಿಸುತ್ತಾರೆ. ಸರ್ಕಾರವು ಬೇಡಿಕೆ ಮತ್ತು ಸರಬರಾಜುಗಳನ್ನು ಹೇಗೆ ನಿಯಂತ್ರಿಸಬಹುದೆಂದು ಹೇಳುವುದು ಸರಳವಲ್ಲ. ಆದರೆ ನಾವು ಈಗಾಗಲೇ ಗಮನಿಸಿರುವಂತೆ ಯೋಜನೆಯೆನ್ನುವ ಪದವನ್ನು ಇಷ್ಟೊಂದು ಸಂಕುಚಿತವಾದ ಅರ್ಥದಲ್ಲಿ ತೆಗೆದುಕೊಳ್ಳುವ ಅಗತ್ಯವಿಲ್ಲ.

ಒಬ್ಬ ಬುದ್ಧಿವಂತನಾದ ವ್ಯಕ್ತಿಯು, ತನ್ನ ಸ್ವಂತ ಬದುಕಿನ ಹಂತದಲ್ಲಿ, ಯಾವಾಗಲೂ ಮಾಡಲು ಪ್ರಯತ್ನಿಸುತ್ತಿರುವುದನ್ನು ಸಾಮಾಜಿಕ ಹಂತಕ್ಕೆ ವರ್ಗಾವಣೆ ಮಾಡುವ ಪ್ರಯತ್ನವೇ ಯೋಜನೆ. ವ್ಯಕ್ತಿಯು ತನ್ನ ಬದುಕಿನುದ್ದಕ್ಕೂ ಹಲವು ಸಾಧ್ಯತೆಗಳಲ್ಲಿ ಒಂದನ್ನು ಆಯ್ದುಕೊಳ್ಳುತ್ತಲೇ ಇರುತ್ತಾನೆ. ತನ್ನ ಜೀವನವನ್ನು ಏನು ಮಾಡಬೇಕೆನ್ನುವುದನ್ನು ಕುರಿತು ಅವನು ತೀರ್ಮಾನ ತೆಗೆದುಕೊಳ್ಳುತ್ತಾನೆ. ಈ ತೀರ್ಮಾನಕ್ಕೆ ಸಂಬಂಧಪಟ್ಟಂತೆ ಅವನು ಹಲವು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಜಗತ್ತಿನ ಬಗ್ಗೆ ಅವನಿಗಿರುವ ತಿಳುವಳಿಕೆಯು, ತನ್ನ ಗುರಿಯನ್ನು ತಲುಪುವ ದಾರಿಯಲ್ಲಿ, ಎದುರಿಸಬೇಕಾಗುವ ಸಮಸ್ಯೆಗಳ ಪೂರ್ವಸೂಚನೆಯನ್ನು ಅವನಿಗೆ ಕೊಡುತ್ತದೆ. ಆದ್ದರಿಂದ ಅವನು ಹೀಗೆ ಮಾಡಬೇಕು, ಹಾಗೆ ಮಾಡಬೇಕು ಅಥವಾ ಏನನ್ನೂ ಮಾಡಬಾರದು ಎನ್ನುವಂತಹ ನಿರ್ಣಯಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಅವನು ಯಾವುದೇ ನೀತಿಯನ್ನು ಅನುಸರಿಸಲಿ, ತಾನು ಈಗ ಮಾಡುವ ಆಯ್ಕೆಗಳ ಪರಿಣಾಮವು ಭವಿಷ್ಯದಲ್ಲಿ ಏನಾಗಬಹುದೆಂದು ಊಹಿಸಲು ಪ್ರಯತ್ನಿಸುತ್ತಾನೆ. ಒಂದು ಕಾರ್ಯನೀತಿಯನ್ನು ಆರಿಸಿಕೊಂಡ ಮೇಲೆ ಅದನ್ನು ಜಾರಿಗೆ ತರಲು ಶಕ್ತಿಮೀರಿ ಪ್ರಯತ್ನಿಸುತ್ತಾನೆ. ಅಡಚಣೆ ಎದುರಾದಾಗ ಅವನು ತನ್ನ ಕಾರ್ಯನೀತಿಯನ್ನು ಪರಿಷ್ಕರಿಸಬಹುದು. ಉದಾಹರಣೆಗೆ ತನ್ನ ಮಕ್ಕಳು ತಾನು ಪಡೆದದಕ್ಕಿಂತ ಉತ್ತಮ ಮಟ್ಟದ ಶಿಕ್ಷಣವನ್ನು ಪಡೆಯಬೇಕೆಂದು ಅವನು ತೀರ್ಮಾನಿಸಿದರೆ ಆ ಉದ್ದೇಶ ಸಾಧನೆಗಾಗಿ ಇಂದಿನಿಂದಲೇ ಹಣ ಉಳಿಸಲು ಪ್ರಾರಂಭಿಸುತ್ತಾನೆ. ಹಾಗೆಯೇ ಅವನು ಕಾಲಕ್ರಮದಲ್ಲಿ ಧೂಮಪಾನ

ವನ್ನು ನಿಲ್ಲಿಸಿಬಿಡಬೇಕೆಂಬ ನಿರ್ಣಯಕ್ಕೆ ಬರಬಹುದು. ವ್ಯಾಪಾರೋದ್ಯಮವೊಂದನ್ನು ಮೊದಲುಮಾಡಬೇಕೆಂದು ನಿರ್ಧರಿಸಿದ ವ್ಯಕ್ತಿಯು ತನ್ನ ಹರಿತವಾದ ನಾಲಿಗೆಯನ್ನು ಹಿಡಿತದಲ್ಲಿ ಇಟ್ಟುಕೊಳ್ಳದಿದ್ದರೆ ಅಪಾಯವಾಗಬಹುದೆಂಬ ಆತಂಕದಿಂದ ಮೃದು ವಚನದ ಕಡೆ ಚಲಿಸಬಹುದು. ಗಂಡಹೆಂಡಿರಿಬ್ಬರು ತಾವು ಪಡೆಯುವ ಮಕ್ಕಳ ಸಂಖ್ಯೆ ಹಾಗೂ ಅವರ ಹುಟ್ಟಿನ ನಡುವಿನ ಕಾಲದ ಅಂತರದ ಬಗ್ಗೆ ತೀರ್ಮಾನ ತೆಗೆದುಕೊಂಡರೆ ಅದು ಕುಟುಂಬ ನಿಯಂತ್ರಣ. ಬದಲಾಗಿ ಇಡಿ ಸಮಾಜವೇ ಕುಟುಂಬ ನಿಯಂತ್ರಣವನ್ನು ಒಂದು ಸಾಮಾಜಿಕ ನೀತಿಯಾಗಿ ಅನುಷ್ಠಾನಕ್ಕೆ ತರಬೇಕೆಂದು ತೀರ್ಮಾನಿಸಿದರೆ ಆಗ ಅದು ಜನಸಂಖ್ಯಾ ನಿಯಂತ್ರಣ. ತರುಣನೊಬ್ಬ ತಾನು ರಾಸಾಯನಿಕ ತಂತ್ರಜ್ಞಾನವನ್ನು ಅಭ್ಯಾಸ ಮಾಡಬೇಕೆಂಬ ದೃಷ್ಟಿಯಿಂದ ಜರ್ಮನ್ ಭಾಷೆಯನ್ನು ಕಲಿತರೆ ಅದು ವೈಯಕ್ತಿಕ ಯೋಜನೆ. ಇಡೀ ಸಮಾಜವೇ ಜರ್ಮನ್ ಭಾಷೆಯ ಅಧ್ಯಯನಕ್ಕೆ ಉತ್ತೇಜನ ನೀಡಲು ನಿರ್ಧರಿಸಿದರೆ ಆಗ ಅದು ಭಾಷಾಯೋಜನೆ.

ಪ್ರಜಾಪ್ರಭುತ್ವದ ಹಾಗೆ ಯೋಜನೆಗೂ ಒಂದು ತಾತ್ವಿಕತೆಯಿದೆ. ಅದು ಮನುಷ್ಯನಿಗೆ ತನ್ನ ಸಮಸ್ಯೆಗಳನ್ನು ವೈಚಾರಿಕವಾಗಿ ಬಿಡಿಸಿಕೊಳ್ಳುವ ಸಾಮರ್ಥ್ಯವಿದೆ ಎನ್ನುವ ನಂಬಿಕೆಯ ಅಭಿವ್ಯಕ್ತಿ. ಮನುಷ್ಯನಿಗೆ, ತನ್ನ ಬುದ್ಧಿಶಕ್ತಿಯನ್ನು ವಾಸ್ತವತೆಯನ್ನು ಅರ್ಥಮಾಡಿಕೊಳ್ಳಲು ಬಳಸಿದರಷ್ಟೇ ಸಮಾಧಾನವಿಲ್ಲ. ಬದಲಾಗಿ ಅವನು ವಾಸ್ತವವನ್ನು ಬುದ್ಧಿಶಕ್ತಿಯ ನೆರವಿನಿಂದ ಬದಲಾಯಿಸಲು ಇಷ್ಟಪಡುತ್ತಾನೆ. ಯೋಜನೆಯೆನ್ನುವುದು ಶಾಶ್ವತವಾಗಿ ನಡೆಯುತ್ತಿರುವ ಕ್ರಾಂತಿ. ಆದ್ದರಿಂದಲೇ ನಾವು ಯೋಜನೆಯನ್ನು ಜೈವಿಕ ವಿಕಾಸಕ್ಕೆ ಹಾಗೂ ಬದಲಾಗುತ್ತಿರುವ ಸಂಪ್ರದಾಯಗಳ ಮೂಲಕ ನಡೆಯುವ, ಸಂಸ್ಕೃತಿಯ ವಿಕಾಸಕ್ಕೆ ಹೋಲಿಸಬಹುದು. ಮನುಷ್ಯನು ಇತಿಹಾಸದಿಂದ ರೂಪಿತನಾಗಿರುವನೆನ್ನುವುದು ನಿಜ. ಆದರೆ ಯೋಜನೆಯೊಂದಕ್ಕೆ ಅನುಗುಣವಾಗಿ ಕೆಲಸಮಾಡುವಾಗ ಮನುಷ್ಯ ಇತಿಹಾಸ ವನ್ನೇ ರೂಪಿಸಲು ಯತ್ನಿಸುತ್ತಿರುತ್ತಾನೆ. ಇದು ಸಾಂಪ್ರದಾಯಿಕವಾದ ಕುಶಲಕಲೆಗಳು ಹಾಗೂ ಕಲಾತಂತ್ರಗಳ ಸ್ಥಾನದಲ್ಲಿ ಕ್ರಮೇಣ ನಮ್ಮ ಕಾಲದ ಇಂಜಿನಿಯರಿಂಗ್ ಬಂದಿರುವ ಹಾಗೆ. ಕೆಲವು ವಿದ್ವಾಂಸರಂತೂ ನಾವು ಇಲ್ಲಿ 'ಭಾಷಾಯೋಜನೆ' ಎಂದು ಕರೆದಿರುವ ಪ್ರಕ್ರಿಯೆಯನ್ನು 'ಭಾಷಾ ಇಂಜಿನಿಯರಿಂಗ್' ಎಂಬ ಹೆಸರಿನಿಂದಲೇ ನಿರ್ದೇಶಿಸಿರುತ್ತಾರೆ.

ಭಾಷೆಯು ನಮಗೆ ಅತ್ಯಂತ ಪರಿಚಿತವಾದುದು. ಆದ್ದರಿಂದಲೇ ಭಾಷೆಯ ಬಳಕೆಯನ್ನು ಯೋಜನಾಬದ್ಧವಾಗಿಸಬಹುದೆಂಬ ಅನಿಸಿಕೆಯೇ ನಮ್ಮ ಗ್ರಹಿಕೆಗೆ ನಿಲುಕುವುದಿಲ್ಲ. ಬಹುಮಟ್ಟಿಗೆ ನಾವು ಭಾಷೆಯನ್ನು ನಮ್ಮ ಆಲೋಚನೆ, ಸಂವೇದನೆ ಮತ್ತು ಅಪೇಕ್ಷೆಗಳನ್ನು ಇತರರಿಗೆ ತಿಳಿಸಲೆಂದು ಅಥವಾ ತಿಳಿಸದೆ ಮುಚ್ಚಿಡಲೆಂದು ಉಪಯೋಗಿಸುತ್ತೇವೆ. ಹೊಸ ವಾಕ್ಯಗಳನ್ನು ಸೃಷ್ಟಿಸುತ್ತೇವೆ ಅಥವಾ ಎಲ್ಲರಿಗೂ ಗೊತ್ತಿರುವ ಸೂತ್ರದಂತಹ ವಾಕ್ಯಗಳನ್ನು ಬಳಸುತ್ತೇವೆ. ಭಾಷೆಯ ಬಳಕೆಗೆ ಸಂಬಂಧಿಸಿದ ಸಮಸ್ಯೆಗಳು ಹುಟ್ಟಿಕೊಂಡಾಗ ಮಾತ್ರ ನಾವು ಭಾಷಿಕ ಸಂವಹನದ ಬಗ್ಗೆ ಪ್ರಜ್ಞಾಪೂರ್ವಕ

ವಾಗಿ ಆಲೋಚಿಸುತ್ತೇವೆ. 'ತಂದೆ ಮತ್ತು ಮಗನ ನಡುವೆ ಸಂವಹನವು ಸಾಧ್ಯವಾಗಲಿಲ್ಲ' ಎಂಬ ಮಾತನ್ನು ಮರಾಠಿಯಲ್ಲಿ ಹೇಳಲು ಒಬ್ಬ ಭಾಷಣಕಾರನಿಗೆ ಸಾಧ್ಯವಾಗದೆ ಹೋಗಬಹುದು; ಕೇಳುಗನೊಬ್ಬನು ಆಕಾಶವಾಣಿಯ ಸಮಾಚಾರದ ಬುಲೆಟಿನ್ ಅನ್ನು ಅರ್ಥ ಮಾಡಿಕೊಳ್ಳಲು ಅಸಮರ್ಥನಾಗಬಹುದು; ಪ್ರವಾಸಿಯೊಬ್ಬನು ತನಗೆ ತಿಳಿಯದ ಸ್ಥಳೀಯ ಭಾಷೆಯ ಜೊತೆಗೆ ಕುಸ್ತಿ ಮಾಡಬೇಕಾಗಬಹುದು ಅಥವಾ ಮೇಲು ನೋಟಕ್ಕೆ ನಿರಪಾಯಕಾರಿಯೆಂದು ತೋರುವ ಒಂದು ಮಾತು ಗಂಭೀರವಾದ ತಪ್ಪು ತಿಳುವಳಿಕೆಗೆ ದಾರಿ ಮಾಡಿಕೊಡಬಹುದು. ಹೀಗೆಲ್ಲ ಆದಾಗ ನಾವು ಭಾಷೆಯ ಬಗ್ಗೆ ತಲೆಕೆಡಿಸಿಕೊಳ್ಳುತ್ತೇವೆ. ಇನ್ನೊಂದು ಮಾತೂ ಅಷ್ಟೇ ನಿಜ. ಜನರು ಪ್ರತಿಕ್ಷಣದಲ್ಲಿಯೂ ಈ ರೀತಿಯ ಬಿಕ್ಕಟ್ಟುಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಲೇ ಇರುತ್ತಾರೆ. ಮಾತನಾಡುತ್ತಿರುವವನು ಹೊಸದೊಂದು ಪದವನ್ನು ಟಂಕಿಸುತ್ತಾನೆ ಅಥವಾ ಹೇಳಬೇಕಾದುದನ್ನು ಸುತ್ತುಬಳಸಿನ ದಾರಿಯಲ್ಲಿ ಹೇಳುತ್ತಾನೆ. ಪತ್ರಿಕೆಯೊಂದರ ಓದುಗನು ತನಗೆ ಅಗತ್ಯವಾದ ಸ್ಪಷ್ಟೀಕರಣವನ್ನು ಬಯಸುತ್ತಾನೆ; ಪ್ರವಾಸಿಯು ತನ್ನ ಜೇಬಿನಲ್ಲಿ ಪ್ರಾದೇಶಿಕ ಭಾಷೆಯ 'ವಾಕ್ಯಮಾಲಿಕೆ'ಗಳ ಪುಸ್ತಕವೊಂದನ್ನು ಇಟ್ಟುಕೊಂಡಿರುತ್ತಾನೆ; ಅಂಗಡಿಕಾರನು, 'ಇಲ್ಲಿ ಇಂಗ್ಲಿಷ್ ಭಾಷೆಯನ್ನು ಮಾತನಾಡಬಹುದು' ಎಂಬ ಬೋರ್ಡ್ ಹಾಕುತ್ತಾನೆ ಇತ್ಯಾದಿ.

ಆದರೆ ಕೆಲವು ಭಾಷಾ ಸಮಸ್ಯೆಗಳು ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತವೆ. ಅವುಗಳಲ್ಲಿ ಕೆಲವು, ತಜ್ಞರ ನೆರವಿಲ್ಲದೆ ಬಿಡಿಸಲಾರದಷ್ಟು ಜಟಿಲವಾಗಿರುತ್ತವೆ. ಮತ್ತೆ ಕೆಲವು ಬೃಹತ್ ಪ್ರಮಾಣದ ಸಹಕಾರ ಮತ್ತು ಸಂಯೋಜನೆಗಳನ್ನು ಬಯಸುತ್ತವೆ. ಸರಳವಾಗಿ ಹೇಳುವುದಾದರೆ ನಾವು ಭಾಷೆಗೆ ಸಂಬಂಧಪಟ್ಟ ಯೋಜನೆಗಳನ್ನು ರೂಪಿಸಬೇಕಾದರೆ ಭಾಷಾತಜ್ಞರ ನೆರವು ಪಡೆಯುವುದು ಅತ್ಯಗತ್ಯ. ದುರದೃಷ್ಟವಶಾತ್ ಇಂಡಿಯಾದಲ್ಲಿ ಈ ತಿಳುವಳಿಕೆ ಮೂಡಿಬಂದಂತೆ ಕಾಣುವುದಿಲ್ಲ. ಭಾಷಾ ವಿಜ್ಞಾನ ಮತ್ತು ಅದಕ್ಕೆ ಸಂಬಂಧಪಟ್ಟ ಇತರ ಭಾಷಾ ಶಿಸ್ತುಗಳಾದ ಮನೋಭಾಷಾ ವಿಜ್ಞಾನ ಮತ್ತು ಸಾಮಾಜಿಕ ಭಾಷಾವಿಜ್ಞಾನಗಳ ಅಧ್ಯಯನದ ಮಹತ್ವವನ್ನು ನಾವು ಇನ್ನೂ ಮನಗಂಡಿಲ್ಲ. ನಮ್ಮ ಸಮಸ್ಯೆಯ ಪರಿಹಾರಕ್ಕಾಗಿ ಭಾಷಾತಜ್ಞರ ಮಾರ್ಗದರ್ಶನವನ್ನು ಪಡೆಯುವ ಮಾತಂತೂ ದೂರವೇ ಉಳಿಯಿತು.

ಇದಕ್ಕೆ ಒಂದು ಮಾದರಿ ನಿದರ್ಶನವನ್ನು ಕೊಡಬಹುದು. ಕೆಲವು ವರ್ಷಗಳ ಹಿಂದೆ ಮರಾಠಿ ಭಾಷೆಯ ಬೆರಳಚ್ಚು ಯಂತ್ರಗಳ ಕೀಬೋರ್ಡ್ ಅನ್ನು ಪ್ರಮಾಣೀಕರಿಸುವ ಪ್ರಯತ್ನ ನಡೆಯಿತು. ಈ ಕೆಲಸಕ್ಕಾಗಿ ಅನುಭವಿಗಳಾದ ಬೆರಳಚ್ಚುಗಾರರನ್ನು ಕರೆಯಲಾಯಿತು. ಆದರೆ ಯಾರೂ ಭಾಷಾಶಾಸ್ತ್ರಜ್ಞರ ತಂಟೆಗೆ ಹೋಗಲಿಲ್ಲ. ಇದರ ಫಲವಾಗಿ ಕೆಲವು ಅನಿವಾರ್ಯವಲ್ಲದ ತಪ್ಪುಗಳನ್ನು ಮಾಡಲಾಯಿತು. ಆಮೇಲೆ ಅಪಾರ ಹಣ ವೆಚ್ಚ ಮಾಡಿ ಆ ತಪ್ಪುಗಳನ್ನು ಸರಿಪಡಿಸಲಾಯಿತು. ಹಿಂದಿ ಭಾಷೆಯಲ್ಲಿ ತಂತಿ ಸಂದೇಶ ಕಳಿಸಲೆಂದು, ಮೋರ್ಸ್ ಸಂಕೇತಲಿಪಿಯನ್ನು ಪ್ರಮಾಣೀಕರಿಸುವ

ಪ್ರಯತ್ನವು ಇನ್ನಷ್ಟು ದಾರುಣವಾಗಿ ಮುಕ್ತಾಯವಾಯಿತು. ಇಲ್ಲಿಯೂ ಭಾಷಾತಜ್ಞರ ನೆರವನ್ನು ಪಡೆಯದೆ, ಗೋಜಲು ಗೋಜಲಾದ, ಸಂವಹನದ ತಪ್ಪುಗಳಿಗೆ ಕಾರಣವಾಗುವ ಲಿಪಿಯೊಂದು ರೂಪಿತವಾಯಿತು. ಇದನ್ನು ಉಪಯೋಗಿಸುವ ಧೈರ್ಯ ಮಾಡಿದವರು ಎಲ್ಲೋ ಕೆಲವರು ಮಾತ್ರ. ಈಗಲೂ ಹಿಂದಿ ಭಾಷೆಯಲ್ಲಿ ತಂತಿ ಕಳಿಸಲು ಇಷ್ಟ ಪಡುವವರು ತಮ್ಮ ಸಂದೇಶವನ್ನು ಹೆಚ್ಚು ಕಡಿಮೆ ಸರಿಯಾಗುವ ರೋಮನ್ ಲಿಪಿಯಲ್ಲೇ ಬರೆಯುತ್ತಾರೆ.

(ನಾನು ಈ ಸಂಕೇತಗಳ ವ್ಯವಸ್ಥೆಗೆ ಬದಲಾಗಿ ಮತ್ತೊಂದು ವ್ಯವಸ್ಥೆಯನ್ನು ಸಿದ್ಧಪಡಿಸಿದೆ. ಅದನ್ನು ಪ್ರಯೋಗಿಸಿ ನೋಡಬೇಕೆಂದು ಸಂಬಂಧಪಟ್ಟ ಅಧಿಕಾರಿಗಳ ಬಾಗಿಲು ತಟ್ಟಿದೆ. ನನ್ನ ಪತ್ರ ಅವರಿಗೆ ತಲುಪಿತು ಎನ್ನುವ ಸೌಜನ್ಯದ ಉತ್ತರ ಕೂಡ ಅವರಿಂದ ಸಿಗಲಿಲ್ಲವೆಂದು ಹೇಳುವ ಅಗತ್ಯವಿಲ್ಲ. ಅದೃಷ್ಟವಶಾತ್ ಈಗ ಎಲೆಕ್ಟ್ರಾನಿಕ್ ಕ್ರಾಂತಿಯ ಫಲವಾಗಿ, ಹಳೆಯ ಚುಕ್ಕೆ ಮತ್ತು ಗೆರೆಗಳ ಮಾರ್ಸ್‌ಲಿಪಿಯು ಅನಗತ್ಯ ವಾಗುತ್ತಿದೆ.)

ಅದಲ್ಲದೆ ಇನ್ನೊಂದು ತಪ್ಪು ತಿಳುವಳಿಕೆಯಿದೆ: ಸಂಸ್ಕೃತ ಭಾಷೆಯ ತಿಳುವಳಿಕೆ ಇರುವವರು ಭಾಷೆಗಳಿಗೆ ಸಂಬಂಧಪಟ್ಟ ಸಮಸ್ಯೆಗಳನ್ನು ಕುರಿತ ಎಲ್ಲ ವಿಭಾಗಗಳಲ್ಲಿಯೂ ತಜ್ಞರಾಗಿಬಿಡುತ್ತಾರೆ ಎನ್ನುವುದೇ ಆ ಭ್ರಮೆ. ಭಾರತೀಯ ಭಾಷೆಗಳ ವಿಷಯ ದಲ್ಲಿಯಂತೂ ಇದು ನಿಜ ಎಂದು ಅನೇಕರು ತಿಳಿಯುತ್ತಾರೆ. ಕೆಲವು ಬಾರಿ ಸಂಸ್ಕೃತದ ಜ್ಞಾನವು ನೆರವು ನೀಡಬಹುದು. ಆದರೆ ಭಾಷಾ ಸಮಸ್ಯೆಗಳ ಬಗ್ಗೆ ವೈಜ್ಞಾನಿಕ ದೃಷ್ಟಿಕೋನ ಇಲ್ಲದೇ ಹೋದಾಗ ಅಂಥ ಸಂಸ್ಕೃತ ಜ್ಞಾನವು ಪರಿಮಿತಿಯಾಗಿಬಿಡುತ್ತದೆ.

ದುರದೃಷ್ಟವಶಾತ್ ಭಾಷಾಶಾಸ್ತ್ರ ಮತ್ತು ಅದಕ್ಕೆ ಸಂಬಂಧಪಟ್ಟ ಇತರ ಅಧ್ಯಯನ ವಸ್ತುಗಳನ್ನು ಕುರಿತ ಅಜ್ಞಾನವು ಜನಸಾಮಾನ್ಯರಿಗೆ ಹಾಗೂ ಆಡಳಿತಗಾರರಿಗೆ ಸೀಮಿತ ವಾಗಿಲ್ಲ. ಮಹಾರಾಷ್ಟ್ರದ ವಿದ್ವಾಂಸವರ್ಗ ಕೂಡ ಹೀಗೆಯೇ ಇದೆ. ಎಷ್ಟೋ ಸಲ ಸಾಹಿತ್ಯದ ಅಧ್ಯಾಪಕರು ಭಾಷಾಶಾಸ್ತ್ರದ ಬಗ್ಗೆ ಬಹಿರಂಗವಾದ ಅಥವಾ ಒಳಗೆ ತುಂಬಿ ಕೊಂಡ ದ್ವೇಷವನ್ನೇ ತೋರಿಸುತ್ತಾರೆ. ಸಮಾಜ ವಿಜ್ಞಾನಿಗಳಿಗೆ ಇದರ ಬಗ್ಗೆ ಸಂಪೂರ್ಣ ನಿರ್ಲಕ್ಷ್ಯ. ಇದೆಲ್ಲದರ ಫಲವಾಗಿ ಭಾಷೆಗಳ ಅಧ್ಯಯನಕ್ಕೆ ಸಂಬಂಧಪಟ್ಟ ಬಹಳ ಮುಖ್ಯ ಸಂಸ್ಥೆಯೊಂದು ಮಹಾರಾಷ್ಟ್ರದಲ್ಲಿಯೇ ಇದ್ದರೂ ಕೂಡ ಆ ವಿಷಯಗಳಲ್ಲಿ ತರಬೇತಿ ಪಡೆದ ತರುಣ ವಿದ್ವಾಂಸರು ಈ ರಾಜ್ಯದಲ್ಲಿ ಬಹಳ ಬಹಳ ಕಡಿಮೆ. ಆದ್ದರಿಂದಲೇ ಇಂದು ಮರಾಠಿ ಭಾಷೆಯ ತಜ್ಞರು ಬೇಕೆಂಬ ಬೇಡಿಕೆಯನ್ನು ನಾವು ಮಾಡಿದರೆ, ಬೇಕಾದಷ್ಟು ಜನ ಸಿಗುವುದೇ ಇಲ್ಲ.

ನಾನು ಈಗ ತಾನೇ ಭಾಷೆಗೆ ಸಂಬಂಧಿಸಿದ ತಂತ್ರಜ್ಞಾನದ ಒಂದೆರಡು ನಿದರ್ಶನ ಗಳನ್ನು ಕೊಟ್ಟಿದ್ದೇನೆ. ಒಂದು, ತಂತಿ ಸಂದೇಶದ ಸಂಕೇತ ಲಿಪಿ ಮತ್ತು ಎರಡು, ಬೆರಳಚ್ಚು

ಯಂತ್ರದ ಕೀಬೋರ್ಡ್. ಈ ಪಟ್ಟಿಗೆ ಇನ್ನೂ ಕೆಲವು ಸಂಗತಿಗಳನ್ನು ಸೇರಿಸಬಹುದು. ಶೀಘ್ರ ಲಿಪಿ, ಅಂಧರ ಬ್ರೇಲ್ ಲಿಪಿ, ದೂರ ಸಂಪರ್ಕದ ಸಂಕೇತ ಲಿಪಿ, ಗಣಕ ಯಂತ್ರದ ಕೀಬೋರ್ಡ್, ಮುದ್ರಣಕ್ಕೆ ಬೇಕಾದ ಸಂಕೇತಗಳು ಅವುಗಳಲ್ಲಿ ಕೆಲವು. ಅದೇ ರೀತಿ ಭಾರತೀಯವಾದ ಅಂಕಿತ ನಾಮಗಳನ್ನು ಮತ್ತು ಸ್ಥಳ ನಾಮಗಳನ್ನು ದೇವನಾಗರಿ ಅಥವಾ ರೋಮನ್ ಲಿಪಿಯಲ್ಲಿ ಬರೆಯುವಾಗ ಯಾವ ಮಾರ್ಗವನ್ನು ಅನುಸರಿಸಬಹುದು ಎನ್ನುವುದು ಕೂಡ ಇದೇ ರೀತಿಯ ಚರ್ಚೆ. ಹಾಗೆಯೇ ಭಾರತೀಯ ಹಾಗೂ ವಿದೇಶೀ ಭಾಷೆಗಳಲ್ಲಿ ವಿದ್ಯಾರ್ಥಿಗಳ ಪರಿಣತಿಯನ್ನು ಅಳೆಯಲೆಂದು ಪ್ರಮಾಣೀಕೃತವಾದ ಪರೀಕ್ಷಾ ವಿಧಾನಗಳನ್ನು ರೂಪಿಸುವುದು ಕೂಡ ಭಾಷಾತಜ್ಞರದೇ ಕಾರ್ಯಕ್ಷೇತ್ರ. ವಿವಿಧ ಭಾಷೆಗಳಲ್ಲಿ ಸಂವಹನಮಾಧ್ಯಮಗಳನ್ನು ಸಮರ್ಥವಾಗಿ ಬಳಸಲು ಕೂಡ ಅವರ ಅನುಭವದ ಅಗತ್ಯವಿದೆ. ಆದರೆ ಭಾಷಾಯೋಜನೆಗಳೆಂದರೆ ಇಷ್ಟೇ ಅಲ್ಲ. ಭಾಷಿಕ ತಂತ್ರಜ್ಞಾನಗಳನ್ನು ಪ್ರಮಾಣೀಕರಿಸಿದ ಮಾತ್ರಕ್ಕೆ ಅವುಗಳ ಕೆಲಸ ಮುಗಿಯುವುದಿಲ್ಲ. ಎಲ್ಲ ಭಾಷಾ ಯೋಜನೆಗಳ ಹಿಂದೆ ಇರುವ ಮಹತ್ವದ ಸತ್ಯವೆಂದರೆ ಭಾಷೆಯೂ ಕೂಡ ರೈಲುದಾರಿಗಳಂತೆ, ಚೈತನ್ಯಮೂಲಗಳಂತೆ ಬಹಳ ಮುಖ್ಯವಾದ ರಾಷ್ಟ್ರೀಯ ಸಂಪನ್ಮೂಲ ಎನ್ನುವುದು.

೨

ಒಂದು ದೇಶದ ಒಟ್ಟು ಜನಸಮುದಾಯದಲ್ಲಿ ಚೈತನ್ಯವಂತರೂ ಬುದ್ಧಿಶಾಲಿಗಳೂ ಒಂದಲ್ಲ ಒಂದು ವಿಷಯವನ್ನು ಚೆನ್ನಾಗಿ ಕಲಿತವರೂ ಆದ ಜನ ದೇಶದ ಶಕ್ತಿಯಾದರೆ ದುರ್ಬಲರೂ, ಸೋಮಾರಿಗಳೂ ಆದ ವಂಕು ಜನರು ಹೆಚ್ಚೆಂದರೆ ಜನಸಂಖ್ಯೆಯ ಸಮಸ್ಯೆಯನ್ನು ಸೃಷ್ಟಿಸುತ್ತಾರೆ. ಈ ಮಾತು ಭಾಷೆಗಳ ವಿಷಯದಲ್ಲಿಯೂ ನಿಜವೆಂದು ಕೆಲವರ ಅಭಿಪ್ರಾಯ. ಜಗತ್ತಿನ ಆರ್ಥಿಕವಾಗಿ ಹಿಂದುಳಿದ ರಾಷ್ಟ್ರಗಳಲ್ಲಿ ಬಹುಭಾಷಿಕ ಸನ್ನಿವೇಶವಿದೆಯೆಂದೂ, ಮುಂದುವರಿದ ದೇಶಗಳಲ್ಲಿ ಒಂದೇ ಭಾಷೆ ಇರುತ್ತದೆಯೆಂದೂ ಹೇಳಲಾಗುತ್ತದೆ. ಈ ಮಾತಿಗೆ ಉದಾಹರಣೆ ಬೇಕೆಂದು ಕೇಳಿದರೆ ತಕ್ಷಣ ಭಾರತದ ಕಡೆ ಬೆರಳುಮಾಡಿ ತೋರಿಸುತ್ತಾರೆ.

ಹಾಗೆ ನೋಡಿದರೆ ಭಾರತದಲ್ಲಿ ಅನೇಕ ಭಾಷೆಗಳಿವೆ ಎನ್ನುವುದು ಕೆಟ್ಟದ್ದೂ ಅಲ್ಲ ಒಳ್ಳೆಯದೂ ಅಲ್ಲ. ಅದು ನಮಗೆ ನಮ್ಮ ಇತಿಹಾಸದ ಕೊಡುಗೆ. ಯುರೋಪಿನ ಅನೇಕ ಏಕಭಾಷಾ ರಾಷ್ಟ್ರಗಳು ಅದರ ಚರಿತ್ರೆಯ ಕೊಡುಗೆಯಾದಂತೆ. ಆದರೆ ಈ ವಿಷಯದಲ್ಲಿ ನಾವು ಏನು ಮಾಡುತ್ತೇವೆ ಎನ್ನುವುದು ಒಳ್ಳೆಯ ಅಥವಾ ಕೆಟ್ಟ ಪರಿಣಾಮಗಳಿಗೆ ಕಾರಣವಾಗುತ್ತದೆ. ಭಾರತೀಯರು ಸಾಮಾನ್ಯವಾಗಿ ಎರಡು ಅತಿರೇಕದ ನಿಲುವುಗಳಲ್ಲಿ ಒಂದನ್ನು ತೆಗೆದುಕೊಳ್ಳುತ್ತಾರೆ. ಕೆಲವರ ಪ್ರಕಾರ ಬಹುಭಾಷಿಕ ತಿಳಿವು ಅನಗತ್ಯವಾದ ತಲೆನೋವು. ಅವರು ಇಷ್ಟಪಡುವ ಸಂಪರ್ಕ ಭಾಷೆಯು–ಅದು ಹಿಂದಿ, ಇಂಗ್ಲಿಷ್ ಅಥವಾ ಸಂಸ್ಕೃತ ಯಾವುದೇ ಇರಲಿ–ಸಂವಹನದ

ಎಲ್ಲ ವಲಯಗಳಲ್ಲಿಯೂ ಸರ್ವವ್ಯಾಪಕವಾಗಿ ಜಾರಿಗೆ ಬರಬೇಕು. ಹೆಚ್ಚೆಂದರೆ, ಅಯ್ಯೋ ಪಾಪ ಎಂದು ಅಡಿಗೆ ಮನೆಯಲ್ಲಿಯೋ ಅಥವಾ ನೆರೆಹೊರೆಯವರೊಂದಿಗೆ ಹರಟೆ ಹೊಡೆಯುವಾಗಲೋ ಸ್ಥಳೀಯ ಭಾಷೆಯನ್ನು ಬಳಸಬಹುದು. ಇನ್ನೊಂದು ಅತಿಗೆ ಹೋಗಿ ಮಾತನಾಡುವವರಿಗೆ ತಮ್ಮ ಸ್ವಂತ ಭಾಷೆಯ ಬಗ್ಗೆ ತಡೆಯಲಾಗದ ಅಭಿಮಾನ. ಅವರು ಇತರ ಭಾಷೆಗಳೊಂದಿಗೆ ಯಾವುದೇ ರೀತಿಯ ಹೊಂದಾಣಿಕೆ ಅಥವಾ ರಾಜಿಗಳನ್ನು ಮಾಡಿಕೊಳ್ಳಲು ತಯಾರಾಗಿರುವುದಿಲ್ಲ. ಅಷ್ಟೇಕೆ? ಇತರ ಭಾಷೆಗಳ ಬಗ್ಗೆ ನಿಷ್ಕಾರಣ ಮತ್ಸರವನ್ನು ತೋರಿಸದೆ ತಮ್ಮ ಭಾಷಾಭಿಮಾನವು ಪರಿಪೂರ್ಣವಾಗದೆಂದು ಅವರು ತಿಳಿಯುತ್ತಾರೆ.

ಕನ್ನಡ ಮತ್ತು ತೆಲುಗು ಭಾಷೆಗಳಿಗೆ ಸಮಾನವಾದ ಲಿಪಿಯೊಂದನ್ನು ರೂಪಿಸಬೇಕೆಂಬ ಪ್ರಯತ್ನಗಳು ಹಲವು ದಶಕಗಳಿಂದ ನಡೆಯುತ್ತಿವೆ. ಆ ಭಾಷೆಗಳ ಈಗ ಇರುವ ಲಿಪಿಗಳ ನಡುವೆ ಅಂಥ ಮಹತ್ವದ ವ್ಯತ್ಯಾಸವೇನೂ ಇಲ್ಲ. ಆದರೆ ಚರ್ಚೆಗಳ ಫಲಿತಾಂಶಗಳು ಮಾತ್ರ ಯಾವಾಗಲೂ ಒಂದೇ ಆಗಿವೆ. ತೆಲುಗಿನವರು ಕನ್ನಡ ಲಿಪಿಯನ್ನು ಬಳಸಬೇಕೆಂದು ಕನ್ನಡಿಗರ ವಾದ. ತೆಲುಗರು ತಮ್ಮ ಲಿಪಿಯ ಪರವಾಗಿ ಅದೇ ವಾದವನ್ನು ಮಂಡಿಸುತ್ತಾರೆ. ಬದಲಾಗಿ ಲಿಪಿಯ ಕೆಲವು ಭಾಗಗಳಲ್ಲಿ ತಮ್ಮದಲ್ಲದ ಮತ್ತೊಂದು ಲಿಪಿಯನ್ನು ಬಳಸಬಹುದೆಂಬ ಸೂಚನೆಯನ್ನು ಯಾರೂ ಕೊಡುವುದಿಲ್ಲ. ಉದಾಹರಣೆಗೆ ಒಂದು ಪದವನ್ನು ಇಟ್ಯಾಲಿಕ್‌ಗಳಲ್ಲಿ ಹೇಳಬೇಕಾದಾಗ ಅಥವಾ ಅವಧಾರಣೆ ಮಾಡಬೇಕಾದಾಗ ಕನ್ನಡಿಗರು ತೆಲುಗು ಲಿಪಿ ಬಳಸಬಹುದು. ತೆಲುಗರು ಅಂಥ ಸಂದರ್ಭಗಳಲ್ಲಿ ಕನ್ನಡ ಬಳಸಬಹುದು. ಹೀಗೆ ಮಾಡುವುದರಿಂದ ಇಬ್ಬರಿಗೂ ಲಿಪಿಗಳ ಪರಸ್ಪರ ಪರಿಚಯವಾಗುತ್ತದೆ. ಏಕಲಿಪಿಯ ದಾರಿಯಲ್ಲಿ ಇದು ಮಹತ್ವದ ಹೆಜ್ಜೆಯಾಗುತ್ತದೆ. ಈ ರೀತಿಯ ಹಲವು ಉದಾಹರಣೆಗಳನ್ನು ಭಾರತದ ಇತರ ಭಾಗಗಳಿಂದಲೂ ಕೊಡಬಹುದು.

ಈ ಮಾತುಗಳನ್ನು ಬಹಳ ಎಚ್ಚರಿಕೆಯಿಂದ ಹೇಳುವುದು ಅಗತ್ಯ. ಏಕೆಂದರೆ ಒಟ್ಟು ಸನ್ನಿವೇಶದಲ್ಲಿಯೇ ಅನುಮಾನ ಮತ್ತು ದುರಭಿಪ್ರಾಯಗಳು ತುಂಬಿವೆ. ಕನ್ನಡ ಮತ್ತು ತೆಲುಗು ಮಾತನಾಡುವವರು ತಕ್ಷಣ ಅವರ ಬಗ್ಗೆ ನನ್ನಲ್ಲಿ ದ್ವೇಷವಿದೆಯೆಂದು ಆಪಾದಿಸಬಹುದು. ವಸ್ತುಸ್ಥಿತಿ ಹಾಗಿಲ್ಲವೆಂದು ಬಾಯಿ ಬಿಟ್ಟು ಹೇಳಬೇಕಾಗಿರುವುದು ದುರದೃಷ್ಟಕರ.

ಈಗಾಗಲೇ ಹೆಸರಿಸಿರುವ ಪ್ರಾದೇಶಿಕ ಭಾಷೆಗಳ ದಮನ ಅಥವಾ ಅವುಗಳ ಮೇಲಿನ ಸಹನೆಯಿಲ್ಲದ ಅಭಿಮಾನಗಳೆಂಬ ಎರಡು ಅತಿರೇಕಗಳಲ್ಲಿ ಯಾವುದನ್ನು ಅನುಸರಿಸಿದರೂ ರಾಷ್ಟ್ರೀಯ ಭಾಷಾ ಸಂಪನ್ಮೂಲಗಳ ದುರುಪಯೋಗವಾಗುತ್ತದೆ. ಬುದ್ಧಿ ಸರಿಯಾಗಿರುವ ಯಾವ ಮನುಷ್ಯನೂ ಇಡೀ ದೇಶದಲ್ಲಿ ವಿಮಾನ ಅಥವಾ ಎತ್ತಿನ ಬಂಡಿಯನ್ನು ಮಾತ್ರ

ಸಾರಿಗೆಯ ಸಾಧನವಾಗಿ ಉಪಯೋಗಿಸಬೇಕೆಂದು ಹಟ ಹಿಡಿಯಲಾರ. ಭಾರತದಂಥ ದೊಡ್ಡ ಜನಸಂಖ್ಯಾಭರಿತ ದೇಶದಲ್ಲಿ ಇದು ಅಸಾಧ್ಯ. ನಮಗೆ ಎತ್ತಿನಗಾಡಿಗಳೂ ಬೇಕು, ವಿಮಾನಗಳೂ ಬೇಕು. ಅವೆರಡರ ನಡುವೆ ಇನ್ನೂ ಹತ್ತು ಹಲವು ವಾಹನಗಳೂ ಬೇಕು. ಮುಖ್ಯವಾತೆಂದರೆ, ಈಗ ಇರುವುದಕ್ಕಿಂತ ಹೆಚ್ಚು ಉಪಯುಕ್ತವಾದ, ನಮ್ಮ ಅಗತ್ಯಗಳಿಗೆ ಹೊಂದಿಕೊಳ್ಳುವ ವಿಮಾನಗಳು, ಎತ್ತಿನಗಾಡಿಗಳು ಬೇರೆ ವಾಹನಗಳು ನಮಗೆ ಬೇಕು. ಎತ್ತಿನ ಗಾಡಿಗಳಿಗೆ ರಬ್ಬರಿನ ಚಕ್ರಗಳನ್ನು ಅಳವಡಿಸಿ ಅವುಗಳ ಗುಣಮಟ್ಟವನ್ನು ಉತ್ತಮ ಗೊಳಿಸಬಹುದಾದರೆ ಭಾಷೆಗಳು ಏಕೆ ಬದಲಾಗಬಾರದು? ನಿಜವಾಗಿ ನೋಡಿದರೆ ಪರಿವರ್ತನೆಯೇ ಭಾಷೆಗಳ ಮೂಲ ಲಕ್ಷಣ. ಆದ್ದರಿಂದ ಭಾಷೆಗಳ ಬಗೆಗಿನ ತೀರ್ಮಾನ ಗಳನ್ನು, ಲಾಭ ನಷ್ಟಗಳ ಸಮಗ್ರ ವಿಶ್ಲೇಷಣೆಯ ನಂತರ, ಸಮಚಿತ್ತದಿಂದ ತೆಗೆದುಕೊಳ್ಳ ಬೇಕು. ಹೀಗೆ ಅತಿರೇಕಕ್ಕೆ ಎಳಸದ ಸಮಚಿತ್ತವನ್ನು ಪಡೆದುಕೊಂಡ ಕೂಡಲೇ ಕೆಲವು ಮುಖ್ಯ ಸಂಗತಿಗಳು ನಮ್ಮ ಗಮನಕ್ಕೆ ಬರುತ್ತವೆ.

(೧) ಬಹುಮುಖೀ ಭಾಷಾ ಸಂದರ್ಭವು, ಆರ್ಥಿಕವಾಗಿ ತನ್ನ ಕಾಲುಗಳ ಮೇಲೆ ನಿಲ್ಲಲು ಪ್ರಯತ್ನಿಸುತ್ತಿರುವ ದೇಶದ ವ್ಯವಸ್ಥೆಯ ಮೇಲೆ ಕೆಲವು ಒತ್ತಡಗಳನ್ನು ಹಾಕು ತ್ತದೆ. ಪ್ರತಿಯೊಂದು ದಾಖಲೆಯ ವಿವಿಧ ಭಾಷೆಗಳ ಆವೃತ್ತಿಯನ್ನು ತರುವುದು ಹಾಗೂ ಅನುವಾದ ಮಾಡುವುದಂತೂ ಕಣ್ಣಿಗೆ ಕಾಣುವ ಖರ್ಚು. ಕೇಂದ್ರ ಸರಕಾರದ ಪರಿಸೂಚನೆ ಗಳು, ಬೃಹತ್ ಪ್ರಮಾಣದ ನಿಗಮಗಳ ಜಾಹೀರಾತುಗಳು ಮತ್ತು ಮಹತ್ವದ ಸಂಶೋಧನೆಯ ಫಲಗಳನ್ನು ಪ್ರಾದೇಶಿಕ ಭಾಷೆಗಳಲ್ಲಿ ಪ್ರಕಟಪಡಿಸಬೇಕಾಗುತ್ತದೆ. ಇದಕ್ಕಿಂತ ಮುಖ್ಯವಾಗಿ ಕೆಲವು ಮೇಲು ದರ್ಜೆಯ ಉದ್ಯೋಗಗಳು ರಾಷ್ಟ್ರೀಯವಾದ ಚಲನಶೀಲತೆಯನ್ನು ಕಳೆದುಕೊಳ್ಳುತ್ತವೆ. ಶೈಕ್ಷಣಿಕ ಅವಕಾಶಗಳು ಸೀಮಿತವಾಗುತ್ತವೆ. ತಂತ್ರಜ್ಞಾನದ ಪ್ರಗತಿಯು ದೇಶದ ಎಲ್ಲ ಭಾಗಗಳನ್ನು ಸಮಪ್ರಮಾಣದಲ್ಲಿ ತಲುಪುವು ದಿಲ್ಲ. ಒಂದು ದೇಶದ ಮುಂದುವರಿದ ಹಾಗೂ ಹಿಂದುಳಿದ ಪ್ರದೇಶಗಳ ನಡುವೆ ಆರ್ಥಿಕ ಮತ್ತು ಶೈಕ್ಷಣಿಕ ಸಮತೋಲನವನ್ನು ತರುವ ಕೆಲಸವು ಮೊದಲಿಗಿಂತ ಹೆಚ್ಚು ಕಷ್ಟ ವಾಗುತ್ತದೆ.

(೨) ಹೀಗೆಂದು ಪ್ರಾದೇಶಿಕ ಭಾಷೆಗಳಿಗೆ ಸಂಬಂಧಿಸಿದ ಹಲವು ವಾಸ್ತವಿಕ ಸಂಗತಿಗಳನ್ನು–ಅವುಗಳಲ್ಲಿ ಭಾವುಕತೆ ತುಂಬಿದೆಯೆಂದು–ನಿರ್ಲಕ್ಷಿಸುವುದು ಬಹಳ ಸಂಕುಚಿತ ವಾದ, ಲಾಭದ ಕಡೆಗೆಯೇ ಗಮನಪಿಟ್ಟ ಉಪಯೋಗವಾದೀ ದೃಷ್ಟಿಕೋನವಾಗುತ್ತದೆ. "ಭಾರತೀಯ ಏಕತೆಯ ಒಳಗೆ ಹುದುಗಿರುವ ಶ್ರೀಮಂತ ವೈವಿಧ್ಯವನ್ನು ಒಡಮೂಡಿ ಸಲು ನೂರು ಪ್ರಾದೇಶಿಕ ಜನಪ್ರಿಯ ಸಂಸ್ಕೃತಿ ಪುಷ್ಪಗಳು ಅರಳಲಿ" ಎಂಬ ಘೋಷಣೆಯು ಗುಜರಾತಿನ ನರ್ತಕಿಯೊಬ್ಬಳು ಮಣಿಪುರಿ ನೃತ್ಯ ಮಾಡುವಾಗ, ಹಾಗೆಯೇ ತಮಿಳು ಭಾಷೆಯ ಹಾಡುಗಾರನು ತೆಲುಗು ಹಾಡುಗಳನ್ನು ಹಾಡುವಾಗ ಸಾಕಷ್ಟು ಅರ್ಥಪೂರ್ಣವಾಗುತ್ತದೆ.

ಕೊನೆಗೂ ಭಾರತದ ರಾಜಕೀಯ ಏಕತೆಯು ಪ್ರಜಾಪ್ರಭುತ್ವವನ್ನು ಅವಲಂಬಿಸಿದೆಯೇ ವಿನಾ ಸಾಮ್ರಾಜ್ಯಶಾಹಿಯನ್ನಲ್ಲ.

(೩) ಈ ಎರಡು ಅತಿರೇಕಗಳು ಪರಸ್ಪರ ಸಂಧಿಸುವ ಕೆಲವು ವಲಯಗಳಿವೆ. ಭಾಷಾವಾರು ಪ್ರಾಂತಗಳಿಗಾಗಿ ನಡೆಸಿದ ಹೋರಾಟವು ಉಪಯುಕ್ತತೆಯ ಪರವಾದ ಮತ್ತು ಭಾವನಾತ್ಮಕತೆಯ ಪರವಾದ ಎರಡೂ ವಾದಗಳನ್ನು ಆಧರಿಸಿದೆ.

(೪) ಪ್ರಾಚೀನ ಮತ್ತು ಮಧ್ಯಕಾಲೀನ ಇಂಡಿಯಾದಲ್ಲಿ ವ್ಯಾಪಾರಿಗಳು' ಯಾತ್ರಿಕರು, ಪ್ರವಾಸಿಗಳು, ವಿದ್ವಾಂಸರು ಮತ್ತು ಆಡಳಿತಗಾರರು ಬೇರೆ ಬೇರೆ ಪ್ರದೇಶಗಳ ನಡುವಿನ ಸಂವಹನಕ್ಕೆ ಸಂಬಂಧಪಟ್ಟ ಸಮಸ್ಯೆಗಳನ್ನು ಎದುರಿಸಿದರು ಮತ್ತು ಬಿಡಿಸಿದರು. ಹಾಗೆ ಬಿಡಿಸಲೆಂದು ಅವರು ತಮ್ಮದೇ ಆದ ವಿವಿಧ ಮಾರ್ಗಗಳನ್ನು ಕಂಡುಕೊಂಡರು. ಎಲ್ಲ ಸಮಸ್ಯೆಗಳಿಗೂ ಸಮಾನವಾದ ರಾಮಬಾಣದಂಥ ಪರಿಹಾರಗಳನ್ನು ಯಾರೂ ಹೇರುತ್ತಿರಲಿಲ್ಲ. ಪರಿಹಾರ ಕಂಡುಕೊಳ್ಳುವ ವಿಧಾನ ಕೂಡ ಅನೌಪಚಾರಿಕವೂ, ಆತ್ಮೀಯವೂ ಆಗಿರುತ್ತಿತ್ತು. ನಿಜ, ನಾವು ಈಗ ಅಷ್ಟೊಂದು ನಿಧಾನಗತಿಯಲ್ಲಿ ಚಲಿಸಲು ಸಾಧ್ಯವಿಲ್ಲ. ಸಂಪೂರ್ಣವಾಗಿ ಅನೌಪಚಾರಿಕವಾಗಿ ಇರುವುದೂ ಸಾಧ್ಯವಿಲ್ಲ. ಆದರೆ ಕನಿಷ್ಠ ಪಕ್ಷ ಅವರ ನಮನಶೀಲತೆ ಮತ್ತು ವಿವೇಚನೆಗಳನ್ನು ನಾವು ಅನುಸರಿಸಬೇಕು. ಭಾಷಾನೀತಿಯನ್ನು ರೂಪಿಸುವ ಕೆಲಸದಲ್ಲಿ ಈ ಗುಣಗಳು ಖಂಡಿತವಾಗಿಯೂ ಅಡ್ಡಿಯಾಗಲಾರವು. ಜಡವಾದ ಘೋಷಣೆಗಳು, ಹಿಂಸೆ, ವಾಗಾಡಂಬರ ಮತ್ತು ತೀರ್ಮಾನ ತೆಗೆದುಕೊಳ್ಳುವುದನ್ನು ಮುಂದೆ ಹಾಕುತ್ತಾ ಹೋಗುವ ಗುಣಗಳಂತೂ ಖಂಡಿತವಾಗಿಯೂ ಯೋಜನೆಗೆ ಮಾರಕವಾದವು.

(೫) ಯಾವುದಾದರೊಂದು ಭಾಷೆಯನ್ನು ಬೃಹತ್ ಪ್ರಮಾಣದಲ್ಲಿ, ದ್ವಿತೀಯ ಭಾಷೆಯಾಗಿ ಕಲಿಸಬೇಕೆಂದು ವಾದಿಸುವ ಮೊದಲು ನಾವು ನಮಗಿರುವ ಸೀಮಿತ ಸಂಪನ್ಮೂಲಗಳು ಹಾಗೂ ಮಾನವಶಕ್ತಿಯ ಕಡೆಗೆ ಗಮನಹರಿಸಬೇಕು. ನಮ್ಮಲ್ಲಿರುವ ಉಪಾಧ್ಯಾಯರ ಸಂಖ್ಯೆ ಏನೇನೂ ಸಾಲದು. ಅವರಿಗೂ ಸರಿಯಾದ ತರಬೇತಿ ಸಿಕ್ಕಿರುವುದಿಲ್ಲ. ಅವರಿಗೆ ಕೊಡಲಾಗುವ ಅನಾಕರ್ಷಕ ಸಂಬಳಗಳ ಹಿನ್ನೆಲೆಯಲ್ಲಿ ಅವರು ಅಷ್ಟೊಂದು ಪ್ರತಿಭಾವಂತರೂ ಅಲ್ಲ. ಮತ್ತೆ ನೋಡಿದರೆ, ನಮ್ಮ ವಿದ್ಯಾರ್ಥಿಗಳಲ್ಲಿ ಗಾಂಭೀರ್ಯ ಕಡಿಮೆ. ಮತ್ತು ಮಹತ್ವಾಕಾಂಕ್ಷೆಯೂ ಕಡಿಮೆ ಪಾಠ ಹೇಳುವ ರೀತಿಯನ್ನು ಎಷ್ಟೇ ಸುಧಾರಿಸಿದರೂ ಅವು ವಿದ್ಯಾರ್ಥಿಗಳ ಪರಿಶ್ರಮಕ್ಕೆ ಬದಲಾದ ಮಂತ್ರದಂಡಗಳಲ್ಲ. ಕೆಲವರಿಗೆ ಮಾತ್ರ ಪಾಠ ಹೇಳುವ ರೀತಿಗಳ ಮೇಲೇ ನಂಬಿಕೆ.

(೬) ಅಖಿಲ ಭಾರತದ ಮಟ್ಟದಲ್ಲಿ ಹಿಂದಿ, ಇಂಗ್ಲಿಷ್, ಉರ್ದು ಅಥವಾ ಸಂಸ್ಕೃತಗಳು ಪರಸ್ಪರ ಸಂವಹನಕ್ಕಾಗಿಯೋ ಅಥವಾ ಪ್ರಾದೇಶಿಕ ಭಾಷೆಗಳ ನಡುವಿನ ಸಂಪರ್ಕ ಸಾಧನವಾಗಿಯೋ ಬಳಕೆಯಾಗಬಹುದು. ಉದಾಹರಣೆಗೆ ಸಂಪ್ರದಾಯಶೀಲ ಪಂಡಿತರ ವಾಗ್ವಾದಗಳಲ್ಲಿ, ವಿಶ್ವವಿದ್ಯಾಲಯ ಶಿಕ್ಷಣವುಳ್ಳ ವಿದ್ವಾಂಸರು ಮತ್ತು ವಿಜ್ಞಾನಿಗಳ ನಡುವಣ ಸಭೆ

ಗಳಲ್ಲಿ, ಮುಸ್ಲಿಂ ತತ್ತ್ವಜ್ಞಾನಿಗಳ ಸಮಾವೇಶದಲ್ಲಿ ಇತ್ಯಾದಿ ಸಂದರ್ಭಗಳಲ್ಲಿ ಈ ಭಾಷೆಗಳು ಬಳಕೆಯಾಗಬಹುದು. ಆದರೆ ಇವೇ ಪ್ರಾದೇಶಿಕ ಭಾಷೆಗಳು ಮತ್ತೊಂದು ಕೆಳ ನೆಲೆಯಲ್ಲಿ ತಾವು ಕೂಡ ಕೊಂಡಿ ಭಾಷೆಗಳಂತೆ ಕೆಲಸ ಮಾಡುತ್ತವೆ. ಹಾಗೂ ಈ ಭಾಷೆಗಳನ್ನು ಅಲ್ಪಸಂಖ್ಯಾತರ ಭಾಷೆಗಳ ಮೇಲೆ, ಗಿರಿಜನರ ಭಾಷೆಗಳ ಮೇಲೆ, ಮತ್ತು ಪ್ರಾದೇಶಿಕ ಉಪಭಾಷೆಗಳ ಮೇಲೆ ಹೇರಲಾಗುತ್ತದೆ. ಪ್ರಾದೇಶಿಕ ಭಾಷೆಗಳು ಅಖಿಲ ಭಾರತೀಯ ಸಂಪರ್ಕ ಭಾಷೆಗಳಿಂದ ತಮಗೆ ತೊಂದರೆಯಾಗುವುದಿಲ್ಲವೆಂಬ ಭರವಸೆಯನ್ನು ಬಯಸುವುದಾದರೆ ತಾವು ಕೂಡ ಉಪಭಾಷೆಗಳಿಗೆ ಮತ್ತು ಅಲ್ಪಸಂಖ್ಯಾತರ ಭಾಷೆಗಳಿಗೆ ಅದೇ ರೀತಿಯ ಆಶ್ವಾಸನೆಯನ್ನು ನೀಡಲು ಸಿದ್ಧರಾಗಿರಬೇಕು.

(೭) ಆದ್ದರಿಂದ ಭಾರತದ ಭಾಷಾ ಸಮಸ್ಯೆಗಳು ಕೇವಲ ಅನೇಕ ಭಾಷೆಗಳ ಇರುವಿಕೆಯಿಂದ ಹುಟ್ಟಿದವುಗಳಲ್ಲ. ಹಾಗೆ ನೋಡಿದರೆ, ಒಂದೇ ಭಾಷೆಯನ್ನು ಹೊಂದಿರುವ ಅಭಿವೃದ್ಧ ಮತ್ತು ಅನಭಿವೃದ್ಧ ರಾಷ್ಟ್ರಗಳೂ ಕೆಲವು ಭಾಷಾ ಸಮಸ್ಯೆಗಳನ್ನು ಎದುರಿಸುತ್ತವೆ. ಭಾರತದ ಭಾಷಾ ವೈವಿಧ್ಯದಿಂದ ಉಂಟಾಗಿರುವ ಎಲ್ಲರಿಗೂ ತಿಳಿದಿರುವ ಸಮಸ್ಯೆಗಳ ಜೊತೆಗೆ, ಈ ಸಮಸ್ಯೆಗಳನ್ನು ಕೂಡ ನಾವು ಎದುರಿಸಬೇಕಾಗಿವೆ.

(೮) ಭಾಷೆಯೊಂದರ ತಿಳುವಳಿಕೆ ತಾನೇತಾನಾಗಿ ನಮಗೆ ಆ ಭಾಷೆಯಲ್ಲಿ ಅಭಿವ್ಯಕ್ತಿ ಸಾಮರ್ಥ್ಯವನ್ನು ಕೊಟ್ಟುಬಿಡುವುದಿಲ್ಲ. ದಿನನಿತ್ಯದ ವ್ಯವಹಾರಗಳನ್ನು ನಡೆಸಲು ಸಾಕಾಗುವಷ್ಟು ಭಾಷಾಜ್ಞಾನವು ಹೆಚ್ಚೆಂದರೆ ಕೆಲವೇ ಕೆಲವು ಉದ್ದೇಶಗಳನ್ನು ನೆರವೇರಿಸಲು ಸಾಕು. ಆದ್ದರಿಂದ ನನಗೆ ಇಂಗ್ಲಿಷ್ ಭಾಷೆಯಲ್ಲಿ ವ್ಯವಹರಿಸಲು ಬರುತ್ತದೆ ಎಂದು ಹೇಳುವವನು ಅರ್ಥಶಾಸ್ತ್ರವನ್ನು ಕುರಿತ ಇಂಗ್ಲಿಷ್ ಪುಸ್ತಕವನ್ನು ಓದಿ ಗ್ರಹಿಸಲಾರ. ಹಾಗೆಯೇ ಹಿಂದಿಯ ಪ್ರಾಥಮಿಕ ತಿಳುವಳಿಕೆ ಇರುವವನಿಗೆ ಲೋಕಸಭೆಯಲ್ಲಿ ಹಿಂದಿಯಲ್ಲಿ ಮಾಡಲಾದ ಭಾಷಣವನ್ನು ಗ್ರಹಿಸಲು ಸಾಧ್ಯವಿಲ್ಲ. ಈ ವಿಷಯದಲ್ಲಿ ನಮ್ಮನ್ನು ನಾವು ಮೋಸಮಾಡಿಕೊಳ್ಳುವುದು ಬೇಡ. ಅಷ್ಟೇಕೆ, ಅನೇಕ ಬಾರಿ ನಮ್ಮ ಮಾತೃಭಾಷೆಯಲ್ಲಿ ಸರಾಗವಾಗಿ ಮಾತನಾಡುವುದೇ ನಮಗೆ ಕಷ್ಟವಾಗಿಬಿಡಬಹುದು. ಈ ಮಾತಿಗೆ ಸಾಕ್ಷಿ ಬೇಕಾದರೆ ಇಂಗ್ಲಿಷ್ ಮಾಧ್ಯಮದಲ್ಲಿ ಕಲಿತ ಅನೇಕ ವಿದ್ಯಾರ್ಥಿಗಳು ತಮ್ಮ ರಾಜ್ಯದಲ್ಲೇ ವಾಸಿಸುತ್ತಿರುವಾಗಲೂ ತಮ್ಮ ತಾಯಿನುಡಿಯಲ್ಲಿ ಮಾತನಾಡಲು ಪಡುವ ಪಾಡನ್ನು ನೋಡಿದರೆ ಸಾಕು. ಪ್ರಬುದ್ಧರಾದ ನಂತರ ಅವರು ತಮ್ಮದೇ ಮಾತೃಭಾಷೆಯನ್ನು ಕುರಿತ ಸಾಹಿತ್ಯ ಸಮಾವೇಶದಲ್ಲಿ ದಿಕ್ಕುತೋಚದವರಂತೆ ಕುಳಿತಿರುತ್ತಾರೆ.

೩

ಈ ಎಲ್ಲ ಚರ್ಚೆಯಿಂದ ಭಾಷೆಗಳ ಬಗ್ಗೆ ಯೋಜನೆಗಳನ್ನು ಹಾಕುವ ಎಲ್ಲ ಮಹನೀಯರು ಗಮನಿಸಲೇಬೇಕಾದ ಎರಡು ಮುಖ್ಯ ತತ್ತ್ವಗಳು ಮೂಡಿಬರುತ್ತವೆ. ಮೊದಲನೆಯ ತತ್ತ್ವವೆಂದರೆ ಭಾರತೀಯರು ಉಪಯೋಗಿಸುವ ಪ್ರತಿಯೊಂದು ಭಾಷೆಯೂ ಒಂದಲ್ಲ ಒಂದು ನೆಲೆಯಲ್ಲಿ ಸಂಪರ್ಕ ಭಾಷೆಯಾಗಿರುತ್ತದೆ ಎನ್ನುವುದು. ನಾವು ಬಳಸುವ

ಶಿಷ್ಟ ಮರಾಠಿ ಭಾಷೆಯೂ ಮಹಾರಾಷ್ಟ್ರದ ಹಲವು ಪ್ರಾದೇಶಿಕ ಮತ್ತು ಸಾಮಾಜಿಕ ಉಪಭಾಷೆಗಳ ನಡುವಿನ ಸಂಪರ್ಕ ಭಾಷೆ. ದಕ್ಷಿಣದ ರತ್ನಗಿರಿ ಜಿಲ್ಲೆಯಿಂದ ಬಂದ ರೈತನು ಉತ್ತರ ಚಂದ್ರಪುರದಿಂದ ಬಂದ ರೈತನೊಂದಿಗೆ ಬತ್ತದ ಕೃಷಿಯನ್ನು ಕುರಿತಾದ ಸಮಸ್ಯೆಗಳನ್ನು ಚರ್ಚಿಸಬೇಕಾದರೆ ತಮ್ಮ ತಮ್ಮ ಪ್ರಾದೇಶಿಕ ಉಪಭಾಷೆಗಳನ್ನು ಬಳಸಲು ಸಾಧ್ಯವಾಗುವುದಿಲ್ಲ. ಹಾಗೆಯೇ ತಮಿಳುನಾಡಿನ ತರುಣನೊಬ್ಬನು ಮರಾಠಿಯಲ್ಲಿ ವಿಶೇಷ ಜ್ಞಾನವನ್ನು ಪಡೆಯಬಯಸಿದರೆ ಆಗ ಮರಾಠಿಯು ಅವನ ಮತ್ತು ಮರಾಠಿ ಸಾಹಿತ್ಯ ಸಂಸ್ಕೃತಿಗಳ ನಡುವಿನ ಸೇತುವೆಯಾಗಿ ಕೆಲಸ ಮಾಡುತ್ತದೆ. ಹಾಗಿದ್ದರೆ ಏನು ತಪ್ಪು? ಒಬ್ಬ ತಮಿಳು ತರುಣನು ಫ್ರೆಂಚ್ ಭಾಷೆಯಲ್ಲಿ ಪರಿಣತಿಯನ್ನು ಪಡೆಯಬಹುದಾದರೆ ಅವನಿಗೆ ತನ್ನ ಶಾಲೆ ಅಥವಾ ಕಾಲೇಜಿನಲ್ಲಿ ಮರಾಠಿಯನ್ನು ಕಲಿಯುವ ಅವಕಾಶ ಏಕೆ ಇರಬಾರದು? ಮುಖ್ಯ ವಿಷಯ ವೆಂದರೆ ಅವನಿಗೆ ಹಾಗೆ ಮರಾಠಿ ಕಲಿಯಲು ಇಷ್ಟವಿರಬೇಕು. ಹೆಚ್ಚು ಭಾಷೆಗಳನ್ನು ಕಲಿಯುವ ವಿಚಾರದಲ್ಲಿ ನಾವು ಅಡೆತಡೆಗಳನ್ನು ಒಡ್ಡಬಾರದು. ನಾವು ಭಾಷೆ ಕಲಿಯಲು ಇರುವ ಸೌಲಭ್ಯಗಳನ್ನು ಹೆಚ್ಚಿಸಬೇಕು, ಸುಧಾರಿಸಬೇಕು ಮತ್ತು ಅನೇಕ ಮುಖವಾಗಿ ಮಾಡಬೇಕು. ಭಾಷಾಯೋಜನೆಯೆಂದರೆ ಭಾಷೆಗಳನ್ನು ಕಲಿಯಬೇಕೆಂಬ ಒತ್ತಾಯವಲ್ಲ ಬದಲಾಗಿ ಅದು ಕಲಿಯಲು ಕೊಡುವ ಸ್ವಾತಂತ್ರ್ಯ. ಹೊಸದೊಂದು ಭಾಷೆಯನ್ನು ಕಲಿಯುವುದೆಂದರೆ ಹೊಸ ಸಮುದಾಯದ ಭಾಗವಾದ ಹಾಗೆ. ಹೊಸ ಬಿಡುಗಡೆಯನ್ನು ಪಡೆದ ಹಾಗೆ.

ಎರಡನೆಯ ಮೂಲಭೂತ ತತ್ತ್ವದ ಬಗ್ಗೆ, ನಾವು ವಿಮಾನ ಮತ್ತು ಎತ್ತಿನ ಗಾಡಿಗಳ ಬಗ್ಗೆ ಮಾತನಾಡಿದಾಗ ಸೂಚನೆ ಕೊಟ್ಟಿದ್ದೇವೆ. ನಾವು ದೂರದ ಸ್ವೀಡಿಷ್ ಭಾಷೆಯ ಉದಾಹರಣೆಯಿಂದ ಆ ತತ್ವವನ್ನು ಹೆಚ್ಚು ವಸ್ತುನಿಷ್ಠತೆಯಿಂದ ತಿಳಿದುಕೊಳ್ಳಬಹುದಾಗಿದೆ. ಆ ಭಾಷೆಯಲ್ಲಿ ಬಹು ಹಿಂದಿನ ಜಮೀನ್ದಾರೀ ವ್ಯವಸ್ಥೆಯಿಂದ ಹರಿದು ಬಂದ ಅಧಿಕಾರ ಹಾಗೂ ಶ್ರೇಣೀಕರಣವನ್ನು ಸೂಚಿಸುವ ಅನೇಕ ಪದಗಳಿವೆ. ಸಮಾನತೆಯನ್ನು ಪ್ರತಿಪಾದಿಸುವ ಇಂದಿನ ಸ್ವೀಡನ್‌ನಲ್ಲಿ ಈ ರೀತಿಯ ಪದಗಳು ಅನಗತ್ಯವಾದ ಹೊರೆಯಾಗಿವೆ. ಇಂದಿನ ಸ್ವೀಡಿಷ್ ತರುಣನೊಬ್ಬ ಬಾಯಿ ಬಿಡುವುದಕ್ಕೆ ಮೊದಲು ತನಗೂ ತನ್ನ ಜೊತೆಯಲ್ಲಿ ಮಾತನಾಡುತ್ತಿರುವವನಿಗೂ ಇರುವ ಸಾಮಾಜಿಕ ಸಂಬಂಧವನ್ನು ಲಕ್ಷ್ಯದಲ್ಲಿಡಬೇಕಾಗುತ್ತದೆ. ಇಲ್ಲದಿದ್ದರೆ ಅವನು ಬಾಯಿ ಬಿಡುವುದೂ ಸಾಧ್ಯವಿಲ್ಲ. ಸ್ವೀಡಿಷ್ ಭಾಷೆಯು ಕ್ರಮೇಣ ಈ ಪದಗಳನ್ನು ಕಳೆದುಕೊಳ್ಳುವುದರಲ್ಲಿ ಯಾವ ಅನುಮಾನವೂ ಇಲ್ಲ. ಆದರೆ ಭಾರತದ ಐತಿಹಾಸಿಕ ಸಂದರ್ಭವನ್ನು ಗಮನದಲ್ಲಿಟ್ಟುಕೊಂಡು ಯೋಚಿಸಿದರೆ ಸಂಪ್ರದಾಯವು ತನ್ನದೇ ಆದ ನಿಧಾನಗತಿಯಲ್ಲಿ ಈ ಬದಲಾವಣೆಯನ್ನು ತಂದುಕೊಳ್ಳಲಿ ಎಂದು ಕಾಯುವುದು ಸಾಧ್ಯವಿಲ್ಲ. ಬದಲಾಗಿ ನಾವು ಕೆಲವು ಬದಲಾವಣೆಗಳಿಗೆ ವೇಗವರ್ಧಕಗಳನ್ನು, ಮತ್ತೆ ಕೆಲವು ಬದಲಾವಣೆಗಳಿಗೆ ವೇಗ ನಾಶಕಗಳನ್ನು ಒದಗಿಸಬೇಕಾಗುತ್ತದೆ. ಕೃಷಿ ಪ್ರಧಾನವಾದ, ಗ್ರಾಮೀಣವಾದ, ಶ್ರೇಣೀಕೃತವಾದ ಹಾಗೂ

ಪ್ರತ್ಯೇಕಿತವಾದ ಸಮಾಜದಲ್ಲಿ ಬೆಳೆದ ನಮ್ಮ ಭಾಷೆಗಳನ್ನು ಅವು ಆಧುನಿಕ ಸಮಾಜದ ಅಗತ್ಯಗಳಿಗೆ ಹೊಂದಿಕೊಳ್ಳುವಂತೆ ಮರುರೂಪಿಸಬೇಕಾಗಿದೆ. ಆ ಅಗತ್ಯಗಳು ಕೆಳಕಂಡಂತಿವೆ.

ಅ) ವಿಜ್ಞಾನ ಮತ್ತು ಇತರ ಶಾಸ್ತ್ರೀಯ ಸಂಗತಿಗಳನ್ನು ಯಾರಿಗೆ ಅಗತ್ಯವಿದೆಯೋ ಅವರಿಗೆ ತಲುಪಿಸುವಂಥ ಪ್ರಮಾಣೀಕೃತ ವಸ್ತುನಿಷ್ಠ ಭಾಷೆಯನ್ನು ರೂಪಿಸುವುದು.

ಬ) ವ್ಯಕ್ತಿಯು ಗುಂಪುಗುಂಪಾದ ಸಮಾಜದೊಳಗೆ ಮುಳುಗಿಹೋಗದ ಹಾಗೆ, ಹೊಸ ವಿಚಾರಗಳನ್ನು, ಅತ್ಯಂತ ವಸ್ತುನಿಷ್ಠ ಭಾವನೆಗಳನ್ನು, ಅನನ್ಯವಾಗಿ ಅಭಿವ್ಯಕ್ತ ಮಾಡಲು ಸೂಕ್ತವಾದ ಸಾಹಿತ್ಯಕ ಭಾಷೆಯನ್ನು ರೂಪಿಸುವುದು

ಕ) ಸಾರ್ವಜನಿಕ ಜೀವನ ಮತ್ತು ಪತ್ರಿಕೋದ್ಯಮದಲ್ಲಿ ವಿಚಾರ ಹಾಗೂ ಭಾವನೆಗಳನ್ನು ಹಂಚಿಕೊಳ್ಳಲು ಅಗತ್ಯವಾದ ಮತ್ತೊಂದು ಭಾಷಾಶೈಲಿಯನ್ನು ರೂಪಿಸುವುದು. ಈ ಶೈಲಿಯಲ್ಲಿ ಹಳಸಿಹೋದ ಕ್ಲೀಷೆಗಳು ಇರಬಾರದು ಅತಿ ಆಡಂಬರ ಇರಬಾರದು ಮತ್ತು ಸಂವಹನವನ್ನು ಸಾಧ್ಯ ಆಗದಂತೆ ಮಾಡುವ ಹುಸಿ ತಾಂತ್ರಿಕತೆಯ ಪರಿಭಾಷೆ ಇರಬಾರದು.

ಯುರೋಪಿನ ಪ್ರಮುಖ ಭಾಷೆಗಳು ಕಳೆದ ನಾಲ್ಕುನೂರು ವರ್ಷಗಳಲ್ಲಿ ತಮ್ಮನ್ನು ತಾವು ಆಧುನಿಕಗೊಳಿಸಿಕೊಂಡವು. ಭಾರತೀಯ ಭಾಷೆಗಳು ಅಷ್ಟು ಕಾಲ ಕಾಯಲಾರವು. ಆದರೆ ಭಾಷೆಯನ್ನು ಮರುರೂಪಿಸುವ ಈ ಕೆಲಸವನ್ನು ಕಮಿಟಿಗಳ ಮೂಲಕ, ಹಾಗೆಯೇ ತರಗತಿಯ ಕೊಠಡಿಗಳಲ್ಲಿ ಬಿಡಿಸಲು ಸಾಧ್ಯವಿಲ್ಲ. ಆದರೆ ಇಂಥ ಸಮಿತಿಗಳು ದಿಕ್ಕುಗಳನ್ನು ಸೂಚಿಸಬಹುದು, ಸಾಧ್ಯತೆಗಳನ್ನು ತೋರಿಸಿಕೊಡಬಹುದು. ಹಾಗೆಯೇ ಅಧ್ಯಾಪಕರು ತಮ್ಮ ವಿದ್ಯಾರ್ಥಿಗಳಲ್ಲಿ ಈ ಸಮಸ್ಯೆಗಳನ್ನು ಕುರಿತಾದ ಎಚ್ಚರ ಮೂಡುವಂತೆ ಮಾಡಬಹುದು. ಪ್ರತಿಭಾವಂತರಾದ ಲೇಖಕರು ಮತ್ತು ಮಾತುಗಾರರು ರೂಪಿಸುತ್ತಿರುವ ಹೊಸ ಉಪಕರಣಗಳ ಕಡೆಗೆ ಅವರ ಗಮನ ಸೆಳೆಯಬಹುದು. ಓದುಗನು ಅರ್ಥದಾರಿ ನಡೆದು ತನ್ನನ್ನು ಅರ್ಥಮಾಡಿಕೊಳ್ಳಲಾರದಷ್ಟು ಸೋಮಾರಿಯಾಗಿರುವನೆಂದು ಲೇಖಕ ನಿರಾಶೆಗೊಳ್ಳುವುದು ಬೇಡ. ಒಂದು ಶಾಲೆಯು ನಿಮ್ಮನ್ನು ಶೇಕ್ಸ್‌ಪಿಯರ್ ಅಥವಾ ಬರ್ಟ್ರೆಂಡ್ ರಸೆಲ್ ಆಗಿ ಮಾಡದಿರಬಹುದು. ಆದರೆ ಅಷ್ಟೊಂದು ಪ್ರತಿಭಾವಂತರಾದ ವ್ಯಕ್ತಿಗಳು ನಿಮ್ಮೊಡನೆ ಮಾತನಾಡಿದಾಗ, ಅವರನ್ನು ಗುರುತಿಸುವ ಶಕ್ತಿಯನ್ನು ಶಾಲಾಶಿಕ್ಷಣ ನಿಮಗೆ ಕೊಡಬಲ್ಲುದು. ಅದಕ್ಕಿಂತ ಮುಖ್ಯವಾಗಿ, ಒಳಗೆ ಯಾವ ಭಾವನೆಗಳಾಗಲಿ, ವಿಚಾರಗಳಾಗಲಿ, ಇಲ್ಲದ ಜೊಳ್ಳು ಮನುಷ್ಯನೊಬ್ಬನು ಆಡಂಬರದಿಂದ ತುಂಬಿದ ಭಾಷೆಯ ಮೂಲಕ ನಿಮಗೆ ಮೋಸ ಮಾಡಲು ಪ್ರಯತ್ನಿಸಿದರೆ ಅವನನ್ನು ಗುರುತಿಸಲು ನಿಮಗೆ ಸಾಧ್ಯವಾಗುತ್ತದೆ.

ಆದ್ದರಿಂದ ಭಾಷಾಯೋಜನೆಯು ಸಂಪೂರ್ಣವಾಗಿ ಸರಕಾರಿ ಇಲಾಖೆಗಳಿಗೆ ಬಿಟ್ಟು ಬಿಡಬಹುದಾದ ಕೆಲಸವಲ್ಲ. ಅದರ ಬಗ್ಗೆ ವಿವಿಧ ವಿಷಯಗಳ ತಜ್ಞರು, ಶಿಕ್ಷಕರು,

ಲೇಖಕರು, ಪತ್ರಿಕೋದ್ಯಮಿಗಳು, ಸಮೂಹ ಸಂವಹನ ಮಾಧ್ಯಮಗಳಲ್ಲಿ ಕೆಲಸ ಮಾಡು ವವರು, ಸಾರ್ವಜನಿಕ ಸಭೆ ಸಮಾರಂಭಗಳಲ್ಲಿ ಮಾತನಾಡುವವರು ಎಲ್ಲರೂ ಗಮನಿಸ ಬೇಕು. ವಾಸ್ತವವಾಗಿ ಅದು ಪ್ರತಿಯೊಬ್ಬ ನಾಗರಿಕನಿಗೂ ಸಂಬಂಧಪಟ್ಟ ವಿಷಯ.

೪

ಯಾದವರ ಕಾಲದಲ್ಲಿ ಎಂದರೆ ೧೨-೧೩ನೇ ಶತಮಾನದಲ್ಲಿ ಮರಾಠಿ ಮಹಾರಾಷ್ಟ್ರದ ರಾಜ್ಯಭಾಷೆಯಾಗಿತ್ತು. ೧೪ ರಿಂದ ೧೭ನೇ ಶತಮಾನದವರೆಗಿನ ಅವಧಿಯಲ್ಲಿ ಬಹಮನಿ ಸಾಮ್ರಾಜ್ಯ ಮತ್ತು ಅದರ ಎರಡು ಉತ್ತರಾಧಿಕಾರಿಗಳಾದ ಬಿಜಾಪುರದ ಆದಿಲ್‌ಶಾಹಿ ಹಾಗೂ ಅಹಮ್ಮದ್ ನಗರದ ನಿಜಾಂಶಾಹಿಗಳಲ್ಲಿ ಪರ್ಷಿಯನ್ ರಾಜ್ಯಭಾಷೆ ಯಾಯಿತು. ಆದರೆ ಆಗಲೂ ಇಂಡೋಆರ್ಯನ್ ಭಾಷೆಗಳಾದ ಮರಾಠಿ ಮತ್ತು ದಖನಿ ಉರ್ದು ಮಹತ್ವದ ಆನುಷಂಗಿಕ ಪಾತ್ರವಹಿಸಿದವು. ಅವು ಆಡಳಿತ ಮತ್ತು ನ್ಯಾಯಾಂಗಕ್ಕೆ ಸಂಬಂಧಿಸಿದಂತೆ ಅನೇಕ ಪರ್ಷಿಯನ್ ಪದಗಳನ್ನು ಉಪಯೋಗಿಸುತ್ತಿದ್ದವು. ಮೊಗಲ್ ಸಾಮ್ರಾಜ್ಯದ ಅವನತಿಯು ೧೮ನೇ ಶತಮಾನದಲ್ಲಿ ನಡೆದ ನಂತರ, ಅದರ ಮೂಲಕವೇ ಮೂಡಿ ಬಂದ ನಿಜಾಂ ಪ್ರಾಬಲ್ಯದ ಅಸಫಶಾಹಿಗೂ ಈ ಮಾತು ಅನ್ವಯಿ ಸುತ್ತದೆ. ಅಸಫಶಾಹಿಯು ಮಹಾರಾಷ್ಟ್ರದ ಮುಖ್ಯ ಭಾಗವನ್ನು ಆವರಿಸಿತ್ತು. (ಇಲ್ಲಿ ನಾನು ಅರಾಬಿಕ್ ಭಾಷೆಯಿಂದ ಎರವಲು ತೆಗೆದುಕೊಂಡ ಪದಗಳ ಬಗ್ಗೆ ಪ್ರತ್ಯೇಕವಾಗಿ ಹೇಳಿಲ್ಲ. ಏಕೆಂದರೆ ಅವು ಕೂಡ ಮರಾಠಿಗೆ ಪರ್ಷಿಯನ್ ಮೂಲಕವೇ ಬಂದವು. ಎಲ್ಲೋ ಕೆಲವು ಕಡೆ ಒಂದು ಪದದ ಅರಾಬಿಕ್ ಮೂಲ ಮತ್ತು ಪರ್ಷಿಯನ್ ರೂಪಾಂತರಗಳೆರಡೂ ಬಳಕೆಯಲ್ಲಿವೆ. ಉದಾಹರಣೆಗೆ ಮರಾಠಿಯ 'ಕಾಗದ್' ಎಂಬ ಪದ ಮತ್ತು ಉರ್ದುವಿನ 'ಕಾಗಜ್' ಎಂಬ ಪದಗಳು ಕಾಗದ ಎಂಬ ಅರ್ಥ ಕೊಡುತ್ತವೆ.) ಮರಾಠರ ಪ್ರಾಬಲ್ಯವನ್ನು ಸ್ಥಾಪಿಸಿದ ಶಿವಾಜಿಯು ಮರಾಠಿಯನ್ನು ರಾಜ್ಯಭಾಷೆಯನ್ನಾಗಿ ಮಾಡಿದನು. ಅಷ್ಟೇ ಅಲ್ಲದೆ ಸುಮಾರು ೧೬೭೬ರಲ್ಲಿ ರಘುನಾಥ ಪಂಡಿತ ಎಂಬ ವಿದ್ವಾಂಸ ನನ್ನು ರಾಜ ವ್ಯವಹಾರಕೋಶ ಒಂದನ್ನು ಸಿದ್ಧಪಡಿಸಬೇಕೆಂದು ಕೇಳಿದನು. ಇದು ಮುಖ್ಯ ವಾಗಿ ಆಡಳಿತಾತ್ಮಕ ಪದಗಳ ಪರ್ಷಿಯನ್-ಸಂಸ್ಕೃತ ನಿಘಂಟು. ಈ ಕೃತಿಯು ಪದ್ಯರೂಪ ದಲ್ಲಿದೆ. ಪದಗಳನ್ನು ವಸ್ತುವಿಗೆ ಅನುಗುಣವಾಗಿ ಜೋಡಿಸಲಾಗಿದೆ. ಈ ನಿಘಂಟಿನ ಪ್ರಕಟಣೆಯನಂತರ ಮರಾಠಿ ಪುಸ್ತಕಗಳಲ್ಲಿ ಪರ್ಷಿಯನ್ ಎರವಲು ಪದಗಳ ಸಂಖ್ಯೆಯೂ ಸಾಕಷ್ಟು ಕಡಿಮೆಯಾಯಿತು. ವಿ. ಕೆ. ರಾಜವಾಡೆಯವರು (೧೯೦೩) ಮೂರು ಮಾದರಿ ದಾಖಲೆಗಳನ್ನು ಉದಹರಿಸುತ್ತಾರೆ. ಅವು ೧೬೨೧, ೧೬೭೭ ಹಾಗೂ ೧೮೨೮ರ ದಾಖಲೆಗಳು ಅವುಗಳಲ್ಲಿ ಪರ್ಷಿಯನ್‌ನಿಂದ ಎರವಲು ತೆಗೆದುಕೊಂಡ ಪದಗಳ ಶೇಕಡಾ ಪ್ರಮಾಣವು ಕ್ರಮವಾಗಿ ೮೬,೩೮ ಮತ್ತು ೬ ಆಗಿದೆ. ಅಂದಿನ ದಿನಗಳ ಮರಾಠಿಯು ಭಾಷಾ ಬಳಕೆಯ ಎರಡು ಸನ್ನಿವೇಶಗಳನ್ನು ಗುರುತಿಸುತ್ತಿತ್ತು. ಗಂಭೀರವಾದ ಬರವಣಿಗೆಗಾಗಿ ಸಂಸ್ಕೃತ ಪದಗಳನ್ನು ಹಾಗೂ ಸಂಸ್ಕೃತದ ಮಾದರಿಯ ಶೈಲಿಗಳನ್ನು ಬಳಸುತ್ತಿತ್ತು. ಸಾಮಾನ್ಯ

ಜನರ ದಿನಬಳಕೆಯು ಮರಾಠಿಯಾದರೋ ತದ್ಭವಗಳು ಮತ್ತು ದೇಶೀ ಪದಗಳನ್ನು ಬಳಸುತ್ತಿತ್ತು. ಆಗ ಜನ ಸಾಮಾನ್ಯರನ್ನು ಪ್ರಾಕೃತ ಜನ ಎಂದು ಕರೆಯುತ್ತಿದ್ದರು. ಈ ವ್ಯತ್ಯಾಸವು ಎರಡು ಬಗೆಯ ಸಾಹಿತ್ಯಗಳಿಗೂ ಅನ್ವಯಿಸುತ್ತವೆ. ರಾಜ್ಯಭಾರವಂತೂ ಹೇಳಿ ಕೇಳಿ ಗಂಭೀರ ವಿಷಯ. ಅಲ್ಲಿ ಈ ಮೊದಲೇ ಹೆಸರಿಸಿದ ಪ್ರೌಢಶೈಲಿಯನ್ನು ಬಳಸಲೇಬೇಕು. (ಈ ರೀತಿಯ ಚಿಂತನ ಕ್ರಮವು ಇಂದಿಗೂ ಪೂರ್ತಿಯಾಗಿ ಮಾಯ ವಾಗಿಲ್ಲ. ಹೆಚ್ಚೆಂದರೆ ಪ್ರಜಾಪ್ರಭುತ್ವದ ಸಂದರ್ಭದಲ್ಲಿ ರಾಜ್ಯಭಾರವನ್ನು ಸಾಮಾನ್ಯ ಜನರ ವ್ಯವಹಾರವೆಂದು ಕರೆಯಲಾಗುತ್ತವೆ.) ಬ್ರಿಟಿಷ್ ಆಳರಸರು ಜಿಲ್ಲಾಮಟ್ಟ ಮತ್ತು ಅದಕ್ಕೆ ಕೆಳಗಿನ ಹಂತಗಳಲ್ಲಿ ಪ್ರಾದೇಶಿಕ ಭಾಷೆಯನ್ನು ಬಳಸಬೇಕೆಂದು ಹೇಳಿದರು. ಪ್ರಾಂತ್ಯಮಟ್ಟದಲ್ಲಿ ಹಾಗೂ ಅಂತರ ರಾಜಕೀಯ ವ್ಯವಹಾರಗಳಲ್ಲಿ ಇಂಗ್ಲಿಷ್ ಭಾಷೆಯನ್ನು ಬಳಸುವುದು ಅನಿವಾರ್ಯವಾಯಿತು. ಆಡಳಿತ ಮರಾಠಿಯು ತನ್ನಲ್ಲಿದ್ದ ಪರ್ಷಿಯನ್ ಎರವಲು ಪದಗಳನ್ನು ಉಳಿಸಿಕೊಂಡಿತು. ನ್ಯಾಯಾಂಗಕ್ಕೆ ಸಂಬಂಧಿಸಿದಂತಹ ಪದಗಳ ಲ್ಲಂತೂ ಈ ಮಾತು ಇನ್ನಷ್ಟು ನಿಜ. ಅದರ ಜತೆಗೆ ಅನೇಕ ಇಂಗ್ಲಿಷ್ ಎರವಲು ಪದಗಳು ಬಳಕೆಗೆ ಬಂದವು. ಮಹಾರಾಷ್ಟ್ರದ ಸಾಮಂತ ರಾಜ್ಯಗಳಂತೂ ಇಂಗ್ಲಿಷ್ ಮತ್ತು ಪರ್ಷಿಯನ್ ಆಡಳಿತಾತ್ಮಕ ಪದಗಳು ತುಂಬಿದ ಮರಾಠಿಯನ್ನೇ ಬಳಸುತ್ತಿದ್ದವು. (ಈ ಮಾತಿಗೆ ಸಹಜವಾಗಿಯೇ ನಿಜಾಂ ಮತ್ತು ಜಂಜಿರಾ ಪ್ರದೇಶಗಳು ಅಪವಾದಗಳು.)

ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ಅಂದರೆ ೧೯೪೭ರ ವರೆಗೂ ರಾಜ್ಯಗಳ ಭಾಷಾವಾರು ಪುನರ್ ವಿಂಗಡಣೆ ಮಾಡಬೇಕೆಂಬ ವಿಚಾರಗಳು ಕೇಳಿ ಬರುತ್ತಿದ್ದವು. ಅದರ ಜತೆಗೆ ಸರ್ಕಾರಿ ವ್ಯವಹಾರಗಳಲ್ಲಿ ಭಾರತೀಯ ಭಾಷೆಗಳನ್ನು ಬಳಸಬೇಕೆಂಬ ಒತ್ತಡವೂ ಇತ್ತು. (ರಘುನಾಥ ಪಂಡಿತ ಅವರ ಶಬ್ದಕೋಶವು ಈ ಉದ್ದೇಶದಿಂದಲೇ ೧೮೬೦ ಮತ್ತು ೧೮೮೦ ರಲ್ಲಿ ಬೇರೆ ಬೇರೆ ಸಂಪಾದಕರಿಂದ ಪುನರ್ಮುದ್ರಿತವಾಯಿತು. ಕವಿ ಮಾಧವ ಜ್ಯೂಲಿಯನ್ ಮರಾಠಿ ಭಾಷೆಯನ್ನು ಹೊಗಳುವ ತನ್ನ ಕವಿತೆಯಲ್ಲಿ ಅದರ ಇಂದಿನ ಸ್ಥಿತಿಗಾಗಿ ಮರುಗುತ್ತ ಇಂದಲ್ಲ ನಾಳೆ ಅದು ರಾಜ್ಯ ಭಾಷೆಯಾಗುವುದೆಂಬ ಭರವಸೆಯನ್ನು ವ್ಯಕ್ತಪಡಿಸುತ್ತಾನೆ.) ಸ್ವಾತಂತ್ರ್ಯ ಬಂದ ನಂತರ ಈ ಎರಡು ವಿಚಾರಗಳನ್ನು ಅನುಷ್ಠಾನಕ್ಕೆ ತರಬಹುದಾದ ಕಾಲ ಬಂತು ಆದರೆ ಆಗ ಇತರ ವಿಚಾರಗಳು ಅಡ್ಡಿ ಬಂದವು. (ಸೋಮಾರಿತನ ಮತ್ತು ಹಿತಾಸಕ್ತಿಗಳು ಇಂಥ ಅಡ್ಡಿಗಳಲ್ಲಿ ಎರಡು) ೧೯೬೦ ರಲ್ಲಿ ಮಹಾರಾಷ್ಟ್ರ ರಾಜ್ಯ ಅದರ ಇಂದಿನ ಸ್ವರೂಪದಲ್ಲಿ ಅಸ್ತಿತ್ವಕ್ಕೆ ಬಂತು. ಆಗ ಮರಾಠಿ ಯನ್ನು ರಾಜ್ಯಭಾಷೆಯಾಗಿ ಮಾಡುವ ಪ್ರಶ್ನೆಯು ಮುಂದೆ ಬಂತು.

ಪ್ರಶ್ನೆಯೇನೋ ಮುಂದೆ ಬಂತು. ಆದರೆ ಅದಕ್ಕೆ ಒಂದು ಖಚಿತವಾದ, ನೇರವಾದ ಉತ್ತರ ಇರಲಿಲ್ಲ. ವಾಸ್ತವವಾಗಿ ಇಡೀ ಪ್ರಶ್ನೆಯನ್ನೇ ಬೇರೆ ನೆಲೆಗಳಲ್ಲಿ ಮರುರೂಪಿಸ ಲಾಯಿತು ಆ ಹೊಸ ಪ್ರಶ್ನೆ ಈ ರೀತಿಯಿತ್ತು: ಮರಾಠಿಯು ನಿಜವಾಗಿಯೂ ಮಹಾರಾಷ್ಟ್ರದ ರಾಜ್ಯಭಾಷೆ ಆಗಬೇಕೆ? ಆಗಬೇಕಾದರೆ ಅದು ಯಾವ ರೂಪವನ್ನು

ತಳೆಯಬೇಕು? ಅದು ಸಂಸ್ಕೃತದ ಕಡೆ ಒಲಿಯಬೇಕೋ ಅಥವಾ ಸಂಸ್ಕೃತೀಕರಣಗೊಂಡ ಹಿಂದಿಯ ಕಡೆಗೆ ತಿರುಗಬೇಕೋ? ಅಥವಾ ಅದು ತನಗೆ ಸಹಜವಾದ ದೇಶೀ ಸೊಗಡನ್ನು ಹಾಗೆಯೇ ಉಳಿಸಿಕೊಳ್ಳಬೇಕೋ.

ಈ ರೀತಿಯ ಪ್ರಶ್ನೆಗಳು ಮೂರು ಬಗೆಯ ಚಿಂತನ ವಿಧಾನಗಳಿಗೆ ದಾರಿಮಾಡಿ ಕೊಟ್ಟಿವೆ. ಅವು ಕ್ರಮವಾಗಿ ಸಂಸ್ಕೃತಪರ, ಮರಾಠಿಪರ ಮತ್ತು ಇಂಗ್ಲಿಷ್‌ಪರ ಚಿಂತನ ವಲಯಗಳು. ಇಲ್ಲಿ ಒಂದು ಆಶ್ಚರ್ಯದ ಸಂಗತಿಯಿದೆ. ಇಂಗ್ಲಿಷ್ ಪರವಾಗಿ ವಾದಿಸು ವವರು ಮರಾಠಿಯನ್ನು ಔಪಚಾರಿಕವಾಗಿ ರಾಜ್ಯ ಭಾಷೆಯೆಂದು ಒಪ್ಪಿಕೊಳ್ಳಲು ಯಾವ ವಿರೋಧವನ್ನೂ ತೋರಿಸಲಿಲ್ಲ. ಔಪಚಾರಿಕ ವಿಧಿವಿಧಾನಗಳ ಬಗ್ಗೆ ಭಾರತೀಯರಿಗಿರುವ ಸಾಂಪ್ರದಾಯಿಕ ನಿಲುವನ್ನು ತಿಳಿದವರಿಗೆ ಈ ಸಂಗತಿ ಆಶ್ಚರ್ಯವನ್ನುಂಟುಮಾಡ ಬಾರದು. ಹಾಗೆನೋಡಿದರೆ, ನಂತರ ಹುಟ್ಟಿಕೊಂಡ ವಾಗ್ವಾದಗಳಲ್ಲಿ ಇಂಗ್ಲಿಷ್ ಪ್ರತಿಪಾದಕರು ನಿಷ್ಕ್ರಿಯವಾಗಿ ಉಳಿದು ಆಗುಹೋಗುಗಳ ಮೇಲೆ ವ್ಯಾಖ್ಯಾನ ನಡೆಸಿದರು. ಇದೆಲ್ಲದರ ಫಲವಾಗಿ ಸಮಸ್ಯೆಯ ಪರಿಹಾರವು ಮತ್ತಷ್ಟು ದೂರವಾಯಿತು. ಆದರೆ ಒಟ್ಟು ಸಮಸ್ಯೆಯ ಇರುವಿಕೆಯಲ್ಲಿ ನಿರ್ಲಕ್ಷಿತವಾಗಿದ್ದ ಕೆಲವು ಅಂಶಗಳು ಬೆಳಕಿಗೆ ಬಂದವು. ಈ ಪ್ರಶ್ನೆಗೆ ತೀರ ಸರಳವಾದ ನೇರ ಪರಿಹಾರಗಳು ಇಲ್ಲವೆಂಬುದು ಗೊತ್ತಾಯಿತು.

ರಾಜ್ಯಭಾಷೆಯನ್ನು ಕುರಿತ ವಾಗ್ವಾದದ ಬೆಳವಣಿಗೆಯ ಹಿನ್ನೆಲೆಯಲ್ಲಿ ೧೯೬೦ರ ನಂತರದ ಘಟನೆಗಳನ್ನು ಸಂಗ್ರಹವಾಗಿ ಗಮನಿಸಬಹುದು. ೧೯೬೧ರಲ್ಲಿ ಭಾಷಾ ನಿರ್ದೇಶನಾಲಯವು ಸ್ಥಾಪಿತವಾಯಿತು. ಅದರ ಜತೆಗೆ "ಭಾಷಾ ಸಲಹಾ ಸಮಿತಿ" ಯೊಂದು ರೂಪಿತವಾಯಿತು. ಇವೆರಡೂ ಸೇರಿಕೊಂಡು ಮರಾಠಿಯ ಆಡಳಿತಾತ್ಮಕ ಪದ ಗಳನ್ನು ರೂಪಿಸುವ ಕೆಲಸದಲ್ಲಿ ತೊಡಗಿದವು. ಮೊದಲ ಕಂತಿನಲ್ಲಿ ೧೯೬೨ರಲ್ಲಿ 'ಪದನಾಮ ಕೋಶವು' ಪ್ರಕಟವಾಯಿತು. ಇದು ಬೇರೆ ಬೇರೆ ಅಧಿಕಾರ ಸ್ಥಾನಗಳಿಗೆ ಕೊಡಬಹುದಾದ ಮರಾಠಿ ಪದಗಳ ಪಟ್ಟಿ. ತಕ್ಷಣ ಮರಾಠಿ ಸಾಹಿತಿ ಮತ್ತು ಪತ್ರಿಕೋದ್ಯಮಿಯಾದ ಪಿ. ಕೆ. ಅತ್ರೇಯವರು ಪದನಾಮ ಕೋಶವನ್ನು ಕಟುವಾಗಿ ಟೀಕಿಸಿದರು. ಅವರ ಪ್ರಕಾರ ಮರಾಠಿಯು ರಾಜ್ಯಭಾಷೆಯಾಗಬೇಕು. ಆದರೆ ಸಂಸ್ಕೃತಭೂಯಿಷ್ಠ ಆಗಬಾರದು. ೧೯೬೪ರಲ್ಲಿ ಮರಾಠಿ ರಾಜ್ಯ ಭಾಷೆಯ ಮಸೂದೆಯನ್ನು ಮಂಡಿಸಿ ಅನುಮತಿ ಪಡೆಯ ಲಾಯಿತು. ೧೯೬೮ರಲ್ಲಿ ರಾಜಕೀಯ ವ್ಯವಹಾರ ಕೋಶದ ಪ್ರಾಥಮಿಕ ಆವೃತ್ತಿಯೊಂದನ್ನು ರಹಸ್ಯವಾಗಿ ಹೊರತರಲಾಯಿತು. ತಜ್ಞರ ಅಭಿಪ್ರಾಯಗಳನ್ನು ಗುಟ್ಟಾಗಿ ಸಂಗ್ರಹಿಸುವುದು ಇದರ ಗುರಿಯಾಯಿತು. ಆದರೆ ಈ ರಹಸ್ಯಮಯತೆಯೇ ತಪ್ಪಾಯಿತೆಂದು ತೋರುತ್ತದೆ. ಏಕೆಂದರೆ ಆ ನಿಘಂಟಿಗೆ ಎಲ್ಲ ಬಗೆಯ ಜನರಿಂದ ಹೆಚ್ಚು ಉಪಯುಕ್ತವಾದ ಪ್ರತಿಕ್ರಿಯೆ ಬರುವುದು ಸಾಧ್ಯವಾಗಲೇ ಇಲ್ಲ. ೧೯೭೩ರಲ್ಲಿ ಈ ಪುಸ್ತಕದ ಅಂತಿಮ ಆವೃತ್ತಿಯು ಹೊರಬಂತು. ಆದರೆ ಅದರಿಂದ ವಾಗ್ವಾದವೇನೂ ಮುಕ್ತಾಯವಾಗಲಿಲ್ಲ. ಬದಲಾಗಿ ಆಡಳಿತ ಭಾಷೆಯನ್ನು ಕುರಿತಾದ ಈ ವಿವಾದವು ಶಿಕ್ಷಣ ಮಾಧ್ಯಮಕ್ಕೆ ಸಂಬಂಧಿಸಿದ

ಇನ್ನೊಂದು ಸಮಸ್ಯೆಯೊಡನೆ ಬೆರೆತು ಹೋಯಿತು. ಮರಾಠಿಯನ್ನು ಶಿಕ್ಷಣ ಮಾಧ್ಯಮವಾಗಿ ಒಪ್ಪಿಕೊಂಡರೆ, ವಿಜ್ಞಾನಗಳು, ಮಾನವಿಕಗಳು ಮತ್ತು ಗಣಿತಕ್ಕೆ ಸಂಬಂಧಿಸಿದ ಪಾರಿಭಾಷಿಕ ಪದಗಳು ಯಾವ ರೀತಿ ಇರಬೇಕೆಂಬುದೇ ಆ ವಾಗ್ವಾದ. ಈ ವಿವಾದದಲ್ಲಿಯೂ ಹಿಂದಿನಂತೆಯೇ ಮೂರು ವಾದಸರಣಿಗಳು ಮೂಡಿ ಬಂದವು. ಭಾರತ ಸರಕಾರದ ಅಧಿಸೂಚನೆಯೊಂದು ೧೯೬೪ ಅನ್ನು ರಾಜ್ಯ ಭಾಷಾವರ್ಷವಾಗಿ ಘೋಷಿಸಿತು. ಮಹಾರಾಷ್ಟ್ರದಲ್ಲಿ ಅನೇಕ ಉಪನ್ಯಾಸಗಳು, ಲೇಖನಗಳು ರಚಿತವಾದವು ಹಾಗೂ 'ವಿಚಾರ ಸಂಕಿರಣ'ಗಳು ನಡೆದವು. ಇವುಗಳನ್ನು ಸರ್ಕಾರಿ ಹಾಗೂ ಖಾಸಗಿ ಸಂಸ್ಥೆಗಳು ರೂಪಿಸಿದವು. ಆಡಳಿತಾತ್ಮಕ ಶಬ್ದಕೋಶ ಮತ್ತು ಮರಾಠಿ ಬಳಕೆಯನ್ನು ಕುರಿತಂತೆ ಈ ವೇದಿಕೆಗಳಲ್ಲಿ ನಡೆದ ಚರ್ಚೆಗಳು ಅನೇಕ ಕುತೂಹಲಕಾರಿಯಾದ ಸಂಗತಿಗಳನ್ನು ಬಯಲಿಗೆ ತಂದವು.

೫

ಈ ಮೂರು ಚಿಂತನ ವಲಯಗಳು ಮುಂದೆಮಾಡಿರುವ ಅಭಿಪ್ರಾಯಗಳನ್ನು ನಿರೂಪಿಸುವುದಕ್ಕಿಂತ ಮೊದಲು ಕೆಲವು ವಿಷಯಗಳ ಬಗ್ಗೆ ಸ್ಪಷ್ಟೀಕರಣ ನೀಡುವುದು ಒಳ್ಳೆಯದು. ಮೊದಲನೆಯದಾಗಿ ಈ ಮೂರು ಮುಖದ ವಿಂಗಡಣೆಯು ಕೇವಲ ಆಲೋಚನೆಯ ಅನುಕೂಲಕ್ಕಾಗಿ ಮಾಡಿರುವಂಥದು. ಇದಕ್ಕೆ ಅತಿಯಾದ ಮಹತ್ವವನ್ನು ಕೊಡಬಾರದು. ಎರಡನೆಯದಾಗಿ ಸಂಸ್ಕೃತಪರ, ಮರಾಠಿಪರ ಮತ್ತು ಇಂಗ್ಲಿಷ್‌ಪರ ಎನ್ನುವ ಹಣೆಪಟ್ಟಿಗಳು ಅಷ್ಟೊಂದು ಉಚಿತವಾದುವಲ್ಲ. ಈ ವಿಷಯ ಮುಂದಿನ ವಾದದಲ್ಲಿ ಸ್ಪಷ್ಟವಾಗುತ್ತದೆ. ವಾಗ್ವಾದದ ಬಿಸಿ ತಲೆಗೇರಿದಾಗ ಈ ಸನ್ನಿವೇಶದ ಮೂರು ನೆಲೆಗಳನ್ನು ಹೆಸರಿಸಲಾಗುವದಿಲ್ಲ. ಇದಕ್ಕಿಂತ ತಪ್ಪಾದ ಮಾತುಗಳನ್ನು ಬಳಸಲಾಗುತ್ತದೆ. ಬ್ರಾಹ್ಮಣರು ಸಂಸ್ಕೃತದ ಪರವಾಗಿದ್ದಾರೆ, ಮರಾಠರು ಮರಾಠಿಯ ಪರವಾಗಿದ್ದಾರೆ ಮತ್ತು ಅಧಿಕಾರಿಗಳು ಇಂಗ್ಲೀಷಿನ ಪರವಾಗಿದ್ದಾರೆ ಎನ್ನುವುದೇ ಆ ವಾದ, (ಮರಾಠರು ಮಹಾರಾಷ್ಟ್ರದಲ್ಲಿ ಪ್ರಬಲವಾದ ಕೃಷಿಕ ಜಾತಿಯವರು) ಇಷ್ಟರಲ್ಲಿಯೇ ನಾವು ಇದಕ್ಕಿಂತ ಹೆಚ್ಚು ಸೂಕ್ತವಾದ ಪಾರಿಭಾಷಿಕ ಪದಗಳನ್ನು ಕೊಡುತ್ತೇವೆ.

ಸಂಸ್ಕೃತಪರ ವಾದಿಗಳು ಮತ್ತು ಮರಾಠಿ ಪರ ವಾದಿಗಳು ಇವರಿಬ್ಬರಿಗೂ ಒಂದು ವಿಷಯದಲ್ಲಿ ಒಮ್ಮತವಿದೆ. ಅದು, ಆದಷ್ಟು ಬೇಗ ಮರಾಠಿಯನ್ನು ರಾಜ್ಯಭಾಷೆಯಾಗಿ ಒಪ್ಪಿಕೊಳ್ಳಬೇಕು ಎನ್ನುವ ವಿಷಯ. ಈ ಅಂಗೀಕಾರವು ಕೇವಲ ಔಪಚಾರಿಕವಾಗಿ ಕಾಗದದ ಮೇಲೆ ಉಳಿಯದೆ ಆದಷ್ಟು ಬೇಗ ಜಾರಿಗೆ ಬರಬೇಕೆಂದು ಅವರು ಬಯಸುತ್ತಾರೆ. ಈ ಪ್ರಕ್ರಿಯೆಯನ್ನು ಪ್ರಯತ್ನಪೂರ್ವಕವಾಗಿ ತ್ವರಿತಗೊಳಿಸಬೇಕೆನ್ನುವುದು ಅವರ ಅಭಿಪ್ರಾಯ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಅವರಿಬ್ಬರೂ ಭಾಷಾ ನೀತಿಯನ್ನು ಅನುಷ್ಠಾನಕ್ಕೆ ತರಬೇಕೆಂದು ಬಯಸುತ್ತಾರೆ. ಆದರೆ ಭಾಷಾ ಯೋಜನೆಯ ಸ್ವರೂಪವನ್ನು ಕುರಿತು ಅವರಿಬ್ಬರ ನಡುವೆ ಭಿನ್ನಾಭಿಪ್ರಾಯವಿದೆ. ಮೊದಲ ಗುಂಪಿನ

ಪ್ರಕಾರ ಭಾಷೆಯನ್ನು ಅಗತ್ಯ ಕಂಡುಬಂದರೆ ಮಾತ್ರ ಕಡ್ಡಾಯ ನಿಯಂತ್ರಣಕ್ಕೆ ಒಳಪಡಿಸಬೇಕು. ಏಕೆಂದರೆ ಜನರು ಇಂದಲ್ಲ ನಾಳೆ ಸರಿಯಾದ ದಾರಿಗೆ ಬಂದೇ ಬರುತ್ತಾರೆ. ಇಷ್ಟೆಲ್ಲ ಮಾಡುತ್ತಿರುವುದು ಅವರ ಒಳ್ಳೆಯದಕ್ಕಾಗಿಯೇ ಅಲ್ಲವೆ? ಈ ಗುಂಪಿನವರ ಪ್ರಕಾರ ಸಂಸ್ಕೃತದ ಮೇಲಿನ ಅವಲಂಬನೆ ಮತ್ತು ಹಿಂದಿಯ ಅನುಕರಣೆಗಳು ಕೇವಲ ವಿವರಗಳಿಗೆ ಸಂಬಂಧಿಸಿದ ಮಾತು. ಇವರದು ಮೂಲಭೂತವಾಗಿ ಭಾಷಾ ನಿಯಂತ್ರಣದ ಪಕ್ಷ. ಎರಡನೆಯ ಗುಂಪಿಗೆ ಸೇರಿದವರು ಒಂದು ಭಾಷೆ ತನ್ನಷ್ಟಕ್ಕೆ ತಾನು ಸಹಜವಾಗಿಯೇ ಹೊಸ ಸನ್ನಿವೇಶಗಳಿಗೆ ಹೊಂದಿಕೊಂಡು ಹೋಗುವುದರ ಪರವಾಗಿ ಮಾತನಾಡುತ್ತಾರೆ. ಅವರ ಪ್ರಕಾರ ಇದು ಹೆಚ್ಚು ಒಳ್ಳೆಯದು. ಏನೇ ಆಗಲಿ, ಪ್ರಜಾಸತ್ತಾತ್ಮಕವಾದುದು. ಹಾಗೆಂದು ಅವರು ಯೋಚಿಸುತ್ತಾರೆ. ಅವರು ಸೀಮಿತ ಪ್ರಮಾಣದ ಭಾಷಾಯೋಜನೆಯ ಪರವಾದವರು. ಅವರ ಪ್ರಕಾರ ತದ್ಭವಗಳ ಹಾಗೂ ದೇಶೀ ಪದಗಳ ಬಳಕೆಯು ಈ ಗುರಿಯನ್ನು ತಲುಪಲು ಸರಿಯಾದ ದಾರಿ. ಮೊದಲ ಎರಡು ಗುಂಪುಗಳಿಗೆ ಹೋಲಿಸಿದರೆ, ಮೂರನೆಯದು ಯಥಾಸ್ಥಿತಿಯ ಪರವಾದುದು. ಇವರಿಗೆ ಭಾಷಾಯೋಜನೆಯಲ್ಲಾಗಲಿ, ಅದರ ವೇಗವನ್ನು ಕೃತಕವಾಗಿ ಹೆಚ್ಚಿಸುವುದರಲ್ಲಾಗಲಿ ನಂಬಿಕೆಯಿಲ್ಲ. ಈಗ ಇರುವ ಸನ್ನಿವೇಶದಲ್ಲಿ ತಪ್ಪೇನಿದೆ ಎಂದು ಅವರು ಕೇಳುತ್ತಾರೆ. ಜಿಲ್ಲಾಮಟ್ಟದಲ್ಲಿ ಮರಾಠಿ, ರಾಜ್ಯಮಟ್ಟದಲ್ಲಿ ಇಂಗ್ಲಿಷ್ ಇದು ಸರ್ವಸಮ್ಮತವಾಗಬೇಕಾದ ವ್ಯವಸ್ಥೆಯಲ್ಲವೆ!

ಈ ಹಿನ್ನೆಲೆಯಲ್ಲಿ ನಾವು ಈಗಾಗಲೇ ಪ್ರಸ್ತಾಪಿತವಾಗಿರುವ ಮೂರು ಗುಂಪುಗಳಿಗೆ ಹೊಸ ಹೆಸರುಗಳನ್ನು ಕೊಡಬಹುದು:

೧. ಸಂಪೂರ್ಣ ನಿಯಂತ್ರಿತ ಯೋಜನೆ.

೨. ಸೀಮಿತ ನಿಯಂತ್ರಿತ ಯೋಜನೆ ಮತ್ತು

೩. ಸಂಪ್ರದಾಯಪರ ಚಿಂತಕರು (ಈ ಹೆಸರುಗಳನ್ನು ನೋಡಿದ ತಕ್ಷಣ ಅರ್ಥಶಾಸ್ತ್ರದ ವಿದ್ಯಾರ್ಥಿಗಳಿಗೆ ಕೇಂದ್ರ ನಿಯಂತ್ರಿತ ಯೋಜನೆ, ಮಿಶ್ರ ಅರ್ಥ ವ್ಯವಸ್ಥೆ ಮತ್ತು ಸರ್ವತಂತ್ರ ಸ್ವತಂತ್ರ ಆರ್ಥಿಕತೆ ಎಂಬ ಪರಿಕಲ್ಪನೆಗಳು ಸಹಜವಾಗಿಯೇ ನೆನಪಾಗುತ್ತವೆ.) ಈ ಮೂರು ಗುಂಪುಗಳಲ್ಲಿ ಒಂದರ ಪರವಾಗಿ ಇರುವಂತಹ ಆಯ್ಕೆ ಅವರ ಸ್ವಂತ, ವೈಯಕ್ತಿಕ ಮತ್ತು ವರ್ಗಕ್ಕೆ ಸಂಬಂಧಿಸಿದ ತಕ್ಷಣದ ಲಾಭದ ನೆಲೆಯಿಂದ ರೂಪಿತವಾಗಿರುವುದೇ ವಿನಾ ವಾದದ ಸರಿ ತಪ್ಪುಗಳಿಂದ ಅಲ್ಲ. ಆದರೆ ನಮಗೆ, ಕ್ರಿಯೆಯಲ್ಲಿ ತೊಡಗಬೇಕಾದ ಸರಿಯಾದ ದಿಕ್ಕಿನ ಬಗ್ಗೆ ಮಾತ್ರ ಆಸಕ್ತಿಯಿರುವುದರಿಂದ, ಒಳ ಉದ್ದೇಶಗಳನ್ನು ಹುಡುಕುವುದು ಬೇಡ.

ಭಾಷಾ ಯೋಜನೆಯನ್ನು ಸಂಪೂರ್ಣ ನಿಯಂತ್ರಿತ ಸಂಗತಿಯಾಗಿ ನೋಡಬೇಕೆನ್ನುವ ಪಂಗಡವು ತನ್ನ ಪರವಾಗಿ ಕೆಳಗೆ ಸೂಚಿಸುವ ಅಂಶಗಳನ್ನು ಮಂಡಿಸುತ್ತದೆ.

೧. ಈಗ, ಸನ್ನಿವೇಶವು ತನ್ನಷ್ಟಕ್ಕೆ ತಾನೇ ಸರಿಹೋಗುತ್ತವೆ ಎಂದು ಕಾಯುತ್ತ ಕುಳಿತಿರಲು ಸಮಯ ಉಳಿದಿಲ್ಲ. ಯುರೋಪ ಖಂಡದ ರಾಷ್ಟ್ರಭಾಷೆಗಳಿಗೆ ತಮ್ಮನ್ನು ಸರ್ಕಾರದ ಹಾಗೂ ಆಡಳಿತದ ಭಾಷೆಯಾಗಿ ಅಳವಡಿಸಿಕೊಳ್ಳಲು ನಾಲ್ಕೈದು ಶತಮಾನಗಳ ಕಾಲಾವಧಿಯಿತ್ತು. ನಮಗಾದರೋ ನಾಲ್ಕೈದು ದಶಕಗಳೂ ಇಲ್ಲ. ಇಂಗ್ಲಿಷ್ ಭಾಷೆಯ ಪರಿಚಯ ಏನೇನೂ ಇಲ್ಲದವನಿಗೆ ಹೊಸ ಪದವೊಂದರ ಆಯ್ಕೆ ಯಾವ ಸಮಸ್ಯೆಯನ್ನೂ ತಂದೊಡ್ಡುವುದಿಲ್ಲ. ಯಾವ ಪದವನ್ನು ಕೊಟ್ಟರೂ ಅವನು ಅದನ್ನು ತನ್ನದಾಗಿ ಮಾಡಿ ಕೊಳ್ಳುತ್ತಾನೆ.

(ಕೆಲವು ಬಾರಿ ಈ ಕೊನೆಯ ಮಾತು ಮರಾಠಿ ಮಾತನಾಡುವ ಜನರಿಗೆ ನೀಡುವ ಉಪದೇಶವಾಗಿ ಬೆಳೆದು ಬಿಡುತ್ತದೆ. ನೀವು ಹಿಂದಿಯವರ ಮಾದರಿಯನ್ನು ಏಕೆ ಒಪ್ಪಿಕೊಳ್ಳ ಬಾರದು? ಸರ್ಕಾರವು ಸಿದ್ಧಪಡಿಸಿಕೊಡುವ ಪಾರಿಭಾಷಿಕ ಪದಗಳನ್ನು ಸದ್ದುಗದ್ದಲವಿಲ್ಲದೆ ಸ್ವೀಕರಿಸಬಾರದು! ಹೀಗೆ ಕೇಳುವವರಿಗೆ ನಾನು ಉತ್ತರ ಕೊಡಬಯಸುತ್ತೇನೆ. ಮರಾಠಿಯ ಜನ ತಮ್ಮ ಭಾಷೆಯ ಸ್ವರೂಪದ ಬಗ್ಗೆ ಇಷ್ಟೊಂದು ಎಚ್ಚರಿಕೆವಹಿಸುತ್ತಾರೆ ಎನ್ನುವುದು ಸಂತೋಷದ ಸಂಗತಿ. ಹಿಂದಿಯವರು ಸರ್ಕಾರದ ಆದೇಶಗಳನ್ನು ಅತಿಯಾದ ಸೌಜನ್ಯದಿಂದ ಕಮಕ್ ಕಿಮಕ್ ಎನ್ನದೆ ಒಪ್ಪಿಕೊಳ್ಳುತ್ತಿರುವುದು ವಿಷಾದಕರ.)

೨. ಭಾಷೆಯು ಅತ್ಯಂತ ಸರಳವಾಗಿರಬೇಕೆನ್ನುವುದನ್ನು ಸಾವು-ಬದುಕಿನ ಪ್ರಶ್ನೆಯಾಗಿ ಮಾಡಿಕೊಳ್ಳಬಾರದು. ಸಾಮಾನ್ಯ ಮನುಷ್ಯನು ಅಷ್ಟೊಂದು ದಡ್ಡನೇನು? ಕೆಲವು ಅಪರಿಚಿತ ಶಬ್ದಗಳು ಕಾಣಿಸಿಕೊಂಡರೆ ಹೆದರಿ ನಡುಗುವನೇನು? ಅವನು ಸ್ವಲ್ಪ ವಾದರೂ ಹೊಂದಾಣಿಕೆಯ ಶಕ್ತಿಯನ್ನು ತೋರಿಸುವನೆಂದು ನಾವು ನಂಬಬಹುದಲ್ಲವೆ?

೩. ಇಷ್ಟಕ್ಕೂ ಸರಳತೆಯೆನ್ನುವುದು ಕೇವಲ ವ್ಯಂಜನ ಸಂಯುಕ್ತ ಅಕ್ಷರಗಳನ್ನು ಕೈ ಬಿಡುವುದರಿಂದ ಬರುತ್ತದೆಯೇ? ಬೇರ ಬೇರೆ ಅರ್ಥಛಾಯೆಗಳಿಗೆ ಅನುಗುಣವಾದ, ಬೇರೆ ಬೇರೆ ಹೊಸ ಪದಗಳನ್ನು ಟಂಕಿಸುವ ಜವಾಬ್ದಾರಿ ನಮಗಿದೆಯಲ್ಲವೆ? ಪರಸ್ಪರ ಸಂಬಂಧಿತ ಅರ್ಥಗಳಿರುವ ಸನ್ನಿವೇಶಗಳಲ್ಲಿ, ಅದೇ ರೀತಿಯ ಹೋಲಿಕೆಯಿರುವ ಪದಗಳನ್ನು ರೂಪಿಸಬೇಕಲ್ಲವೆ? ಉದಾಹರಣೆಗೆ ಇಂಗ್ಲಿಷಿನ ಲಾ, ಬೈಲಾ, ರೂಲ್, ಆರ್ಡಿನನ್ಸ್ ಮುಂತಾದ ಪದಗಳ ನಡುವಿನ ಅರ್ಥವ್ಯತ್ಯಾಸವನ್ನು ನಾವು ಭಾಷೆಯಲ್ಲಿ ತೋರಿಸ ಬೇಕಲ್ಲವೆ? ಕೆಲವು ಬಾರಿಯಂತೂ ಹೊಸ ಪದಗಳ ಕುಟುಂಬವನ್ನೇ ನಿರ್ಮಿಸಬೇಕಾಗಿ ಬರಬಹುದು. ಲಾ, ಲಾಫುಲ್, ಅನ್‌ಲಾಫುಲ್ ಮುಂತಾದ ಪದಗಳ ಗುಂಪುಗಳು. ಹೊಸ ಪದವೊಂದನ್ನು ತಮಾಷೆಮಾಡುವುದು ಸುಲಭ. ಅದರೆ ಹೊಸದಾಗಿದೆ ಎಂಬ ಕಾರಣದಿಂದಲೋ ಅಥವಾ ಹೊಸ ಅರ್ಥದಲ್ಲಿ ಬಳಸುತ್ತಿರುವುದರಿಂದಲೋ ಪದಗಳನ್ನು ಗೇಲಿ ಮಾಡುವುದು ನ್ಯಾಯವೇ?

೪. ಭಾರತದ ಭಾಷೆಗಳ ನಡುವೆ ಒಂದು ಬಗೆಯ ಒಗ್ಗಟ್ಟನ್ನು ತರುವುದು ಅಪೇಕ್ಷಣೀಯ. ಈ ಕೆಲಸವನ್ನು ಸಾಧಿಸಲು ಹೊರಗಿನಿಂದ ಆಮದಾದ ಇಂಗ್ಲಿಷ್

ಅಥವಾ ಪರ್ಷಿಯನ್ ಭಾಷೆಗಳ ಮೇಲೆ ಅವಲಂಬಿಸುವುದರ ಬದಲು ನಮ್ಮದೇ ಭಾಷೆಯಾದ ಸಂಸ್ಕೃತವನ್ನು ಬಳಸಬಹುದಲ್ಲವೇ?

೫. ಒಂದು ರಾಜ್ಯದ ಭಾಷೆಗೆ ತನ್ನದೇ ಆದ ಘನತೆ ಗಾಂಭೀರ್ಯಗಳಿರಬೇಕು. ಒಬ್ಬ ಗುಮಾಸ್ತ, ಕಸ ಗುಡಿಸುವವನು ಅಥವಾ ಹಂದಿ ಸಾಕಾಣಿಕೆ ಕೇಂದ್ರದ ಅಧಿಕಾರಿಯನ್ನು ಸಂಸ್ಕೃತದ ಛಾಯೆಯುಳ್ಳ ಲಿಪಿಕ, ನಷ್ಟಕಾ ಮತ್ತು ಸೂಕರಾಲಯ ಅಧಿಕಾರಿ ಎಂಬ ಹೆಸರುಗಳಿಂದ ಕರೆದರೆ ಆ ಮಹನೀಯರಿಗೆ ಹೆಚ್ಚು ಮನ್ನಣೆ ಗೌರವಗಳನ್ನು ಕೊಟ್ಟಂತಾಗುವುದಿಲ್ಲವೆ? ಬದಲಾಗಿ ದಿನ ಬಳಕೆಯ ಮಾತುಗಳಾದ ಕಾರ್ಕೂನ, ಝಾಡುವಾಲಾ ಮತ್ತು ಡುಕ್ಕರ್‌ವಾಡ ಅಧಿಕಾರಿ ಎಂಬ ಹೆಸರುಗಳಿಂದ ಸಂಬೋಧಿಸಿದರೆ ಅವಮಾನ ಮಾಡಿದಂತಾಗುವುದಿಲ್ಲವೆ?

ಸ್ವಲ್ಪ ಯೋಚನೆ ಮಾಡಿದರೆ ಮೇಲಿನ ಅಂಶಗಳಲ್ಲಿ ಮೊದಲ ಮೂರು ಪರಿಶೀಲನೆಗೆ ಅರ್ಹ ಮತ್ತು ಕೊನೆಯ ಎರಡರ ಬಗ್ಗೆ ತಲೆಕೆಡಿಸಿಕೊಳ್ಳಬೇಕಾಗಿಲ್ಲ ಎಂದು ಗೊತ್ತಾಗುತ್ತದೆ.

ಭಾಷೆಯ ಬಗ್ಗೆ ಸೀಮಿತ ನಿಯಂತ್ರಣ ಇರಬೇಕೆನ್ನುವವರು ಕೆಳಕಾಣಿಸಿರುವ ಅಂಶಗಳನ್ನು ಮಂಡಿಸುತ್ತಾರೆ.

೧. ಭಾಷಾಯೋಜನೆಯನ್ನು ಜಾರಿಗೆ ತರುವುದು ಮತ್ತು ಆ ಮೂಲಕ ರಾಜ್ಯ ಭಾಷೆಯಾಗಿ ಮರಾಠಿಯ ಸಾಮರ್ಥ್ಯವನ್ನು ಹೆಚ್ಚಿಸುವುದು ಖಂಡಿತವಾಗಿಯೂ ಅಪೇಕ್ಷಣೀಯ. ಆದರೆ ಹೀಗೆ ಕಷ್ಟಪಟ್ಟು ತಯಾರಿಸಲಾದ ಆಡಳಿತಾತ್ಮಕ ಪರಿಭಾಷೆಯನ್ನು ಅರ್ಥಮಾಡಿಕೊಳ್ಳಲು ಹಾಗೂ ಉಪಯೋಗಿಸಲು ಸಾಮಾನ್ಯ ನಾಗರಿಕನಿಗೆ ಸಾಧ್ಯವಾಗದಂತಿದ್ದರೆ ಏನು ಪ್ರಯೋಜನ? ಇಷ್ಟೆಲ್ಲ ಮಾಡುತ್ತಿರುವುದು ಅವನಿಗಾಗಿ ಅಲ್ಲವೆ?

೨. ಭಾಷೆಯು ಬರದೆ ಇರುವುದರಿಂದ ಉಂಟಾಗುವ ತೊಂದರೆಯನ್ನು ಸಾಮಾನ್ಯ ಮನುಷ್ಯನ ಸಮಸ್ಯೆಗಳ ಬಗ್ಗೆ ನಿಜವಾದ ಅನುಕಂಪ ಇರುವವರು ಮಾತ್ರ ಅರ್ಥಮಾಡಿಕೊಳ್ಳಬಲ್ಲರು. ಇಂದಲ್ಲ ನಾಳೆ ಜನರು ಎಲ್ಲ ಪದಗಳನ್ನು ಒಪ್ಪಿಕೊಳ್ಳುತ್ತಾರೆ ಎಂದು ಹೇಳಿದರೆ ಅವರ ಮೇಲೆ ಒತ್ತಡ ಹೇರಿದಂತೆ ಆಗುವುದಿಲ್ಲವೆ?

೩. ನಾವು ಮರಾಠಿ ಭಾಷೆಯನ್ನು ಎಂದರೆ ಅದನ್ನು ಮಾತನಾಡುವ ಜನರ ಶಕ್ತಿಯನ್ನು ಏಕೆ ನಂಬಬಾರದು? ಅವರಲ್ಲಿ ಸೃಜನಶೀಲತೆ ಹಾಗೂ ಕೌಶಲ್ಯಗಳು ಇರುವುದಿಲ್ಲವೆ? ಎಷ್ಟು ದಿನಗಳ ಕಾಲ ಮರಾಠಿಯು ತನ್ನ ಪೋಷಣೆಗಾಗಿ ಭಾಷಾಂತರವನ್ನು ಅವಲಂಬಿಸಿರಬೇಕು? ಹತ್ತು ಮಿಲಿಯನ್ ಪದವನ್ನು ಕುರುಡು ಕುರುಡಾಗಿ 'ದಹ-ದಶಲಕ್ಷ' ಎಂದು ಏಕೆ ಕರೆಯಬೇಕು? ಸ್ವಲ್ಪ ಮರಾಠಿಯಲ್ಲಿ ಯೋಚಿಸಿದರೆ 'ಒಂದು ಕೋಟಿ' ಎಂಬ ಪದ ತಾನಾಗಿಯೇ ಹೊಳೆಯುವುದಿಲ್ಲವೆ?

೪. ಮರಾಠಿಯು ಇದುವರೆಗೆ ಒಂದೇ ಸಮನೆ ಸಂಸ್ಕೃತ, ಪರ್ಷಿಯನ್ ಮತ್ತು ಇಂಗ್ಲಿಷ್‌ಗಳ ದಬ್ಬಾಳಿಕೆಯನ್ನು ಅನುಕ್ರಮವಾಗಿ ಅನುಭವಿಸಿದೆ. ಇನ್ನು ಮುಂದೆ ಅದು

ಒಂದಿ ಸಾಮ್ರಾಜ್ಯಶಾಹಿಗೆ ತುತ್ತಾಗುವುದು ಬೇಡ. ಮರಾಠಿಯು ತನ್ನ ಸ್ವಂತಿಕೆಯನ್ನು ಉಳಿಸಿಕೊಳ್ಳಲಿ.

ಈ ಅಂಶಗಳಲ್ಲಿ ಮೊದಲ ಮೂರು ಗಂಭೀರವಾದ ಪರಿಶೀಲನೆಗೆ ಯೋಗ್ಯವಾಗಿವೆ. ನಾಲ್ಕನೆಯದು ಕೇವಲ ನಮ್ಮ ಭಾವನೆಗಳಿಗೆ ಇಷ್ಟವಾಗುತ್ತದೆ. ಆ ವಾದ ಎಷ್ಟೊಂದು ಟೊಳ್ಳು ಎಂದು ತೋರಿಸಲು ನಾವು ಪ್ರತಿ ವಿಚಾರವೊಂದನ್ನು ಹೇಳಬಹುದು: ಮರಾಠಿ ಭಾಷೆಯ ಮರಾಠಿತನವು ಅಷ್ಟೊಂದು ತೇಲುವಾದುದೇನು? ಬೇರೆ ಭಾಷೆಗಳಿಂದ ಕೆಲವು ಪದಗಳನ್ನು ಎರವಲು ತೆಗೆದುಕೊಂಡ ಮಾತ್ರಕ್ಕೆ ಅದು ನಾಶವಾಗಿ ಬಿಡುವುದೇನು?

ಯಥಾಸ್ಥಿತಿವಾದದ ಪರವಾದ ಸಂಪ್ರದಾಯಶೀಲ ಗುಂಪು ಕೆಳಗೆ ಹೇಳುವ ಅಂಶಗಳನ್ನು ಮಂಡಿಸುತ್ತದೆ.

೧. ನಾವು ಗಟ್ಟಿ ನೆಲದ ಮೇಲೆ ನಿಂತು ಮಾತನಾಡೋಣ. ಭಾಷೆಯೆನ್ನುವುದು ಕೊನೆಗೂ ಒಂದು ಗುರಿಯನ್ನು ತಲುಪಲೆಂದು ಇರುವ ದಾರಿ. ತಾಂತ್ರಿಕ ಭಾಷೆಯ ವಿಷಯದಲ್ಲಂತೂ ಈ ಮಾತು ಇನ್ನಷ್ಟು ನಿಜ. ಕೇಳಿಸಿಕೊಳ್ಳುತ್ತಿರುವ ಮನುಷ್ಯನಿಗೆ ಏನನ್ನು ತಿಳಿಸದ ತಾಂತ್ರಿಕ ಪರಿಭಾಷೆಯು ನಿಷ್ಪ್ರಯೋಜಕವಾದ ಅಲಂಕಾರ ವಸ್ತು. ಅದು ಕೇವಲ ದಡ್ಡರಿಗೆ ಮಾತ್ರ ಸಂತೋಷ ಕೊಡಬಲ್ಲುದು.

೨. ಮರಾಠಿಯು ಇತರ ಭಾಷೆಗಳನ್ನು ದ್ವೇಷಿಸುವುದರಿಂದ ಪುಷ್ಟವಾಗಿ ಬೆಳೆಯಲಾರದು. ಹಾಗೆ ನೋಡಿದರೆ ಇಂಗ್ಲಿಷಿಗೆ ಅದರ ಇಂದಿನ ಶ್ರೀಮಂತಿಕೆ ಬಂದಿರುವುದು ಯಾವ ನಾಚಿಕೆ ಸಂಕೋಚಗಳೂ ಇಲ್ಲದೆ ಇತರ ಭಾಷೆಗಳಿಂದ ಎರವಲು ತೆಗೆದುಕೊಂಡಿರುವುದರಿಂದಲೇ ಅಲ್ಲವೇ? ಇಂಗ್ಲಿಷ್ ಅಥವಾ ಪರ್ಷಿಯನ್ ಅನ್ನು ದ್ವೇಷಿಸುವುದರಿಂದ ಯಾವ ಲಾಭವೂ ಇಲ್ಲ.

೩. ನಮ್ಮ ದೇಶದ ಸಾಮಾನ್ಯ ಪ್ರಜೆಗೆ ಕಲಿಯಲು ಮತ್ತು ಅರಗಿಸಿಕೊಳ್ಳಲು ಅನೇಕ ಮುಖ್ಯವಾದ ಸಂಗತಿಗಳಿವೆ. ಅವುಗಳ ಜೊತೆಗೆ ಹೊಸದೊಂದು ಪರಿಭಾಷೆಯನ್ನು ಕಲಿಯುವುದು ಹೊರೆಯೇ ಹೊರತು ಲಾಭವಲ್ಲ. ಅದು ಸೊನ್ನೆಗಿಂತ ನಿರುಪಯುಕ್ತ.

೪. ಆಡಳಿತದಲ್ಲಿ ಖಚಿತತೆ ಮತ್ತು ನಿಖರತೆಗಳು ಅತ್ಯಂತ ಮುಖ್ಯವಾದವು. ಇಂಗ್ಲಿಷ್ ಹಲವು ವರ್ಷಗಳ ನಂತರ ಈ ಗುಣಗಳನ್ನು ಸಂಪಾದಿಸಿಕೊಂಡಿವೆ. ಅದರ ನೆರವಿಲ್ಲದೆ ನಾವು ವ್ಯವಹಾರ ನಡೆಸುವುದಾದರೂ ಹೇಗೆ ಸಾಧ್ಯ.

ಇವುಗಳಲ್ಲಿ ಮೊದಲ ಎರಡು ಗಮನೀಯವಾದವು, ಕೊನೆಯ ಎರಡು ಕೇವಲ ಅರ್ಧ ಸತ್ಯಗಳನ್ನು ಅವಲಂಬಿಸಿವೆ. ಈ ಮೂರು ಪಂಗಡಗಳಲ್ಲಿ ಪ್ರತಿಯೊಂದಕ್ಕೂ ತನ್ನದೇ ಆದ ಹುಚ್ಚುತನದ ಅಂಶಗಳಿವೆ. ಅವುಗಳನ್ನು ನಿರ್ಲಕ್ಷಿಸಿದರೆ ಒಳ್ಳೆಯದು. ಆದರೂ ಪ್ರತಿಯೊಂದು ಗುಂಪು ರಾಜ್ಯ ಭಾಷೆಯ ಸಮಸ್ಯೆಗೆ ಸಂಬಂಧಪಟ್ಟ ಹಲವು ಮುಖಗಳನ್ನು ತೋರಿಸುವ ಮಹತ್ವದ ಅಂಶಗಳನ್ನು ಮುಂದಿಟ್ಟಿವೆ. ಇಲ್ಲಿ ಒಂದು ಸಂಗತಿಯನ್ನು ಮರೆಯಬಾರದು. ಈ ವಾಗ್ವಾದದಲ್ಲಿ ಇದುವರೆಗೆ ಮಂಡಿಸಲಾಗಿರುವ ಅಂಶಗಳು ಸಮಸ್ಯೆಯ ಎಲ್ಲ ಮುಖ

ಗಳನ್ನು ಬೆಳಕಿಗೆ ತಂದಿಲ್ಲ. ಹೀಗೆ ಕತ್ತಲಿನಲ್ಲಿ ಉಳಿದಿರುವ ಕೆಲವು ಮುಖ್ಯ ಸಂಗತಿಗಳನ್ನು ಇನ್ನು ಮುಂದೆ ಪ್ರಸ್ತಾಪಿಸಲಾಗಿದೆ. ಅವುಗಳ ಕಡೆಗೆ ನಾವು ತುರ್ತು ಗಮನಹರಿಸಬೇಕಾಗಿದೆ.

೬

ನಮ್ಮ ಆಲೋಚನೆಯಲ್ಲಿಯ ಮೊದಲ ಕೊರತೆಯು ಈ ರೀತಿ ಇದೆ:

ನಾವು, ರಾಜ್ಯಭಾಷೆಯೆಂದರೆ ಆಡಳಿತಕ್ಕೆ ಸಂಬಂಧಪಟ್ಟ, ಪಾರಿಭಾಷಿಕ ಪದಗಳ ಕೋಶವೆಂದು ತಿಳಿಯುತ್ತೇವೆ. ರಾಜ್ಯ ಭಾಷೆಯೆಂದರೆ ಅಷ್ಟೇ ಅಲ್ಲ. ಅದು ಒಟ್ಟು ಸಮಸ್ಯೆಯ ಒಂದು ಭಾಗ ಮಾತ್ರ. ಪರಿಭಾಷೆಗೆ ಸಂಬಂಧಪಟ್ಟ ನಮ್ಮ ವಿಚಾರಗಳು ರಾಜ್ಯ ಭಾಷೆಯ ಇತರ ಆಯಾಮಗಳು ಮರೆತುಹೋಗುವಂತೆ ಮಾಡಬಾರದು.

ಮೊದಲನೆಯದಾಗಿ ಸರಕಾರಿ ವ್ಯವಹಾರಕ್ಕೆ ಸಂಬಂಧಪಟ್ಟ ಯಾವುದೇ ಬರವಣಿಗೆಯಲ್ಲೂ ತಾಂತ್ರಿಕವಲ್ಲದ, ದಿನಬಳಕೆಯ ಅನೇಕ ಪದಗಳನ್ನು ಉಪಯೋಗಿಸಲಾಗುತ್ತದೆ. ಇಂಥ ಬರವಣಿಗೆಯಲ್ಲಿ ತಾಂತ್ರಿಕ ಪದಗಳು ಇರುವುದರಿಂದ ಒಟ್ಟು ಶೈಲಿಯು ಸ್ವಲ್ಪ ಭಾರವಾಗುತ್ತವೆ. ಆದ್ದರಿಂದಲೇ ಈ ಭಾರಕ್ಕೆ ಔಷಧಿಯೋ ಎನ್ನುವಂತೆ ತಾಂತ್ರಿಕವಲ್ಲದ ಪದಗಳನ್ನು ಆದಷ್ಟು ನೇರವಾಗಿಯೂ ಸರಳವಾಗಿಯೂ ಇಟ್ಟುಕೊಳ್ಳಬೇಕು. ಉದಾಹರಣೆಗೆ ಪಾಂಡಿತ್ಯಪೂರ್ಣವಾದ 'ದೃಷ್ಟ್ಯೋತ್ಪತ್ತೀಸ್ ಎತಾತ್' (ನಮ್ಮ ಅವಗಾಹನೆಯ ವ್ಯಾಪ್ತಿಯೊಳಗೆ ಬಂದಿದೆ) ಎಂಬ ಪ್ರಯೋಗವ ಬದಲು ಸರಳವಾದ 'ದಿಸೂನ್ ಎತಾತ್' (ಕಂಡು ಬಂದಿದೆ) ಎನ್ನುವ ಮಾತನ್ನು ಬಳಸಬಹುದು. ಹಾಗೆಯೇ ಇಂಗ್ಲಿಷ್ ಪ್ರಭಾವದಿಂದ ಮೂಡಿಬಂದ 'ದುರ್ದೈವಿ ವಿಚಾರ್' (ದುರದೃಷ್ಟಕರವಾದ ಸಂಗತಿ) ಎನ್ನುವ ಬದಲು 'ಕರಂತಾ ವಿಚಾರ' ಅಥವಾ 'ವೇಡ್ಗಳ್ ವಿಚಾರ್' (ಅಪ್ರಯೋಜಕ ವಿಚಾರ ಅಥವಾ ಹುಚ್ಚು ವಿಚಾರ) ಎನ್ನುವ ಪ್ರಯೋಗಗಳನ್ನು ಸಂದರ್ಭಕ್ಕೆ ತಕ್ಕಂತೆ ಬಳಸಬಹುದು.

ನಾವು ಗಮನಿಸಬೇಕಾದ ಎರಡನೆಯ ಸಂಗತಿಯೆಂದರೆ ವಾಕ್ಯ ರಚನೆ. ಅದೇ ವಾಕ್ಯದ ಜೀವಧಾತು. ಹಾಗೆ ನೋಡಿದರೆ ಬಹಳ ಸರಳವಾದ ಪದಗಳನ್ನು ಬಳಸಿ ಯಾರಿಗೂ ಅರ್ಥವಾಗದ ವಾಕ್ಯಗಳನ್ನು ರಚಿಸಬಹುದು. ಕೆಲವು ಬಾರಿ ಇದು ಇಂಗ್ಲಿಷಿನ ಯಾಂತ್ರಿಕ ಅನುಕರಣೆಯ ಫಲಿತಾಂಶ. ಉದಾಹರಣೆಗೆ "Only such an officer can cancel an order that has originally issued it" ಎನ್ನುವುದು, ಮರಾಠಿಯಲ್ಲಿ ಅಪರೂಪವಾದ ಹಾಗೂ ಅಚ್ಚುಕಟ್ಟಾಗಿ ಕಾಣಿಸದಿರುವ ವಾಕ್ಯ. ಇದರ ಬದಲಾಗಿ "ಯಾವ ಅಧಿಕಾರಿಯು ಮೊದಲು ಒಂದು ಆದೇಶವನ್ನು ಹೊರಡಿಸಿರುವನೋ ಅವನು ಮಾತ್ರ ಅದನ್ನು ರದ್ದು ಮಾಡಬಲ್ಲ" ಎಂಬ ವಾಕ್ಯವು ಮರಾಠಿಯಲ್ಲಿ ಬಹಳ ಸಹಜವಾಗಿ ಇರುತ್ತದೆ. ಹಾಗೆ ಬರೆಯುವುದರಿಂದ ಯಾವ ಅರ್ಥ ನಷ್ಟವೂ ಆಗುವುದಿಲ್ಲ.

ಮೂರನೆಯ ಅಂಶ ಕೂಡ ಬಹಳ ಮುಖ್ಯ. ಆಡಳಿತಾತ್ಮಕ ಬರವಣಿಗೆಯ ಶೈಲಿ ಖಚಿತವಾಗಿ ಸಂಕ್ಷಿಪ್ತವಾಗಿ ಇರಬೇಕು. ದುರದೃಷ್ಟವಶಾತ್ ಅದು ಹಾಗೆ ಇರುವುದಿಲ್ಲ. ಅಂಥ ಭಾಷೆಯಲ್ಲಿ ಅನಗತ್ಯವಾದ ಪದಗಳು ತುಂಬಿರುತ್ತವೆ. ಹೇಳಬೇಕಾದುದನ್ನು

ಹೇಳಲು ಬಹಳ ಸುತ್ತಿಬಳಸಿ ಮಾಡಲಾಗುತ್ತದೆ. ಸರ್ ಅರ್ನೆಸ್ಟ್ ಗೋವರ್ಸ್ ಅವರು ಇಂಥ ಪ್ರವೃತ್ತಿಯ ವಿರುದ್ಧ ಹೋರಾಟವನ್ನೇ ನಡೆಸಿದರು. ಅವರು ಈ ಹೋರಾಟದ ವಿವರಗಳನ್ನು ತಮ್ಮ The Complete Plain Words ಎಂಬ ಹೊಸ ಪುಸ್ತಕದಲ್ಲಿ ದಾಖಲೆ ಮಾಡಿದ್ದಾರೆ. ಈ ಪುಸ್ತಕವನ್ನು ಭಾರತೀಯರು ಓದಬೇಕು. ಇಂಗ್ಲಿಷಿನಲ್ಲಿರಲಿ ಅಥವಾ ಭಾರತೀಯ ಭಾಷೆಗಳಲ್ಲಿರಲಿ ನಮ್ಮ ಸರಕಾರಿ ಆದೇಶಗಳು ಒಂದೇ ಮಾದರಿಯನ್ನು ಅನುಕರಿಸುತ್ತವೆ. ಅಷ್ಟೇ ಅಲ್ಲ, ಅವು ಅನಗತ್ಯವಾದ ಅಹಂಕಾರವನ್ನು ತೋರಿಸುತ್ತವೆ. ಓದುವವರ ಬಗ್ಗೆ ಯಾವುದೇ ಸೌಜನ್ಯವನ್ನು ತೋರಿಸುವುದಿಲ್ಲ. "ಇದು ಕೊಳೆಗೇರಿಗಳ ನಿರ್ಮೂಲನ ಯೋಜನೆಯ ಅಡಿಯಲ್ಲಿ ಸುಧಾರಿಸಲಾದ ಝೋಪಡಾಪಟ್ಟಿ" ಎಂಬ ಫಲಕವನ್ನು ಹಾಕಿಸಿದ ಅಧಿಕಾರಿಯು ಅಪರೂಪದ ಕಲ್ಪನಾಶಕ್ತಿಯುಳ್ಳವನೇ ಸರಿ. [ಮರಾಠಿಯಲ್ಲಿ ಕೊಳೆಗೇರಿ (Slum) ಎಂಬ ಪದಕ್ಕೆ ಗೊಳಚೆ ತುಂಬಿದ ಪ್ರದೇಶ ಎಂದೇ ಅರ್ಥ] ಲೇಖಕರಿಗೆ ಪ್ರೋತ್ಸಾಹ ನೀಡಲೆಂದು ರಚಿತವಾದ ಅರೆಸರಕಾರೀ ಯೋಜನೆಯೊಂದರ ಕರಾರು ಪತ್ರವು ತನಗೇ ತಿಳಿಯದಂತೆ ಧಿಮಾಕಿನದೂ ಅನುಗ್ರಹ ಪ್ರವೃತ್ತಿಯದೂ ಆಗಿತ್ತು. ಅದನ್ನು ಲೇಖಕರಿಗೆ ನೋವನ್ನು ಉಂಟುಮಾಡಲೆಂದೇ ರಚಿಸಿದಂತಿತ್ತು. ಆ ಕರಾರು ಪತ್ರದ ಒಕ್ಕಣೆಯಿಂದಲೇ ನೋವನ್ನು ಅನುಭವಿಸಿ, ಸಹಾಯವನ್ನು ನಿರಾಕರಿಸಿದ ಲೇಖಕರನ್ನು ನಾನು ಭೇಟಿಯಾಗಿದ್ದೇನೆ. ನಿಜವಾಗಿ ಹೇಳುವುದಾದರೆ ಒಬ್ಬ ಆಡಳಿತಗಾರನ ಶೈಲಿಯು ಅವನ ವ್ಯಕ್ತಿತ್ವದ ಪ್ರತಿರೂಪವೇ ಆಗಿರುತ್ತದೆ. ಇನ್ನೆಷ್ಟೋ ಸಲ ಭಾಷೆಯ ಒಳ್ಳೆಯ ಮತ್ತು ಕೆಟ್ಟ ಪರಿಣಾಮಗಳ ಬಗೆಗಿನ ಅಜ್ಞಾನದಿಂದಲೋ, ನಿರ್ಲಕ್ಷ್ಯದಿಂದಲೋ ಅಂತಹ ಶೈಲಿ ಹುಟ್ಟಿಕೊಳ್ಳುತ್ತದೆ. ಮರಾಠಿಯನ್ನು ರಾಜ್ಯ ಭಾಷೆಯಾಗಿ ಮಾಡುವುದಕ್ಕೆ ಸಂಬಂಧಪಟ್ಟಂತೆ ನಡೆದ ವಾಗ್ವಾದದಲ್ಲಿ ಭಾಷಾ ನಿರ್ದೇಶಕರಾದ ವೈ. ಎಸ್. ಕಾಸಿಟ್ಕರ್ ಅವರನ್ನು ಅವರ ಮರಾಠಿಯ ಸೊಗಸಿಗಾಗಿ ಪ್ರಶಂಸಿಸಲಾಗುತ್ತಿತ್ತು. ಅವರನ್ನು ಮೆಚ್ಚಿಕೊಂಡಿದ್ದು ಸರಿ. ಆದರೆ ಮರಾಠಿಯನ್ನು ಬಲ್ಲ, ಅವರ ಜೊತೆ ಅಧಿಕಾರಿಗಳ ಗದ್ಯ ಶೈಲಿಯ ಬಗ್ಗೆ ಇದು ಒಳ್ಳೆಯ ಅಭಿಪ್ರಾಯವನ್ನು ಉಂಟುಮಾಡುವುದಿಲ್ಲ. ಮರಾಠಿಯಲ್ಲಿ ಬರೆಯುವುದರ ಬಗ್ಗೆ ಅವರು ತೋರಿಸುವ ಅನಭಿರುಚಿಗೆ ಮುಖ್ಯ ಕಾರಣ ಅವರ ಅಸಾಮರ್ಥ್ಯವೇ. ಅವರಿಗೆ ಮರಾಠಿ ಬರುವುದಿಲ್ಲ, ಎಷ್ಟೋ ಸಲ ಇಂಗ್ಲೀಷೂ ಬರುವುದಿಲ್ಲ. ನಾವು ಗಮನಿಸದೆ ಉಳಿಯುವ, ಮತ್ತೊಂದು ಸಂಗತಿಯೆಂದರೆ, ಒಳ್ಳೆಯ ಆಡಳಿತ ಮರಾಠಿಯಲ್ಲಿ ಸಮರೂಪತೆ ಏಕೆ ಮತ್ತು ಎಷ್ಟರಮಟ್ಟಿಗೆ ಇರಬೇಕು ಎನ್ನುವುದು. ಏಕೆಂದರೆ ಅದು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಕೆಲಸಗಳನ್ನು ನಿರ್ವಹಿಸಬೇಕಾಗುತ್ತದೆ. ಈ ಎಲ್ಲ ನೆಲೆಗಳಲ್ಲಿಯೂ ಇಸ್ತ್ರಿ ಮಾಡಿದಂತಹ ಭಾಷೆಯನ್ನು ಬಳಸಿದರೆ ಅದು ಆಭಾಸಕ್ಕೆ ಕಾರಣವಾಗುತ್ತದೆ. ಆದ್ದರಿಂದಲೇ ಸಾಂದರ್ಭಿಕ ಅಗತ್ಯಗಳು ಭಾಷೆಯ ಸ್ವರೂಪವನ್ನು ನಿಯಂತ್ರಿಸಬೇಕು. ಸಮರೂಪತೆಯು ಇರಲೇಬೇಕೆಂಬ ಒತ್ತಾಯವನ್ನು ಅತಿ ಮಾಡಲಾಗುವುದಿಲ್ಲ.

ನಿಜ, ಈಚೆಗೆ ಕಾನೂನಿನ ಭಾಷೆಯು ಅತ್ಯಂತ ನಿರ್ದಿಷ್ಟವಾಗಿ ಖಚಿತವಾಗಿ ಇರಬೇಕೆಂಬ ಸಂಗತಿಯನ್ನು ಒಪ್ಪಿಕೊಳ್ಳಲಾಗುತ್ತಿದೆ. ಆದರೆ ಇಷ್ಟು ಸಾಲದು. ನಿಜ ಹೇಳಬೇಕೆಂದರೆ ಮರಾಠಿ ಭಾಷೆಯ ಸರಿಯಾದ ಉಪಯೋಗ ನಡೆಯದಿರುವುದಕ್ಕೆ ನಮ್ಮ ಚುನಾಯಿತ ಪ್ರತಿನಿಧಿಗಳ ಹಾಗೆಯೇ ಸರ್ಕಾರಿ ಅಧಿಕಾರಿಗಳು ಕೂಡ ಕಾರಣ. ನಾವು ಈ ಸಂಗತಿಯನ್ನು ಮರೆತು ಕೇವಲ ಒಂದು ಗುಂಪಿನವರನ್ನು ಟೀಕಿಸಬಾರದು. ಸಮಗ್ರವಾಗಿ ನೋಡುವುದಾದರೆ ರಾಜ್ಯಭಾಷೆಯು ಕೆಳಗೆ ಸೂಚಿಸುವ ಸಂದರ್ಭಗಳಲ್ಲಿ ಪರಸ್ಪರ ಭಿನ್ನ ವಾದ ರೀತಿಗಳಲ್ಲಿ ಕೆಲಸ ಮಾಡುತ್ತದೆ.

೧. ನಾಗರಿಕರು ಮತ್ತು ಚುನಾಯಿತ ಪ್ರತಿನಿಧಿಗಳ ನಡುವಣ ಸಂವಹನ: ಇದು ಅತ್ಯಂತ ಸರಳವಾಗಿರಬೇಕು. ಖಚಿತತೆಯು ಕ್ರಮೇಣ ಮೂಡಿಬರುವುದೆಂದು ನಿರೀಕ್ಷಿಸೋಣ.

೨. ನಾಗರಿಕರು ಮತ್ತು ಆಡಳಿತಗಾರರ ನಡುವಿನ ವ್ಯವಹಾರ: ಆಡಳಿತಗಾರರ ಭಾಷೆಯು ಖಚಿತವಾಗಿಯೂ ಇರಬೇಕು, ಸರಳವಾಗಿಯೂ ಇರಬೇಕು. ಖಚಿತತೆ ಇಲ್ಲದಿ ರುವುದು ತಪ್ಪು ತಿಳುವಳಿಕೆಗೆ ದಾರಿಯಾಗಬಹುದು. ಆಗ ನಾಗರಿಕರು ತಮಗೆ ಅನ್ಯಾಯ ವಾಯಿತೆಂದು ಕೊರಗುತ್ತಾರೆ.

೩. ಚುನಾಯಿತ ಪ್ರತಿನಿಧಿಗಳು ಮತ್ತು ಆಡಳಿತಗಾರರ ನಡುವಿನ ವ್ಯವಹಾರದ ಭಾಷೆಯು ಈ ಹಿಂದೆ ಹೇಳಿದಂತೆ ಸರಳತೆ ಮತ್ತು ಖಚಿತತೆ ಎರಡನ್ನೂ ಹೊಂದಿರಬೇಕು.

೪. ಆಡಳಿತಗಾರರು ತಮ್ಮ ನಡುವೆ ಪರಸ್ಪರ ವ್ಯವಹಾರ ನಡೆಸುವಾಗ ಭಾಷೆಯು ಸಾಕಷ್ಟು ತಾಂತ್ರಿಕವಾಗಿರಬಹುದು. ಇಲ್ಲಿ ಖಚಿತತೆ ಮತ್ತು ಸ್ಪಷ್ಟತೆಯ ಸಲುವಾಗಿ ಭಾಷೆಯು ಸ್ವಲ್ಪ ಭಾರವಾದರೂ ತಪ್ಪಿಲ್ಲ.

೫. ನಾಗರಿಕರು ಮತ್ತು ವಕೀಲರ ನಡುವಿನ ವ್ಯವಹಾರದ ಭಾಷೆಯು, ನಾಗರಿಕರು ಮತ್ತು ಆಡಳಿತಗಾರರ ನಡುವಿನ ಸಂವಹನದ ಭಾಷೆಯಂತೆಯೇ ಇರಬೇಕು.

೬. ವಕೀಲರು ಮತ್ತು ನ್ಯಾಯಾಧೀಶರ ನಡುವಿನ ವ್ಯವಹಾರವು ಹೆಚ್ಚು ತಾಂತ್ರಿಕ ಸ್ವರೂಪವನ್ನು ಪಡೆದಿರಬಹುದು.

೭. ಶಾಸನಕರ್ತರಾಗಿ ಚುನಾಯಿತ ಪ್ರತಿನಿಧಿಗಳು ಹಾಗೂ ಶಾಸನಗಳ ಭಾಷೆಯನ್ನು ರೂಪಿಸುವವರಾಗಿ ವಕೀಲರು ಮತ್ತು ನ್ಯಾಯಾಧೀಶರ ಭಾಷೆ: ಕಾನೂನುಗಳ ಭಾಷೆಯು ಅತ್ಯಂತ ತಾಂತ್ರಿಕವೂ ನಿಖರವೂ ಆಗಿರುತ್ತದೆ. ಶಾಸಕರಿಗೆ ಅದು ಅರ್ಥವಾಗುವುದು ಬಹಳ ಕಷ್ಟ. ಆದರೆ ಈ ಕಾನೂನುಗಳ ಕರಡನ್ನು ಸಿದ್ಧಪಡಿಸುವವರು ತಾವು ರೂಪಿಸುವ ಕಾನೂನು ಶಾಸಕರ ನಿಜವಾದ ಆಶಯಗಳನ್ನು ಜಾರಿಗೆ ತರುವುದೆಂದು ಖಚಿತಪಡಿಸಿಕೊಳ್ಳಬೇಕು.

ಆಡಳಿತಕ್ಕೆ ಸಂಬಂಧಪಟ್ಟ ಪದಕೋಶದ ಅಖಿಲ ಭಾರತ ಸ್ವರೂಪ ಹಾಗೂ ಸಮರೂಪತೆಯ ಪರವಾಗಿ ಸಾಕಷ್ಟು ವಿಚಾರಗಳನ್ನು ಮಂಡಿಸಲಾಗಿದೆ. ಮೇಲೆ ಹೆಸರಿಸಿದ

ಆರು ಮತ್ತು ಏಳನೆಯ ಸಂದರ್ಭಗಳಲ್ಲಿ ಬಳಸುವ ಕಾನೂನಿನ ಭಾಷೆಯ ಸಮರೂಪತೆ ಅಗತ್ಯ ಎನ್ನುವುದರ ಬಗ್ಗೆ ಎರಡು ಮಾತಿಲ್ಲ. ಆದರೆ ಉಳಿದ ಸಂದರ್ಭಗಳಲ್ಲಿ ಸಮರೂಪತೆಯ ಮೇಲೆ ಅತಿಯಾದ ಒತ್ತು ನೀಡುವ ಅಗತ್ಯವಿಲ್ಲ. ಹಿಂದೆ ಒಬ್ಬನೇ ಅಧಿಕಾರಿಯನ್ನು ಭಾರತದ ಬೇರೆ ಬೇರೆ ರಾಜ್ಯಗಳಲ್ಲಿ ತಹಸೀಲ್‌ದಾರ, ಮಾಮಲೇದಾರ, ಲಂಬರ್‌ದಾರ ಎಂಬ ಹೆಸರುಗಳಿಂದ ಕರೆಯಲಾಗುತ್ತಿತ್ತು. ಕಂದಾಯ ಅಧಿಕಾರಿಗಳಿಗೆ ಹಾಗೆಯೇ ಜಿಲ್ಲೆಗಿಂತ ಕೆಳಗಿನ ಹಂತಗಳಲ್ಲಿ ಆಡಳಿತ ನಡೆಸುವ ಅಧಿಕಾರಿಗೆ ದೇಶಾದ್ಯಂತ ಒಂದೇ ಹೆಸರನ್ನು ಹೊಂದಿರುವುದು ಅಪೇಕ್ಷಣೀಯವೇ ಹೌದು. ಚುನಾವಣೆಗಳನ್ನು ಹಿಂದಿಯಲ್ಲಿ ಚುನಾವ್ ಎಂದೋ ಮರಾಠಿಯಲ್ಲಿ ನಿವಡಣೂಕ್ ಎಂದೋ ಕರೆದರೆ ತಪ್ಪೇನಿಲ್ಲ. ಆದರೆ ಅಖಿಲ ಭಾರತ ಮಟ್ಟದ ಪದವಾಗಿ ನಿರ್ವಾಚನ್ ಎಂಬ ಸಂಸ್ಕೃತರೂಪವನ್ನು ಬಳಸಬಹುದು. ಆದರೆ ತೆರಿಗೆ ಬಾಕಿ ಎಂಬ ಸಂಗತಿಯನ್ನು ಹೇಳಲು ಅಖಿಲ ಭಾರತ ಪದವೊಂದನ್ನು ರೂಪಿಸುವ ಅಗತ್ಯವೇನೂ ಇಲ್ಲ. ಮರಾಠಿಯವರಿಗೆ ಸರಳವಾದ 'ಥಾಕಾಬಾಕಿ' ಎಂಬ ಪದವೇ ಸಾಕು. ನಾನು ಇಲ್ಲಿ ಸಲಹೆಯೊಂದನ್ನು ಕೊಡುತ್ತೇನೆ. ಮೇಲೆ ಹೆಸರಿಸಿದ ಒಂದು, ಎರಡು ಮತ್ತು ಐದನೆಯ ಸಂದರ್ಭಗಳಲ್ಲಿ ಎಂದರೆ ಸಾಮಾನ್ಯ ನಾಗರಿಕರು ಭಾಗವಹಿಸುವ ಬಳಸಲಾಗುವ ತಾಂತ್ರಿಕ ಪದಗಳ ಶಬ್ದಕೋಶವೊಂದನ್ನು ಪ್ರಕಟಿಸುವುದು ಉಪಯುಕ್ತವಾಗುತ್ತದೆ. ಇಂಥ ಪದಗಳು ಒಟ್ಟು ಆಡಳಿತ ಪದಕೋಶದಲ್ಲಿ ಶೇಕಡಾ ೪೦ ರಷ್ಟು ಇರಬಹುದು. ಈ ಶಬ್ದಕೋಶದಲ್ಲಿ ಮೊದಲು ಮರಾಠಿ ಪದ ಇರಬೇಕು. ಆಮೇಲೆ ಇಂಗ್ಲಿಷ್ ಸಂವಾದಿ ಪದ ಇರಬೇಕು. ನಂತರ ಮರಾಠಿಯಲ್ಲಿ ಆ ಪದದ ವಿವರಣೆ ಹಾಗೂ ನಿದರ್ಶನಗಳು ಇರಬೇಕು. ಪುಸ್ತಕದ ಅನುಬಂಧದಲ್ಲಿ ಇಂಗ್ಲಿಷ್-ಮರಾಠಿ ಶಬ್ದಸೂಚಿಯೊಂದು ಇರಬೇಕು (ಈ ಶಬ್ದಕೋಶದಲ್ಲಿ ಬಹಳ ತಾಂತ್ರಿಕವಾದ ವಿವರಗಳನ್ನು ನೀಡುವ ಅಗತ್ಯವಿಲ್ಲ.)

ಕೊನೆಯದಾಗಿ ನಾವು ಮರಾಠಿಯಲ್ಲಿನ ಆಡಳಿತಾತ್ಮಕ ಪದಗಳ ಮೇಲೆ ಗಮನವನ್ನು ಕೇಂದ್ರೀಕರಿಸಬಹುದು. ಇಂಥ ಪದಗಳ ಆಯ್ಕೆ ಮತ್ತು ರಚನೆಯನ್ನು ನಿಯಂತ್ರಿಸುವ ಸಂಗತಿಗಳು ಯಾವುವು? ಮೊದಲನೆಯದಾಗಿ ಒಂದು ಪದದ ಮೂಲಕ್ಕೆ ಸಂಬಂಧಪಟ್ಟ ವಿಧಿ ನಿಷೇಧಗಳನ್ನು ಸಂಪೂರ್ಣವಾಗಿ ಪಕ್ಕಕ್ಕಿಡಬೇಕು. ಉದಾಹರಣೆಗೆ ಕ್ರಿಕೆಟ್ ಆಟಕ್ಕೆ ಸಂಬಂಧಪಟ್ಟ ಹಾಗೆ ಮರಾಠಿಯಲ್ಲಿ ಪದಕೋಶವೊಂದು ರೂಪುಗೊಂಡ ಕ್ರಮವನ್ನು ಗಮನಿಸಬಹುದು. ಈ ಬೆಳವಣಿಗೆಗೆ ಯಾವುದೇ ಸಮಿತಿಯ ಸೂಲಗಿತ್ತಿತನವು ಬೇಕಾಗಲಿಲ್ಲ. ಪತ್ರಿಕೋದ್ಯಮಿಯಾದ ಎ. ಬಿ. ಕೊಲ್ಹಟಕರ್ ಮತ್ತು ಇತರರ ನೆರವಿನಿಂದ ಈ ಪದಗಳು ಜನಪ್ರಿಯವಾದವು. ಅವರು ಇಂಗ್ಲೀಷಿನ ಹಲವು ಪದಗಳನ್ನು ನಿಸ್ಸಂಕೋಚವಾಗಿ ಸ್ವೀಕರಿಸಿದರು.'ಲೆಗ್','ಆಫ್' ಮುಂತಾದ ಪದಗಳು ಆ ಭಾಷೆಯಿಂದಲೂ 'ಬಿನ್ ಬಾದ್' (Not out) ಎಂಬ ಪದ ಪರ್ಷಿಯನ್‌ದಿಂದಲೂ ಯಷ್ಟಿರಕ್ಷಕ (Wicket keeper)

ಎಂಬ ಪದ ಸಂಸ್ಕೃತದಿಂದಲೂ ಬಂದವು. 'ಪಾಯ್ ಚೀತ್' (Leg before wicket) ಎಂಬುದು ಮರಾಠಿಯದೇ ಕಾಣಿಕೆ. ಗೋಲಂದಾಜ್ (Bowler) ಎಂಬ ಪದವು ಸಂಸ್ಕೃತ ಹಾಗೂ ಪರ್ಶಿಯನ್‌ಗಳ ಕಲಬೆರಕೆಯಿಂದ ಉಂಟಾಗಿದೆ. ಯಾರೂ ಈ ಪದಗಳ ಬಗ್ಗೆ ಆಕ್ಷೇಪಣೆ ಮಾಡಿಲ್ಲ. ನಾವು ಬೇರೆ ಕ್ಷೇತ್ರಗಳಲ್ಲಿ ಇದೇ ರೀತಿಯ ವಿವೇಕವನ್ನು ಏಕೆ ತೋರಿಸಬಾರದು? ಒಂದು ಪಕ್ಷ ಒಂದೇ ವಸ್ತುವನ್ನು ಸೂಚಿಸಲು ಎರಡು ಬೇರೆ ಬೇರೆ ಮೂಲಗಳಿಂದ ಬಂದ ಸಂವಾದಿ ಪದಗಳಿದ್ದರೆ ನಾವು ಎರಡಕ್ಕೂ ಸೂಕ್ತ ಪ್ರಯೋಜನಗಳನ್ನು ಕಂಡುಕೊಳ್ಳಬಹುದು. ಉದಾಹರಣೆಗೆ ಭೂಮಿತಿ ಮತ್ತು ಜಮೀನ್ ಮೋಜಣಿ ಎಂಬ ಪದಗಳನ್ನು ನೋಡೋಣ. ಎರಡು ಪದಗಳಿಗೂ ಭೂಮಿಯನ್ನು ಅಳೆಯುವುದು ಎಂದೇ ಅರ್ಥ. ಆದರೆ ಮೊದಲನೆಯದು ಗಣಿತಶಾಸ್ತ್ರದ ಒಂದು ವಿಭಾಗವಾದರೆ ಎರಡನೆಯದು ಕಂದಾಯಇಲಾಖೆಯಲ್ಲಿ ಬಳಕೆಯಾಗುವ ಪದ. ಹಾಗೆಯೇ ಸಂಸದ್, ಲೋಕಸಭಾ, ರಾಜ್ಯಸಭಾ, ವಿಧಾನ ಪರಿಷತ್ ಮತ್ತು ವಿಧಾನಸಭಾ ಎಂಬ ಪದಗಳಿಗೆ ಖಚಿತವಾದ ಅರ್ಥಗಳನ್ನು ಕೊಟ್ಟ ಮೇಲೆ ಉಳಿಯುವ ಕಾಯ್ದೆ ಮಂಡಳ್ ಎಂಬ ಪದವನ್ನು ಈ ಎಲ್ಲ ಪದಗಳಿಗೂ ಅನ್ವಯವಾಗುವಂತೆ ಸಮಾನಾರ್ಥಕವಾಗಿ ಬಳಸಬಹುದು. ಸರಳತೆ ಮತ್ತು ಸಾಮಾನ್ಯತೆಗಳ ಮಾನದಂಡದ ಪರವಾಗಿ ವಾದ ಮಾಡುವುದು ಸುಲಭ. ಆದರೆ ಅದನ್ನು ಅನ್ವಯಿಸುವುದು ಕಷ್ಟ. ಹಿಂದಿಯಲ್ಲಿ ಹೇಳುವ ಹಾಗೆ ಸರಳರೇಖೆಯನ್ನು ಎಳೆಯುವುದು ಯಾವಾಗಲೂ ಕಷ್ಟ. ಸರಳತೆಯೆನ್ನುವುದು ಸಂಯುಕ್ತಾಕ್ಷರಗಳ ಹಾಗೂ ಉಚ್ಚಾರಾಂಶಗಳ ಲೆಕ್ಕಾಚಾರದಿಂದ ತೀರ್ಮಾನವಾಗುವುದಿಲ್ಲ. ಭಾಷಾ ಸಂಚಲನಾಲಯ (Language directorate) ಎನ್ನುವ ಪದ ಸುಲಭ ಎನ್ನಿಸಬಹುದು. ಆದರೆ ಅದನ್ನು ಉಚ್ಚರಿಸುವುದು ಭಾಷಾ ಸಂಚಲನ ಕಾರ್ಯಾಲಯ (Language director office) ಎನ್ನುವುದರ ಉಚ್ಚಾರಣೆಗಿಂತ ಕಷ್ಟ. ಇಲ್ಲಿ ಒಂದು ಪದ ಪರಿಚಿತವಾಗಿದೆಯೇ ಇಲ್ಲವೋ ಎನ್ನುವುದು ಮುಖ್ಯವಲ್ಲ. ಅದನ್ನು ಕಲಿಯಲು ಕಷ್ಟವೋ ಸುಲಭವೋ ಎನ್ನುವುದು ಮುಖ್ಯ. ಹೆಣ್ಣುಮಕ್ಕಳು ಚಿಕ್ಕ ಪುಟ್ಟ ಅಲಂಕಾರಗಳನ್ನು ಮಾಡಿಕೊಳ್ಳುವ ಕೋಣೆಯನ್ನು ಪ್ರಸಾಧನ್ ಕಕ್ಷ ಎಂದು ಕರೆಯುವುದರಲ್ಲಿ ತಪ್ಪೇನೂ ಇಲ್ಲ. ಆದರೆ ಅದನ್ನು 'ಮೂತ್ರಾಲಯ'ದ ಅರ್ಥದಲ್ಲಿ ಬಳಸುವುದು ಸರಿಯಲ್ಲ. ಅದು ಇಂಗ್ಲೀಷಿನ ಟಾಯ್ಲೆಟ್ (Toilet) ಎಂಬ ಪದದ ಬುದ್ಧಿಯಿಲ್ಲದ ಭಾಷಾಂತರ. ಎಷ್ಟೋಬಾರಿ ಕೆಲವು ಇಂಗ್ಲಿಷ್ ಪದಗಳು ಆ ಭಾಷೆಯನ್ನು ತಿಳಿಯದವರಿಗೂ ಪರಿಚಿತವಾಗಿವೆ ಎಂಬ ವಾದವನ್ನು ಮಾಡಲಾಗುತ್ತದೆ. ಸಾಮಾನ್ಯವಾಗಿ ಕೊಡುವ ನಿದರ್ಶನವೆಂದರೆ 'Seed Farm' ಎಂಬುದು. ಈ ವಾದ ಸರಿಯಲ್ಲ. ಒಬ್ಬ ರೈತನಿಗೆ ಒಂದು ಪದ ಗೊತ್ತಿದೆ ಎನ್ನುವುದೇ ಬೇರೆ. ಅವನು ಅದನ್ನು 'ಹೇಗೆ ಅರ್ಥಮಾಡಿಕೊಳ್ಳುತ್ತಾನೆ' ಎಂಬುದೇ ಬೇರೆ. ಒಂದು ಜಾಗವನ್ನು 'Seed Farm' ಎಂದು ಕರೆಯುತ್ತಾರೆ ಎಂದು ಅವನಿಗೆ ಗೊತ್ತಿರುತ್ತದೆ. ಆದರೆ ಯಾಕೆ ಹಾಗೆ ಕರೆಯುತ್ತಾರೆ ಎಂದು ಗೊತ್ತಿರುವುದಿಲ್ಲ. ಆಕಸ್ಮಿಕ

ವಾಗಿ ಲೆಕ್ಕ ಒಂದರ ಉತ್ತರವನ್ನು ಕಂಡುಕೊಂಡ ವಿದ್ಯಾರ್ಥಿಗೆ ಅದನ್ನು ಹೇಗೆ ಬಿಡಿಸುವುದು ಎಂದು ಗೊತ್ತಿರುವುದಿಲ್ಲ. ಈ ರೈತನ ಪಾಡೂ ಹಾಗೆಯೇ. ಆ ಹುಡುಗ ಲೆಕ್ಕವನ್ನು ಮಾಡಬಲ್ಲನೆಂಬುದು ಮತ್ತು ಈ ರೈತನಿಗೆ Seed Farm ಎಂಬ ಪದ ಗೊತ್ತು ಎಂಬುದು ಎರಡೂ ಒಂದೇ. ಉದಾಹರಣೆಗೆ Culvert (ಒಳಚರಂಡಿ) ಎಂಬ ಪದಕ್ಕೆ ಅಧಃಪ್ರಣಾಳ ಎಂದು ಕರೆಯುವುದು ಹುಚ್ಚುತನ, ನಿಜ. ಹಾಗೆಂದು ಕಿವಿಗೆ ಆಕರ್ಷಕವೆಂದು ಕೇಳುವ ಹಿಂದಿಯ 'ಪುಲಿಯಾ' (ಕಿರು ಸೇತುವೆ) ಎಂಬ ಪದವನ್ನು ಬಳಸಿದರೆ ಅದು ತಪ್ಪಾಗುತ್ತದೆ. ಏಕೆಂದರೆ ನಾವು ಸರಳತೆಗಾಗಿ, ಖಚಿತತೆಯನ್ನು ಬಲಿಕೊಡಲು ಸಾಧ್ಯವಿಲ್ಲ. ಮೂಲ ಇಂಗ್ಲಿಷ್ ಪದವು ವಾಹನಗಳ ಚಲನೆಗೆ ಇರುವ ದಾರಿಯನ್ನು ಸೂಚಿಸುವುದಿಲ್ಲ. ಬದಲಾಗಿ ನೀರಿನ ಚಲನೆಗಾಗಿ ಇರುವ ದಾರಿಯನ್ನು ಸೂಚಿಸುತ್ತದೆ. ಆದ್ದರಿಂದ 'ಭೂಯಾರಿ ಗಟಾರ್' ಎಂಬ ಪದ ಹೆಚ್ಚು ಸೂಕ್ತವೆಂದು ಕಾಣುತ್ತದೆ. ಅದೇ ರೀತಿ ಹೆರಿಗೆಗೆ ನೆರವಾಗುವ ಸೂಲಗಿತ್ತಿಯನ್ನು ನಿರ್ದೇಶಿಸಲು ಈಗ ಸೂಚಿತವಾಗಿರುವ ಪ್ರಸಾವಿಕಾ ಎನ್ನುವ ಪದದ ಬದಲು ಚಿರಪರಿಚಿತವಾದ ಸೂಯಿಣ್ ಎಂಬ ಪದ ಬಳಸಬಹುದು. ಆದರೆ ಈ ಸಂದರ್ಭದಲ್ಲಿ ಬಳಸುವ ಪ್ರಸೂತಿ, ಸೂತಿಕಾ ಮುಂತಾದ ಪದಗಳ ಜತೆಯಲ್ಲಿ ಪ್ರಸಾವಿಕಾ ಎಂಬ ಪದವು ಹತ್ತಿರದ ಸಂಬಂಧವನ್ನು ಪಡೆದಿರುವುದರಿಂದ ಅದನ್ನು ಅರ್ಥಮಾಡಿಕೊಳ್ಳುವುದು ಹಾಗೂ ಕಲಿಯುವುದು ಸುಲಭ. ಇಂಥ ಸಂದರ್ಭಗಳಲ್ಲಿ ಸರಳ ಹಾಗೂ ಸಾಮಾನ್ಯ ಎಂಬ ಪದಗಳ ಅರ್ಥವು ಸಂಕೀರ್ಣವಾಗಿ ಬಿಡುತ್ತವೆ.

ಈಗ, ಸಾಕಷ್ಟು ಟೀಕೆಗೆ ಗುರಿಯಾಗಿರುವ ಕೃತಿಯೊಂದರ ಬಗ್ಗೆ ಕೆಲವು ಮಾತುಗಳು, ಅದು ಮೂವತ್ತು ಸಾವಿರ ನಮೂದುಗಳನ್ನು ಹೊಂದಿರುವ ಶಾಸಕೀಯ ವ್ಯವಹಾರ ಕೋಶ. ನಾನು ಅದರ ಇಪ್ಪತ್ತು ಪುಟಗಳನ್ನು ಎಂದರೆ ಸುಮಾರು ಸಾವಿರ ನಮೂದು ಗಳನ್ನು ಪರಿಶೀಲನೆ ಮಾಡಿದೆ. ಅವುಗಳಲ್ಲಿ ಶೇ. ಒಂದರಷ್ಟು ನಮೂದುಗಳು ಒಂದು ಅಸ್ಪಷ್ಟ ಪದದೊಂದಿಗೆ, ಸರಳವಾದ ಮರಾಠಿ ಪದವನ್ನು ಜೋಡಿಮಾಡಿದ್ದವು.

Government ಶಾಸನ್, ಸರ್ಕಾರ್ (ಎರಡನೆಯದು ಸರಳ ಪದ)

Overhead expenses ವರ್ಹೆಡ್ ಖರ್ಚ್, ಉಪರಿವ್ಯಯ (ಮೊದಲನೆಯದು ಸರಳ ಪದ)

ಹಾಗೆಯೇ ಶೇ. ಮೂರರಷ್ಟು ನಮೂದುಗಳಲ್ಲಿ ಇನ್ನಷ್ಟು ಉತ್ತಮಪಡಿಸಬಹುದಾದ ಪದಗಳಿವೆ. ಸಾಹಿತಿಗಳು ಮತ್ತು ಪತ್ರಿಕೋದ್ಯಮಿಗಳು ಕಿಡಿ ಕಾರಿರುವುದು ಇಂಥ ಪದಗಳ ವಿರುದ್ಧವಾಗಿಯೇ.

Overseer ಅವೇಕ್ಷಕ್
Part time ಅಂಶಕಾಲಿಕ
Passed with grace ಅನುಗ್ರಹೋತ್ತೀರ್ಣ

ಎಂದರೆ ಸುಮಾರು ೩೦೦ ಮತ್ತು ೯೦೦ ಪದಗಳು ಈ ನಿಘಂಟಿಗೆ ಕೆಟ್ಟ ಹೆಸರು ತಂದಿವೆ. ಹೀಗಾಗಿರುವುದು ಸಹಜವೇ. ಏಕೆಂದರೆ ಅನ್ನ ತಿನ್ನುವಾಗ ನಮ್ಮ ಮನಸ್ಸಿನಲ್ಲಿ ಉಳಿಯುವುದು ಆಗೊಮ್ಮೆ ಈಗೊಮ್ಮೆ ಸಿಗುವ ಕಲ್ಲುಗಳೇ ಹೊರತು ಲೀಲಾಜಾಲವಾಗಿ ಹೊಟ್ಟೆಯೊಳಗೆ ಹೋದ ಅನ್ನದ ಅಗಳುಗಳಲ್ಲ. ಅಲ್ಲದೆ ಆಕ್ಷೇಪಣೆ ಎತ್ತಲಾಗುವ ಕೆಲವೇ ಕೆಲವು ಪದಗಳನ್ನು ಮತ್ತೆ ಮತ್ತೆ ಬಳಸಬೇಕಾಗಬಹುದು. ಆದ್ದರಿಂದಲೇ ಅವುಗಳ ಮೇಲಿನ ಆಕ್ಷೇಪಣೆ ಮತ್ತಷ್ಟು ಹೆಚ್ಚಬಹುದು. ಈ ಪದಗಳಿಗಿರುವ, ಭಾಷೆಯನ್ನು ಕಲುಷಿತಗೊಳಿಸುವ ಶಕ್ತಿಯನ್ನು ಅಲ್ಲಗಳೆಯಲಾಗುವುದಿಲ್ಲ. ಆದ್ದರಿಂದ ನಮ್ಮ ಸರ್ಕಾರವು ಈ ವಿಷಯವನ್ನು ರಚನಾತ್ಮಕವಾದ ಅರ್ಥದಲ್ಲಿ ಸವಾಲಾಗಿ ತೆಗೆದುಕೊಳ್ಳಬೇಕೆಂದು ನಾನು ವಾದಿಸುತ್ತೇನೆ. ಅದು ಬಹುಬೇಗ ಪರಿಶೀಲನಾ ಸಮಿತಿಯೊಂದನ್ನು ನೇಮಿಸಿ ಈ ಶಬ್ದಕೋಶದ ಪರಿಷ್ಕೃತ ಹಾಗೂ ಸುಧಾರಿತ ಆವೃತ್ತಿಯನ್ನು ಹೊರತರಬೇಕು. ಈ ನಿಘಂಟಿನ ಮೇಲೆ ಮೊದಲ ಕಲ್ಲು ಎಸೆದ ಪಿ. ಕೆ. ಅತ್ರೆಯವರು ಆಗ ರಾಜ್ಯದ ಮುಖ್ಯಮಂತ್ರಿಯಾಗಿದ್ದ ವೈ. ಬಿ. ಚವ್ಹಾಣರಿಗೆ ಈ ರೀತಿ ಸಮಾಧಾನ ಹೇಳಿದರೆಂದು ಲೋಕರಾಜ್ಯ ಪತ್ರಿಕೆಯಲ್ಲಿ ವರದಿಯಾಗಿದೆ: "ಸರ್ಕಾರದಲ್ಲಿ ಆಡಳಿತ ನಡೆಸುವ ನೀವು ನಿಮ್ಮ ಕೆಲಸವನ್ನು ಮಾಡಿ. ನಿಮ್ಮ ಪ್ರಯತ್ನಗಳನ್ನು ಟೀಕಿಸುವ ನಮ್ಮ ಕೆಲಸವನ್ನು ನಾವು ಮಾಡುತ್ತೇವೆ. ಒಂದಲ್ಲ ಒಂದು ದಿನ ಈ ಟೀಕೆಗಳಿಂದಲೇ ಕಡಿಮೆ ಅಸ್ಪಷ್ಟವಾದ ಪದಗಳು ಮೂಡಿ ಬರುತ್ತವೆ." (ಲೋಕರಾಜ್ಯ, ೧ ಅಕ್ಟೋಬರ್ ೧೯೬೯ ,ಪುಟ ೭೦)

೭

ಈ ಪ್ರಾಯೋಗಿಕ ಅಧ್ಯಯನವನ್ನು ಮುಗಿಸುವ ಮೊದಲು ಭಾರತದ ಇತರ ರಾಜ್ಯಗಳ ಪರಿಸ್ಥಿತಿಯ ಮೇಲೆ ಪಕ್ಷಿನೋಟ ಹರಿಸುವುದು ತಪ್ಪಾಗಲಾರದು. ಏಕೆಂದರೆ ಆಡಳಿತಾತ್ಮಕ ಪರಿಭಾಷೆಯು, ಅಷ್ಟೇಕೆ, ಎಲ್ಲ ವೈಜ್ಞಾನಿಕ ಮತ್ತು ತಂತ್ರಜ್ಞಾನಕ್ಕೆ ಸಂಬಂಧಿಸಿದ ಪರಿಭಾಷೆಗಳ ಸಮಸ್ಯೆಗಳನ್ನು ಎಲ್ಲ ಭಾರತೀಯ ಭಾಷೆಗಳೂ ಎದುರಿಸುತ್ತಿವೆ. ಅಷ್ಟೇ ಅಲ್ಲ, ಹತ್ತುಹಲವು ಅನಭಿವೃದ್ಧ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳು ಇಂಥಹುದೇ ದೋಣಿಗಳಲ್ಲಿ ಪ್ರಯಾಣ ಮಾಡುತ್ತಿವೆ.

ಪಂಜಾಬಿ ಆ ರಾಜ್ಯದ ಮುಖ್ಯ ಭಾಷೆ. ಭಾರತೀಯ ಭಾಷೆಗಳಾದ ಕಾಶ್ಮೀರಿ, ಉರ್ದು ಸಿಂಧಿ ಮತ್ತು ಸ್ವಲ್ಪಮಟ್ಟಿಗೆ ಪಂಜಾಬಿಗಳು ಸಂಸ್ಕೃತಕ್ಕಿಂತ ಹೆಚ್ಚಾಗಿ ಪರ್ಶಿಯನ್ ಕಡೆ ಒಲಿಯುತ್ತವೆ. ಅವುಗಳನ್ನು ಮಾತನಾಡುವವರು ಸರಳವಾದ ಭಾಷೆ ಮತ್ತು ಪರ್ಶಿಯನ್ ಪ್ರಭಾವಕ್ಕೆ ಒಳಗಾದ ಪಂಡಿತ ಭಾಷೆಗಳ ನಡುವೆ ಆಯ್ಕೆಯನ್ನು ಮಾಡಿಕೊಳ್ಳಬೇಕಾಗುತ್ತದೆ. (ಆದ್ದರಿಂದಲೇ ಪಾಕಿಸ್ತಾನಕ್ಕೆ ಹೋದ ಉರ್ದು ಮಾತ ನಾಡುವ ಭಾರತೀಯರು ಆ ದೇಶದ ಉರ್ದುವಿನಲ್ಲಿ ಪರ್ಶಿಯನ್–ಅರಾಬಿಕ್ ಮೂಲಕ ಪದಗಳು ಅತಿಯಾಗಿವೆ ಎಂದು ಹೇಳುತ್ತಾರೆ) ಇಂದು ಭಾರತದಲ್ಲಿ ಪಂಜಾಬಿ ಮಾತ ನಾಡುವವರ ಪೈಕಿ ಮುಸ್ಲಿಮರ ಸಂಖ್ಯೆ ಬಹಳ ಕಡಿಮೆ. ಸಿಖ್ ಜನಗಳಾದರೋ ಸರಳ

ಪಂಜಾಬಿಯನ್ನು ಇಷ್ಟಪಡುತ್ತಾರೆ. ಹಾಗೆಯೇ ಆರ್ಯ ಸಮಾಜದಿಂದ ಪ್ರಭಾವಿತರಾದ ಹಿಂದುಗಳು ಹಿಂದಿ ಮತ್ತು ಸಂಸ್ಕೃತಗಳ ಕಡೆಗೆ ಒಲವು ತೋರುವ ಪಂಜಾಬಿಯನ್ನು ಇಷ್ಟಪಡುತ್ತಾರೆ. ಕ್ರಮೇಣ ಪಂಜಾಬಿಯು ಉರ್ದು ದಬ್ಬಾಳಿಕೆ ಮತ್ತು ಹಿಂದಿ ದಬ್ಬಾಳಿಕೆಯಿಂದ ಬಿಡುಗಡೆ ಪಡೆಯುತ್ತಿದೆ. ಆದರೆ ಅದೇ ಕಾಲದಲ್ಲಿ ತಾಂತ್ರಿಕ ಪರಿಭಾಷೆಗಾಗಿ ಸಂಸ್ಕೃತವನ್ನು ಬಳಸುತ್ತಾರೆ. ಆದ್ದರಿಂದ (ಇಕಾನಮಿ) Economy ಎಂಬ ಪದದ ಬದಲಾಗಿ 'ಸಂಜಾಮ್' ಎಂಬ ಪದವನ್ನು ಬಳಸುವರೇ ಹೊರತು 'ಮುವಾಷೇ ಮುವಾಮಲಾ' ಎಂಬುದನ್ನಲ್ಲ.

ಹಿಂದಿಯೂ ಬಹಳ ಪ್ರಬಲವಾದ ಸಂಸ್ಕೃತೀಕರಣದ ಪ್ರವೃತ್ತಿಯನ್ನು ತೋರಿಸುತ್ತವೆ. ಉದಾಹರಣೆಗೆ ಅನೇಕ ಮರಾಠಿ ಭಾಷಿಕರು ಚುನಾವಣೆ ಎನ್ನುವ ಅರ್ಥದಲ್ಲಿ ನಿವಡಣೂಕ್ ಎಂಬ ಪದವನ್ನು ಬಳಸಬಯಸುತ್ತಾರೆ. 'ನಿರ್ವಾಚನ್' ಎಂಬ ಪದವನ್ನಲ್ಲ. ಹಿಂದಿಯ ಚುನಾವ್ ಎಂಬ ಪದದ ಪರವಾಗಿ ಮಾತನಾಡುವವರ ಸಂಖ್ಯೆಯಂತೂ ಬಹಳ ಕಡಿಮೆ. ಆಡಳಿತಾತ್ಮಕ ಮತ್ತು ತಾಂತ್ರಿಕ ಹಿಂದಿಯು ದಿನದಿಂದ ದಿನಕ್ಕೆ ಅಸ್ಪಷ್ಟವೂ ನಿಗೂಢವೂ ಆಗುತ್ತಿರುವುದನ್ನು ತುಟಿಕ್ ಪಿಟಕ್ ಎನ್ನದೇ ಒಪ್ಪಿಕೊಳ್ಳುತ್ತಾರೆ. ಹಿಂದಿಯ ಸಂದರ್ಭದಲ್ಲಿ ಸನ್ನಿವೇಶವನ್ನು ಸಂಕೀರ್ಣಗೊಳಿಸುವ ಮತ್ತೊಂದು ಅಂಶವಿದೆ. ಹಿಂದಿಯನ್ನು ತಾಯಿನುಡಿಯಾಗಿ ಬಳಸುವ ಜನರಿಗೆ ಚುನಾವ್ ಎನ್ನುವ ಪದವು ಹೆಚ್ಚು ಸುಲಭ ಎನ್ನಿಸಬಹುದು. ಆದರೆ ಹಿಂದಿಯನ್ನು ಕಲಿಯುತ್ತಿರುವ ದ್ರಾವಿಡ ಭಾಷೆಗಳ ಜನರಿಗೇ ನಿರ್ವಾಚನ ಎಂಬ ಪದವೇ ಸರಳವೆನಿಸಬಹುದು. ಹಾಗಾದಾಗ ಹಿಂದಿ ಭಾಷಿಕರು ಏನು ಮಾಡಬೇಕು?

ಮಲೆಯಾಳಂ, ಕನ್ನಡ ಮತ್ತು ತೆಲುಗು ಭಾಷೆಗಳು ತಮ್ಮ ಶಬ್ದಕೋಶಗಳ ಕೊರತೆಗಳನ್ನು ತುಂಬಿಕೊಳ್ಳಲು ಯಾವ ಸಂಕೋಚವೂ ಇಲ್ಲದೆ ಸಂಸ್ಕೃತ ಪದಗಳನ್ನು ಎರವಲು ತೆಗೆದುಕೊಳ್ಳುತ್ತವೆ. ತಮಿಳುಪರವಾದ ಚಳುವಳಿಗಳು ಪ್ರಬಲವಾಗಿರುವ ಈಚಿನ ದಶಕಗಳಲ್ಲಿ ತಮಿಳರು ಸಂಸ್ಕೃತವನ್ನು ಬಳಸುವುದರ ಬಗ್ಗೆ ಬಹಳ ಮುಜುಗರ ತೋರಿಸುತ್ತಾರೆ. ಅವರು ಕೆಲವೊಮ್ಮೆ ಅತಿಯಾಗಿ ಪ್ರಾಚೀನತಮಿಳಿನಿಂದ ಸಾಲ ತರುತ್ತಾರೆ ಇದರಿಂದ ತಮಿಳು ಜನಸಾಮಾನ್ಯರಿಗೆ ಗಾಬರಿ ಮತ್ತು ಆಶ್ಚರ್ಯ ಉಂಟಾಗುತ್ತದೆ. ಈ ಅತಿ ಪರಿಶುದ್ಧ ತಮಿಳನ್ನು ಅರ್ಥಮಾಡಿಕೊಳ್ಳಲು ತಮಿಳರಿಗೇ ಸಾಧ್ಯವಾಗುವುದಿಲ್ಲ.

ಸಂಸ್ಕೃತದಿಂದ ಪದಗಳನ್ನು ಸಾಲ ತೆಗೆದುಕೊಂಡ ಮಾತ್ರಕ್ಕೆ ಎಲ್ಲ ಭಾರತೀಯ ಭಾಷೆಗಳಲ್ಲೂ ಸಮರೂಪತೆ ಬರುವುದಿಲ್ಲ. ಎಷ್ಟೋ ಸಲ ಒಂದೇ ಸಂಸ್ಕೃತ ಪದ ಬೇರೆ ಬೇರೆ ಭಾಷೆಗಳಲ್ಲಿ ಬೇರೆ ಬೇರೆ ಅರ್ಥಗಳಲ್ಲಿ ಬಳಕೆಯಾಗುತ್ತದೆ. 'ಚೇಷ್ಟಾ' ಎಂಬ ಪದಕ್ಕೆ ಬಂಗಾಳಿ ಮತ್ತು ಹಿಂದಿ ಭಾಷೆಗಳಲ್ಲಿ 'ಪ್ರಯತ್ನ' ಎಂಬ ಅರ್ಥವಿದ್ದರೆ ಮರಾಠಿ ಮತ್ತು ತೆಲುಗುಗಳಲ್ಲಿ 'ಗೇಲಿ ಮಾಡುವುದು' ಎಂಬ ಅರ್ಥವಿದೆ. ಇಂಗ್ಲೀಷಿನ History ಎಂಬ ಪದ ಮರಾಠಿ ಮತ್ತು ಹಿಂದಿಗಳಲ್ಲಿ 'ಇತಿಹಾಸ' ಎಂಬ ರೂಪತಳೆದರೆ ತೆಲುಗಿನಲ್ಲಿ 'ಚರಿತ್ರಮು'

ಎಂದಾಗುತ್ತದೆ. ಆದರೆ ಕೆಲವು ಸಲ ಸಂಸ್ಕೃತದ ಎರವಲು ಪದ ಒಂದು ಭಾರತೀಯ ಭಾಷೆಯಿಂದ ಅಂತಹುದೇ ಭಾರತೀಯ ಭಾಷೆಗಳ ಕಡೆಗೆ ಚಲಿಸುತ್ತದೆ. ಉದಾಹರಣೆಗೆ ವಿ. ಕೆ. ರಾಜವಾಡೆಯವರು ಮರಾಠಿಯಲ್ಲಿ Culture ಎಂಬ ಪದಕ್ಕೆ ಬದಲಾಗಿ 'ಸಂಸ್ಕೃತಿ' ಯೆಂಬ ಪದವನ್ನು ಬಳಸಿದರು. ಇದನ್ನು ರವೀಂದ್ರನಾಥ ಠಾಕೂರರು ಬಂಗಾಳಿಗೆ ತೆಗೆದುಕೊಂಡರು. ಕ್ರಮೇಣ ಇದು ಇತರ ಭಾರತೀಯ ಭಾಷೆಗಳಿಗೆ ಹರಡಿತು.

ಬಂಗಾಳಿಯ ಬಗ್ಗೆ ವಿವರವಾಗಿ ಹೇಳುವ ಅಗತ್ಯವಿದೆ. ಭಾರತೀಯರಿಗೆ ಪಾರಿಭಾಷಿಕ ಪದಗಳನ್ನು ಸಹಜವಾಗಿಯೇ ಬೆಳೆಸಿಕೊಳ್ಳಲು ಸಿಕ್ಕ ಕೆಲವು ದಶಕಗಳನ್ನು ಬಂಗಾಳಿ ಮಾತನಾಡುವವರು ಬಹಳ ಸಮರ್ಪಕವಾಗಿ ಉಪಯೋಗಿಸಿಕೊಂಡರು. ಆ ಭಾಷೆಯಲ್ಲಿ ವಿಜ್ಞಾನ ಮತ್ತು ಇತರ ಶಾಸ್ತ್ರಗಳಿಗೆ ಸಂಬಂಧಿಸಿದ ಪುಸ್ತಕಗಳು ಅನೇಕ ವರ್ಷಗಳಿಂದ ಬರುತ್ತಲೇ ಇವೆ. (ಇದಕ್ಕೆ ಹೋಲಿಸಿದರೆ ಮರಾಠಿ ಭಾಷೆಯ ಪ್ರಕಾಶಕರು ಶಾಲಾ ಪಠ್ಯಪುಸ್ತಕಗಳು ಮತ್ತು ಕಥೆ ಕಾದಂಬರಿಗಳಿಂದ ಆಚೆ ಹೋಗುವುದು ಬಹಳ ಅಪರೂಪ. ಈ ಬಡತನಕ್ಕೆ ಮರಾಠಿ ಓದುಗ ಕೂಡ ಸಾಕಷ್ಟು ಹೊಣೆಗಾರನಾಗಿದ್ದಾನೆ.)

ಕೆಲವು ಬಾರಿ ಬಂಗಾಳಿಗಳ ಸ್ವಭಾಷಾ ಮೋಹವು ಅತಿರೇಕಕ್ಕೆ ಹೋಗುತ್ತದೆ ಎನ್ನುವುದು ನಿಜ. ಆದರೆ ಅದು ಯಾವಾಗಲೂ ಇಂಗ್ಲೀಷಿನ ವಿರೋಧವಾಗಿ ರೂಪಿತ ವಾದಂತೆ ಕಾಣುವುದಿಲ್ಲ. ಭಾರತದಲ್ಲಿ ಪ್ರಕಟವಾಗುತ್ತಿರುವ ಇಂಗ್ಲಿಷ್ ಪುಸ್ತಕಗಳಲ್ಲಿ ಮುಖ್ಯವಾದ ಪಾಲು ಬಂಗಾಳಿಗಳದಾಗಿದೆ. ಗುಣದ ದೃಷ್ಟಿಯಿಂದಲೂ ಅಷ್ಟೇ, ಗಾತ್ರದ ದೃಷ್ಟಿಯಿಂದಲೂ ಅಷ್ಟೇ. ತನ್ನ ಭಾಷೆಯ ಮೇಲಿನ ಪ್ರೀತಿಯನ್ನು ಇಂಗ್ಲಿಷ್ ಮೇಲಿನ ದ್ವೇಷದೊಂದಿಗೆ ಸಮೀಕರಿಸಬಾರದು. ಇಂಗ್ಲಿಷ್ ಬಗೆಗಿನ ಮರಾಠಿ ಜನರ ಧೋರಣೆಯು ಕುತೂಹಲಕಾರಿಯಾಗಿದೆ. ತಿಲಕರ ಕಾಲದಿಂದಲೂ ಅವರು ಇಂಗ್ಲಿಷ್ ಬಗ್ಗೆ ವಿಚಿತ್ರವಾದ ಅಭದ್ರತೆಯ ಭಾವನೆಗಳನ್ನು ಬೆಳೆಸಿಕೊಂಡಿರುವಂತೆ ಕಾಣುತ್ತದೆ. ಮರಾಠಿ ಮತ್ತು ಇಂಗ್ಲಿಷ್ ಎರಡು ಭಾಷೆಗಳಲ್ಲೂ ವಿಪುಲವಾಗಿ ಬರೆದಿರುವ ಲೇಖಕರು ಬಹಳ ಕಡಿಮೆ. ಬದಲಾಗಿ ಕೇವಲ ಮರಾಠಿಯಲ್ಲಿ ಬರೆದಿರುವ ಅನೇಕ ದೊಡ್ಡ ವಿದ್ವಾಂಸರು ಮಹಾರಾಷ್ಟ್ರದ ಹೊರಗೆ ತಮ್ಮ ಯೋಗ್ಯತೆಗೆ ಅನುಗುಣವಾದ ಮನ್ನಣೆಯನ್ನು ಪಡೆದಿಲ್ಲ. ಏಕೆಂದರೆ ಯಾರೂ ಅವರ ಕೃತಿಗಳನು ಇಂಗ್ಲಿಷ್‌ಗೆ ಅನುವಾದಿಸಿಲ್ಲ. ಅನೇಕ ಮರಾಠಿ ಭಾಷಿಕರು ಇಂಗ್ಲಿಷ್ ಬಗ್ಗೆ ಅತಿಯೆನ್ನುವಷ್ಟು ಅಭಿಮಾನವನ್ನು ತೋರಿಸುತ್ತಾರೆ ಅಥವಾ ಕುರುಡು ದ್ವೇಷವನ್ನು ವ್ಯಕ್ತಪಡಿಸುತ್ತಾರೆ. ಎರಡೂ ಸಂದರ್ಭಗಳಲ್ಲಿಯೂ ಅವರು ಬಹಳ ಆಳವಾದ ಕೀಳರಿಮೆಯನ್ನು ವ್ಯಕ್ತಪಡಿಸುತ್ತಿರುತ್ತಾರೆ. ಆದ್ದರಿಂದ ಮರಾಠಿಗರು ಇಂಗ್ಲಿಷ್ ಬಗೆಗಿನ ತಮ್ಮ ಧೋರಣೆಯನ್ನು ಮರುಪರಿಶೀಲನೆ ಮಾಡಬೇಕಾದ ಕಾಲ ಬಂದಿದೆ.

# ಪ್ರಾದೇಶಿಕ ಭಾಷೆಗಳು ಅಥವಾ ಇಂಗ್ಲಿಷ್? ಉನ್ನತ ಶಿಕ್ಷಣದ ಮಾಧ್ಯಮವಾಗಿ

**ಭ. ಕೃಷ್ಣಮೂರ್ತಿ**

ಒಬ್ಬ ಭಾಷಾ ಶಾಸ್ತ್ರಜ್ಞನಾಗಿ ಹಾಗೂ ಭಾಷೆಗೆ ಸಂಬಂಧಿಸಿದ ಸಮಾಜಶಾಸ್ತ್ರಜ್ಞನಾಗಿ ನಾನು ಕೆಲವು ವಿಷಯಗಳನ್ನು ಹೇಳಬಯಸುತ್ತೇನೆ. ಅವು ಭಾಷಾಶಕ್ತಿಯ ಬೆಳವಣಿಗೆಗೆ ಸಂಬಂಧಪಟ್ಟವು. ಅವುಗಳನ್ನು ಎಲ್ಲ ತಜ್ಞರೂ ಈಗಾಗಲೇ ಸತ್ಯವೆಂದು ಒಪ್ಪಿಕೊಂಡಿದ್ದಾರೆ. ಅವು ಈಗಾಗಲೇ ಪರೀಕ್ಷೆಗೆ ಒಳಗಾಗಿವೆ. ಪ್ರಾಚೀನ ಮತ್ತು ಆಧುನಿಕ ಸಮಾಜಗಳಲ್ಲಿ ದೊರಕಿದ ಮಾಹಿತಿಗಳ ಆಧಾರದ ಮೇಲೆ ಆ ಸಂಗತಿಗಳನ್ನು ಈಗಲೂ ಪರೀಕ್ಷಿಸಲು ಸಾಧ್ಯವಿದೆ.

೧. ನಾವು ಆದಿವಾಸಿ ಅಥವಾ ಅನಾಗರಿಕ ಎಂದು ಕರೆಯಬಹುದಾದ ಸಮಾಜಗಳಿವೆಯೇ ಹೊರತು ಯಾವುದೇ ಭಾಷೆಯನ್ನು, ಹಾಗೆ ಅಪರಿಪೂರ್ಣವೆಂದು ಕರೆಯಲಾಗುವುದಿಲ್ಲ. ಹೆಚ್ಚು ಕಡಿಮೆ ಎಲ್ಲ ಭಾಷೆಗಳೂ ಮನುಷ್ಯ ಜಾತಿಯಲ್ಲಿ ನಡೆಯುವ ಯಾವುದೇ ಸಂವಹನ ಕಾರ್ಯವನ್ನು ಯಶಸ್ವಿಯಾಗಿ ನಡೆಸಲು ಅಗತ್ಯವಾದ ರಚನೆಗಳನ್ನು ಪಡೆದಿವೆ.

೨. ಭಾಷೆಯು ಒಂದು ಸಂವಹನ ಮಾಧ್ಯಮ ಮಾತ್ರವಲ್ಲ. ಅದೊಂದು ಸಾಂಸ್ಕೃತಿಕ ಸಂಸ್ಥೆ. ಅದು ತನ್ನನ್ನು ಬಳಸುವ ಜನರ ಸಾಮಾಜಿಕ, ಭಾವನಾತ್ಮಕ ಮತ್ತು ಬೌದ್ಧಿಕ ಬದುಕಿನ ಅವಿಭಾಜ್ಯವಾದ ಅಂಗ. ಯಾವುದೇ ಒಂದು ಸಮಾಜದಲ್ಲಿ, ಹಲವು ಶತಮಾನಗಳ ಸಾಹಿತ್ಯಕ ಸಂಪ್ರದಾಯವನ್ನು ಹೊಂದಿರುವ ಜೀವಂತ ಭಾಷೆಗಳನ್ನು, ಎಲ್ಲಿಂದಲೋ ಬಂದ ಇತರ ಭಾಷೆಗಳು ಅಷ್ಟು ಸುಲಭವಾಗಿ ಎರಡನೆಯ ದರ್ಜೆಯ ಸ್ಥಾನಮಾನಗಳಿಗೆ ತಳ್ಳಿ ಬಿಡಲಾಗುವುದಿಲ್ಲ.

೩. ಪ್ರತಿಯೊಂದು ಭಾಷೆ ಕೂಡ ಹೊಸ ಹೊಸ ಕ್ಷೇತ್ರಗಳಲ್ಲಿ ಸೂಕ್ತವಾದ ಸಾಂದರ್ಭಿಕ ಭಾಷೆಗಳನ್ನು ಬೆಳೆಸಿಕೊಳ್ಳಬಲ್ಲದು. ಎಂದರೆ ಅಗತ್ಯವಾದ ಶೈಲಿ ಮತ್ತು ಪರಿಭಾಷೆಯನ್ನು ರೂಪಿಸಿಕೊಳ್ಳುವ ಶಕ್ತಿಯು ಅದಕ್ಕೆ ಇರುತ್ತದೆ. ಆದರೆ ಈ ಕೆಲಸವು ಸಾಧ್ಯವಾಗಲು, ಆ ಭಾಷೆಯನ್ನು ಬಳಸುವ ಜನರು ಸರಿಯಾದ ರೀತಿಯಲ್ಲಿ ಪ್ರಯತ್ನಿಸಬೇಕು. ಆಗ ಮಾತ್ರ ಇಂಥ ಕೆಲಸ ಸಾಧ್ಯವಾಗುತ್ತದೆ. ಭಾಷೆಯ ಮುಂಚಲನೆ ಮತ್ತು

ಬೆಳವಣಿಗೆಗಳು ಒಟ್ಟೊಟ್ಟಿಗೆ ನಡೆಯಬೇಕು. ಒಂದು ಇನ್ನೊಂದಕ್ಕಿಂತ ಮೊದಲು ಅಥವಾ ನಂತರ ಸಾಧ್ಯವಿಲ್ಲ. ಎಂದರೆ ಒಂದು ಭಾಷೆ ಎಷ್ಟು ಸಮರ್ಥವಾದುದು ಅಥವಾ ದುರ್ಬಲ ವಾದುದು ಎಂಬ ವಿಷಯವು ಅದನ್ನು ಬಳಸುತ್ತಿರುವವರಿಂದಲೇ ತೀರ್ಮಾನವಾಗುತ್ತದೆ.

೪. ಯಾವುದೇ ಒಂದು ಹೊಸ ಕ್ಷೇತ್ರದಲ್ಲಿ ಭಾಷಾ ಬೆಳವಣಿಗೆಯು ಅಂಥ ಬೆಳವಣಿಗೆಗೆ ಅಗತ್ಯವಾದ ಹಾಗೂ ಸಮರ್ಪಕವಾದ ಸನ್ನಿವೇಶಗಳನ್ನು ಉಂಟು ಮಾಡುವುದರಿಂದ ಮಾತ್ರ ಸಾಧ್ಯವಾಗುತ್ತದೆ. ಇಂಥ ಸನ್ನಿವೇಶದ ನಿರ್ಮಾಣವು ಭಾಷಾ ಯೋಜಕರ ಹಾಗೂ ನೀತಿನಿರೂಪಕರ ಜವಾಬ್ದಾರಿ. ಅವರು ತಮ್ಮ ಕೆಲಸವನ್ನು ಮಾಡದಿದ್ದರೆ ಭಾಷೆಯು ಆ ಕ್ಷೇತ್ರದಲ್ಲಿ ಬೆಳೆಯುವುದಿಲ್ಲ. ಅಷ್ಟೇ ಅಲ್ಲ, ಜನರು ಆ ಭಾಷೆಯನ್ನು ಆ ಕ್ಷೇತ್ರದಲ್ಲಿ ಯಾವುದೇ ವಿಧವಾದ ಸಂಕೋಚ ಮತ್ತು ಮುಜುಗರಗಳಿಲ್ಲದೆ ಸಾಕಷ್ಟು ಕಾಲ ಬಳಸಲೇಬೇಕು. ಇಂಥ ಬಳಕೆಯಿಂದಲೇ ಭಾಷೆಗೆ ಸಾಮರ್ಥ್ಯ ಬರುತ್ತದೆ. ಎಂದರೆ ಭಾಷಾ ಅಭಿವೃದ್ಧಿಯನ್ನು ಕುರಿತಂತೆ ಅಗತ್ಯವಾದ ಕ್ರಮಗಳನ್ನು ಕೈಗೊಳ್ಳುವುದು ಅನಿವಾರ್ಯವಾದರೂ ಹಾಗೆ ಮಾಡಿದ ಮರುದಿನ ಬೆಳಿಗ್ಗೆಯೇ ಫಲಿತಾಂಶ ದೊರಕಿ ಬಿಡುತ್ತದೆ ಎಂದು ನಿರೀಕ್ಷಿಸಬಾರದು.

೫. ಒಂದು ನಿರ್ದಿಷ್ಟ ಕ್ಷೇತ್ರದಲ್ಲಿ ಆ ಭಾಷೆಯನ್ನು ಇದುವರೆಗೆ ಉಪಯೋಗಿಸಿಲ್ಲ ಎಂದು ಇಟ್ಟುಕೊಳ್ಳೋಣ. ಆಗ ಅಂಥ ಬಳಕೆ ಪ್ರಾರಂಭವಾಗುವುದಕ್ಕಿಂತ ಮೊದಲೇ ಶೈಲಿಗಳ ಮತ್ತು ಪರಿಭಾಷೆಯ ಪ್ರಮಾಣೀಕರಣವು ನಡೆದಿರಬೇಕು ಎಂದು ನಾವು ನಿರೀಕ್ಷಿಸ ಬಾರದು. ಅವೆಲ್ಲವನ್ನೂ ಕರಾರುವಾಕ್ಕಾಗಿ ತೀರ್ಮಾನಿಸಿ ನಂತರ ಭಾಷಾ ಬಳಕೆಗೆ ತೊಡಗುತ್ತೇವೆ ಎನ್ನುವುದು ಸರಿಯಲ್ಲ. ಏಕೆಂದರೆ ಭಾಷೆಯನ್ನು ಆ ಕ್ಷೇತ್ರದಲ್ಲಿ ವ್ಯಾಪಕ ವಾಗಿ ಬಳಸಿದ ನಂತರವೇ ಪ್ರಮಾಣೀಕರಣವು ಸಾಧ್ಯವಾಗುತ್ತದೆ.

೬. ಭಾಷೆಯೊಂದರ ಜೀವಂತತೆ ಹಾಗೂ ಅಭಿವೃದ್ಧಿಯು ಅದನ್ನು ಎಷ್ಟು ವಿಭಿನ್ನ ಕ್ಷೇತ್ರಗಳಲ್ಲಿ ವ್ಯಾಪಕವಾಗಿ, ಪರಿಣಾಮಕಾರಿಯಾಗಿ ಬಳಸಬಹುದು ಎನ್ನುವುದರಿಂದಲೇ ತೀರ್ಮಾನವಾಗುತ್ತದೆ. ಸಮಾಜ, ಜೀವನ, ಶಿಕ್ಷಣ, ಸರ್ಕಾರ, ನ್ಯಾಯಾಲಯಗಳು ವಾಣಿಜ್ಯ, ಕೈಗಾರಿಕೆ, ರಕ್ಷಣೆ, ನೀತಿನಿರೂಪಕ ವಲಯಗಳು ಮುಂತಾದ ಹತ್ತು ಹಲವು ವಲಯಗಳಲ್ಲಿ ಇಂಥ ಬಳಕೆಯು ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಪರಸ್ಪರ ಪೂರಕವಾಗಿ ಬಳಸುವುದರಿಂದ ಸಾಧ್ಯವಾಗಬಲ್ಲುದು. ಎಂದರೆ ಒಂದು ಕ್ಷೇತ್ರದಲ್ಲಿ ಒಂದು ಭಾಷೆ ಯನ್ನು, ಮತ್ತೊಂದು ಕ್ಷೇತ್ರದಲ್ಲಿ ಬೇರೊಂದು ಭಾಷೆಯನ್ನು ಬಳಸುವುದರಲ್ಲಿ ತಪ್ಪೇನೂ ಇಲ್ಲ.

೭. ಬೃಹತ್ ಪ್ರಮಾಣದಲ್ಲಿ ಶೈಕ್ಷಣಿಕ ಪ್ರಗತಿಯನ್ನು ಸಾಧಿಸುವ ಕೆಲಸದಲ್ಲಿ ಭಾಷಾಬೆಳವಣಿಗೆಯು ಕೇಂದ್ರ ಸ್ಥಾನವನ್ನು ಹೊಂದಿರುತ್ತದೆ. ಅದೇ ರೀತಿಯಲ್ಲಿ ಆರ್ಥಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಬೆಳವಣಿಗೆಗೆ ತಳಹದಿಯಂತೆ ಕೆಲಸ ಮಾಡುವುದು

ಶೈಕ್ಷಣಿಕ ಪ್ರಗತಿಯೇ ಆಗಿದೆ. ಹೀಗೆ ದೇಶದ ಪ್ರಗತಿಗೆ ಅನಿವಾರ್ಯವಾದ ಸಂಗತಿಗಳಲ್ಲಿ ಭಾಷೆಯ ಅಭಿವೃದ್ಧಿಯೂ ಒಂದು.

೮. ಜಗತ್ತಿನ ಯಾವ ದೇಶದಲ್ಲಿಯೂ ಕೇವಲ ವಿದೇಶಿ ಭಾಷೆಯೊಂದನ್ನು ಶಿಕ್ಷಣ ಮಾಧ್ಯಮವಾಗಿ ಹೊಂದಿದ್ದು ಆರ್ಥಿಕ ಮತ್ತು ಕೈಗಾರಿಕಾ ಪ್ರಗತಿಯನ್ನು ಸಾಧಿಸಿರುವುದಕ್ಕೆ ಸಾಕ್ಷಿಗಳು ದೊರೆಯುವುದಿಲ್ಲ.

## ಭಾರತದಲ್ಲಿ ಸ್ವಾತಂತ್ರ್ಯಪೂರ್ವ ಶಿಕ್ಷಣ ಮಾಧ್ಯಮ

೧೯೪೭ರಲ್ಲಿ ಭಾರತವು ಸ್ವತಂತ್ರವಾಗುವ ವೇಳೆಗೆ, ಸುಮಾರು ಮೂವತ್ತು ವರ್ಷಗಳ ಹಿಂದಿನಿಂದಲೇ ಶಿಕ್ಷಣ ಮಾಧ್ಯಮದ ವ್ಯವಸ್ಥೆಗೆ ಒಂದು ಪರಿಹಾರವನ್ನು ಕಂಡುಕೊಳ್ಳಲಾಗಿತ್ತು. ಆ ವಿಷಯದಲ್ಲಿ ಸ್ಥಿರತೆ ನೆಲೆಸಿತ್ತು. ಪ್ರಾಥಮಿಕ ಶಾಲೆಯಿಂದ ಪ್ರೌಢ ಶಾಲಾ ಶಿಕ್ಷಣದ ಮುಕ್ತಾಯದವರೆಗೆ ಎಲ್ಲ ತರಗತಿಗಳಲ್ಲೂ ಮಾತೃಭಾಷೆ ಅಥವಾ ಪ್ರಬಲವಾದ ಪ್ರಾದೇಶಿಕ ಭಾಷೆಯು ಶಿಕ್ಷಣ ಮಾಧ್ಯಮವಾಗಿರುತ್ತಿತ್ತು. ಈ ಮಾತಿಗೆ ಇಂಗ್ಲಿಷಿನವರು ಮತ್ತು ಅತಿ ಶ್ರೀಮಂತ ಭಾರತೀಯರು ವಿದ್ಯಾಭ್ಯಾಸ ಮಾಡುವ ಕೆಲವೇ ಕೆಲವು ಶಾಲೆಗಳು ಅಪವಾದವಾಗಿದ್ದವು. ಐದು ಅಥವಾ ಆರನೆಯ ತರಗತಿಯಿಂದ ಇಂಗ್ಲಿಷನ್ನು ಒಂದು ಪಠ್ಯ ವಿಷಯವಾಗಿ ಕಲಿಸುತ್ತಿದ್ದರು. ಮೆಟ್ರಿಕ್ ನಂತರದ ಪದವಿಪೂರ್ವ ತರಗತಿಗಳು, ಪದವಿ ತರಗತಿಗಳು ಮತ್ತು ಸ್ನಾತಕೋತ್ತರ ತರಗತಿಗಳಲ್ಲಿ ಇಂಗ್ಲಿಷ್ ಒಂದೇ ಶಿಕ್ಷಣ ಮಾಧ್ಯಮವಾಗಿತ್ತು. ಆಧುನಿಕ ಭಾರತೀಯ ಭಾಷೆಗಳು ಮತ್ತು ಸಂಸ್ಕೃತ ಹಾಗೂ ಪರ್ಷಿಯನ್ ಅಂಥ ಪ್ರಾಚೀನ ಭಾಷೆಗಳನ್ನು ಮಾತ್ರ ಆಯಾ ಭಾಷೆಗಳಲ್ಲಿಯೇ ಕಲಿಸುತ್ತಿದ್ದರು. ಸುಮಾರು ೧೯೨೦ರ ವೇಳೆಗೆ ಇಂಥ ಒಂದು ವ್ಯವಸ್ಥೆಯು ಜಾರಿಗೆ ಬಂದಿತ್ತು. ಆದರೆ ಅದಕ್ಕೆ ಮುಂಚಿನ ನೂರು ವರ್ಷಗಳ ಕಾಲ ಆ ಬಗ್ಗೆ ಸಾಕಷ್ಟು ವಾದ ವಿವಾದಗಳು ನಡೆದಿದ್ದವು. ಎಲ್ಲರೂ ಅತ್ಯಂತ ತೃಪ್ತಿಕರವೆಂದು ಒಪ್ಪಿಕೊಂಡ ಈ ಮಾದರಿಯು ಪ್ರಾದೇಶಿಕ ಪ್ರಭುತ್ವಗಳ ಕಾಲದಲ್ಲಿ ಇನ್ನಷ್ಟು ಬಲವಾಗಿ ರೂಪಿತವಾಯಿತು.

ಒಂದು ಶತಮಾನ ಕಾಲ ನಡೆದ ಆ ವಾಗ್ವಾದವನ್ನು ಸಂಕ್ಷಿಪ್ತವಾಗಿ ಪರಿಶೀಲಿಸುವುದು ಉಪಯುಕ್ತ ಮತ್ತು ಆಸಕ್ತಿಕರ. ಓರಿಯಂಟಲಿಸ್ಟರು ಪ್ರಾಚೀನ ಶಿಕ್ಷಣ ಕ್ರಮವನ್ನು ಪುನರುಜ್ಜೀವನಗೊಳಿಸಬೇಕು ಹಾಗೂ ಬೆಳೆಸಬೇಕೆಂದು ಇಷ್ಟಪಡುತ್ತಿದ್ದರು. ಹಾಗೆ ಮಾಡಲು ಸಂಸ್ಕೃತ ಮತ್ತು ಪರ್ಷಿಯನ್ ಭಾಷೆಗಳನ್ನು ಬಳಸಬೇಕೆಂದು ಅವರ ಅಭಿಪ್ರಾಯ. ಇಂಗ್ಲಿಷ್ ಪರವಾದದವರು ಯುರೋಪಿನಲ್ಲಿ ರೂಪಿತವಾದ ವಿಜ್ಞಾನ ಸಾಹಿತ್ಯ ಮತ್ತು ತತ್ವಶಾಸ್ತ್ರಗಳ ತಿಳುವಳಿಕೆಯನ್ನು ಭಾರತೀಯರಿಗೆ ಇಂಗ್ಲಿಷ್ ಮಾಧ್ಯಮದ ಮೂಲಕ ತಲುಪಿಸಬೇಕೆಂದು ವಾದಿಸುತ್ತಿದ್ದರು. ಪ್ರಾದೇಶಿಕ ಭಾಷೆಗಳ ಪರವಾಗಿ ವಾದಿಸುವವರು ಅವುಗಳೇ ಶಿಕ್ಷಣ ಮಾಧ್ಯಮವಾಗಬೇಕೆಂದು ಬಯಸುತ್ತಿದ್ದರು. ಹಾಗೆ ಮಾಡುವುದರಿಂದ ಮಾತ್ರ ಆಧುನಿಕ ಜ್ಞಾನವು ಜನಸಮುದಾಯವನ್ನು ತಲುಪಬಲ್ಲುದೆಂದು ಅವರ ವಾದ. ಓರಿಯಂಟಲ್ ವಿದ್ವಾಂಸರೂ, ದೊಡ್ಡ ಸಮಾಜ ಸುಧಾರಕರೂ ಆಗಿದ್ದ

ರಾಜಾ ರಾಮಮೋಹನರಾಯ್ ಅವರು ೧೮೨೩ರಲ್ಲಿಯೇ ಯುರೋಪಿಯನ್ ಜ್ಞಾನವನ್ನು ಇಂಗ್ಲಿಷ್ ಮೂಲಕ ವಿತರಣೆ ಮಾಡುವುದನ್ನು ಬೆಂಬಲಿಸಿದರು. ಈ ವಾಗ್ವಾದಗಳಲ್ಲಿ ಅನೇಕ ಇಂಗ್ಲಿಷ್ ವಿದ್ವಾಂಸರು ಮತ್ತು ಹಿರಿಯ ಅಧಿಕಾರಿಗಳು ಪಾಲುಗೊಂಡರು. ಈ ಇಂಗ್ಲಿಷರ, ಭಾರತೀಯ ಅನುಯಾಯಿಗಳು ಜತೆಯಲ್ಲಿಯೇ ಇದ್ದರು.

ಕೊನೆಗೂ ಇಂಗ್ಲಿಷ್ ಪರವಾದವರ ವಾದಕ್ಕೆ ಗೆಲುವು ಸಿಕ್ಕಿತು. ೧೮೩೫ರ ಮಾರ್ಚ್ ೭ನೇ ತಾರೀಖು ಲಾರ್ಡ್ ವಿಲಿಯಂ ಬೆಂಟಿಂಕ್ ಒಂದು ಸರ್ಕಾರಿ ಆದೇಶವನ್ನು ಹೊರಡಿಸಿದರು. ಅದರ ಪ್ರಕಾರ ಶಿಕ್ಷಣಕ್ಕೆಂದು ಮೀಸಲಾದ ಎಲ್ಲ ಹಣವನ್ನು ಇಂಗ್ಲಿಷ್ ಮಾಧ್ಯಮದಲ್ಲಿ ನೀಡಲಾಗುವ ಶಿಕ್ಷಣಕ್ಕೆ ಮಾತ್ರ ಖರ್ಚು ಮಾಡಬೇಕಾಗಿ ಬಂತು. ಸರ್ಕಾರವು ಈ ತೀರ್ಮಾನಕ್ಕೆ ಬರುವುದಕ್ಕೆ ೧೮೩೫ರ ಫೆಬ್ರವರಿ ೨ರಂದು ಥಾಮಸ್ ಮೆಕಾಲೆಯವರು ಸಲ್ಲಿಸಿದ ಪ್ರಸಿದ್ಧ ವರದಿಯು ಆಧಾರವಾಗಿತ್ತು. ಮೆಕಾಲೆ ವರದಿಯಿಂದ ಆಯ್ದಿರುವ ಕೆಳಗಿನ ಮಾತು ಶಕ್ತಿಶಾಲಿಯೂ, ಭವಿಷ್ಯ ಸೂಚಕವೂ ಆಗಿದೆ.

“ನಾವು ಈಗ ಇಂಥ ಒಂದು ಜನವರ್ಗವನ್ನು ರೂಪಿಸಲು ಸಾಧ್ಯವಾದಷ್ಟು ಪ್ರಯತ್ನ ಪಡಬೇಕು. ಆ ವರ್ಗಕ್ಕೆ ಸೇರಿದವರು ನಮಗೂ, ನಮ್ಮಿಂದ ಆಳಲ್ಪಡುತ್ತಿರುವ, ಕೋಟಿ ಗಟ್ಟಲೆ ಜನರಿಗೂ ನಡುವಿನ ದುಭಾಷಿಗಳಂತೆ ಕೆಲಸ ಮಾಡಬೇಕು....ಅವರು ಬಣ್ಣ ಮತ್ತು ರಕ್ತದಲ್ಲಿ ಮಾತ್ರ ಭಾರತೀಯರು. ಆದರೆ ತಮ್ಮ ಅಭಿರುಚಿಗಳು ಅಭಿಪ್ರಾಯಗಳು ನೀತಿಗಳು ಹಾಗೂ ಬೌದ್ಧಿಕತೆಗಳಲ್ಲಿ ಅವರು ಇಂಗ್ಲಿಷರಾಗಿರಬೇಕು.”

ಪ್ರಾದೇಶಿಕ ಭಾಷೆಗಳನ್ನು ‘ದುರ್ಬಲ ಮತ್ತು ರೂಕ್ಷ’ ಎಂದು ಕರೆಯುವುದರಲ್ಲಿ ಹಾಗೂ ಸಂಸ್ಕೃತದಲ್ಲಿರುವ ಶ್ರೀಮಂತ ಶಾಸ್ತ್ರಸಾಹಿತ್ಯವನ್ನು ಪಕ್ಕಕ್ಕೆ ತಳ್ಳಿಬಿಡುವುದರಲ್ಲಿ ಮೆಕಾಲೆ ತಲೆಹರಟೆ ಮಾಡಿದ್ದಾನೆ ನಿಜ. ಆದರೂ ಭಾರತದಲ್ಲಿ ಇಂಗ್ಲಿಷ್ ಭಾಷೆಯ ಮೂಲಕ ಶಿಕ್ಷಣ ಕ್ರಮವನ್ನು ಮೊದಲು ಮಾಡಿದ್ದು ಮೆಕಾಲೆ ಎನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ. ಆದರೆ ಈಸ್ಟ್ ಇಂಡಿಯಾ ಕಂಪೆನಿಯ ದೊಡ್ಡ ಅಧಿಕಾರಿಯಾಗಿದ್ದ ಬ್ರಯಾನ್ ಹಾಜ್‌ಸನ್ ಮತ್ತು ದೊಡ್ಡ ವಿದ್ವಾಂಸನಾದ ಜಾನ್ ವಿಲ್ಸನ್ ಪ್ರಾದೇಶಿಕ ಭಾಷೆಯ ಪರವಾಗಿ ವಾದಿಸಿದರು. ಈ ವಾಗ್ವಾದವು ೧೮೫೪ರ ವರೆಗೆ ಮುಂದುವರಿಯಿತು. ಆಗ ಭಾರತದ ಗೌರ್ನರ್ ಜನರಲ್ ಅವರ ನಿರ್ದೇಶಕ ಮಂಡಲಿ ಶಿಕ್ಷಣಕ್ಕೆ ಸಂಬಂಧಿಸಿದ ಆದೇಶ ಒಂದನ್ನು ಹೊರಡಿಸಿತು. ಈ ಆದೇಶಕ್ಕೆ ಮಂಡಳಿಯ ಅಧ್ಯಕ್ಷರಾದ ಸರ್ ಚಾರ್ಲ್ಸ್ ಉಡ್ ಅವರ ಸಹಿಯಿತ್ತು. ಇದು ಶಿಕ್ಷಣ ಮಾಧ್ಯಮವಾಗಿ ಪ್ರಾದೇಶಿಕ ಭಾಷೆಗಳನ್ನು ವ್ಯಾಪಕವಾಗಿ ಬಳಸಬೇಕೆಂದು ಸರ್ಕಾರದ ಮೇಲೆ ಒತ್ತಾಯ ತಂದಿತು. ಹೀಗೆ ಮಾಡುವುದರಿಂದ ಸಮಾಜದ ಮಧ್ಯಮ ಮತ್ತು ಕೆಳವರ್ಗಗಳವರಿಗೆ ಅನುಕೂಲವಾಗುವುದೆಂದು ಅವರ ಅಭಿಪ್ರಾಯ. ಶಿಕ್ಷಣದಲ್ಲಿ ಪ್ರಾದೇಶಿಕ ಭಾಷೆಗಳ ಬಳಕೆಗೆ ಸಂಬಂಧಿಸಿದಂತೆ ಈ ಆದೇಶವು ಒಂದು ಮೈಲಿಗಲ್ಲು ಆಗಿದೆ. ಆದರೆ ಈ

ಮಂಡಳಿಯ ಶಿಫಾರಸ್ಸುಗಳನ್ನು ನಂತರದ ಏಳು ದಶಕಗಳ ಕಾಲ ಪ್ರಾಮಾಣಿಕತೆಯಿಂದ ಜಾರಿಗೆ ತರಲಿಲ್ಲ.

೧೮೫೭ರ ಸಿಪಾಯಿ ದಂಗೆಯ ನಂತರ ಭಾರತದ ಆಡಳಿತವು ಬ್ರಿಟಿಷ್ ಚಕ್ರವರ್ತಿಯ ನೇರ ಹೊಣೆಯಾಯಿತು. ೧೮೮೨ರಲ್ಲಿಯೂ ಶೇ. ೬೦ ರಷ್ಟು ಪ್ರಾಥಮಿಕ ಶಾಲೆಗಳಲ್ಲಿ ಇಂಗ್ಲಿಷ್ ಶಿಕ್ಷಣ ಮಾಧ್ಯಮವಾಗಿತ್ತು. ೧೮೯೮-೧೯೦೫ರ ಅವಧಿಯಲ್ಲಿ ಭಾರತದ ವೈಸರಾಯರಾಗಿದ್ದ ಲಾರ್ಡ್ ಕರ್ಜನ್ ಜಾರಿಗೆ ತಂದ ಶಿಕ್ಷಣ ನೀತಿಯು ಈ ಶತಮಾನದ ಮೊದಲ ಭಾಗದಲ್ಲಿ ಶಿಕ್ಷಣ ಮಾಧ್ಯಮಕ್ಕೆ ಸಂಬಂಧಪಟ್ಟಂತೆ ಅನೇಕ ತೀವ್ರಗತಿಯ ಬದಲಾವಣೆಗಳನ್ನು ಜಾರಿಗೆ ತಂದಿತು. ಇದರೊಂದಿಗೆ ಆ ವೇಳೆಗೆ ಪ್ರಾರಂಭವಾಗಿದ್ದ ರಾಷ್ಟ್ರೀಯ ಚಳುವಳಿಯು ತನ್ನದೇ ಆದ ಪಾತ್ರ ವಹಿಸಿತ್ತು. ತನ್ನ ಉಪನ್ಯಾಸಗಳಲ್ಲಿ ಕರ್ಜನ್ ಹೇಳಿದ ಕೆಲವು ಮಾತುಗಳು ಈ ರೀತಿ ಇವೆ:

"ಮಕಾಲೆಯ ವಾಗ್ವಿಲಾಸದ ತಣ್ಣಗೆ ಕೊರೆಯುವ ಗಾಳಿಯು ಭಾರತೀಯ ಭಾಷೆಗಳು ಮತ್ತು ಪುಸ್ತಕಗಳ ಮೇಲೆ ಬೀಸಿದ ತರುವಾಯ ಜನರಿಗೆ ತಮ್ಮದೇ ಆದ ಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಪಡೆಯುವುದು ಕೂಡ ಅಸಾಧ್ಯವಾಯಿತು. ಇಂದು ಅಂಥ ವ್ಯವಸ್ಥೆಯು ಒಣಗಿ ಹೋಗಿದೆ, ನರಳುತ್ತಿದೆ. ಪ್ರಾಥಮಿಕ ಶಿಕ್ಷಣವು ಎದುರಿಸಬೇಕಾಗಿರುವ ಮುಖ್ಯ ಅಡಚಣೆಯು ಜನಸಮುದಾಯದಿಂದಲೇ ಮೂಡಿ ಬರುತ್ತದೆ. ಅವರು ಸಾಮಾಜಿಕ ಶ್ರೇಣಿಯಲ್ಲಿ ಮೇಲೆ ಹೋದಂತೆಲ್ಲ ತಮ್ಮ ಮಕ್ಕಳು ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಯಬೇಕೆಂದು ಇಷ್ಟಪಡುತ್ತಾರೆ."

"ಒಳ್ಳೆಯದು. ಇಂಗ್ಲಿಷನ್ನು ಕಲಿಯುವ ಅರ್ಹತೆ ಇರುವವರಿಗೆಲ್ಲ ಅದನ್ನು ಕಲಿಸೋಣ. ಆದರೆ ಪ್ರಾದೇಶಿಕ ಭಾಷೆಗಳಲ್ಲಿ ಭದ್ರವಾದ ಅಡಿಪಾಯ ಬಿದ್ದ ನಂತರವೇ ಇಂಗ್ಲಿಷ್ ಕಲಿಕೆಯು ಪ್ರಾರಂಭವಾಗಬೇಕು. ಏಕೆಂದರೆ ತನ್ನ ಭಾಷೆಯನ್ನು ಸಲೀಸಾಗಿ ಉಪಯೋಗಿಸಲಾರದ ಯಾವುದೇ ಜನಸಮುದಾಯವೂ ಇನ್ನೊಂದು ಭಾಷೆಯನ್ನು ಸಮರ್ಥವಾಗಿ ಉಪಯೋಗಿಸಲಾರದು."

"ಶಾಲೆಗಳಲ್ಲಿ ದೇಶ ಭಾಷೆಗಳ ಶಿಕ್ಷಣವನ್ನು ಬಹಳ ಚೆನ್ನಾಗಿ ಕೊಡಬೇಕು. ಹಾಗೆ ಮಾಡದೆ ಹೋದರೆ ವಿಶ್ವವಿದ್ಯಾಲಯ ಮಟ್ಟದಲ್ಲಿ ನಡೆಸುವ ಎಲ್ಲ ಪ್ರಯತ್ನಗಳೂ ವಿಫಲವಾಗುತ್ತವೆ."

೧೯೧೭ರ ಫೆಬ್ರುವರಿ ೨೧ನೇ ದಿನಾಂಕದಂದು ಭಾರತ ಸರಕಾರವು ಶೈಕ್ಷಣಿಕ ನೀತಿಗೆ ಸಂಬಂಧಪಟ್ಟಂತೆ ತೆಗೆದುಕೊಂಡ ತೀರ್ಮಾನವು ಬಹಳ ಮಹತ್ವಪೂರ್ಣವಾದದ್ದು. ಅದರ ಪ್ರಕಾರ ದೇಶದಲ್ಲಿ ಅನೇಕ ಕಡೆ ಪ್ರಾಥಮಿಕ ಹಂತದಿಂದ ಪ್ರೌಢಶಾಲೆಯವರೆಗೆ, ದೇಶ ಭಾಷೆಗಳಲ್ಲಿ ಕಲಿಸುವ ಶಾಲೆಗಳು ಪ್ರಾರಂಭವಾದವು. ಆ ನಿರ್ಣಯವು ಹೀಗೆ ಹೇಳುತ್ತದೆ. "ದೇಶ ಭಾಷೆಗಳಲ್ಲಿ ಸಮಗ್ರವಾದ ತರಬೇತಿಯನ್ನು ಪಡೆದಿರುವ ವಿದ್ವಾಂಸರು

ಬೌದ್ಧಿಕವಾಗಿ ಅತ್ಯಂತ ಸಮರ್ಥರಾಗಿರುವರೆಂಬ ಸಂಗತಿಯನ್ನು ನಾವು ವಿಪುಲವಾದ ಅನುಭವದಿಂದ ತಿಳಿದುಕೊಂಡಿದ್ದೇವೆ."

೧೯೧೭ರಲ್ಲಿ ಸರ್ ಮೈಕೆಲ್ ಸ್ಯಾಡ್ಲರ್ ಅವರ ಅಧ್ಯಕ್ಷತೆಯಲ್ಲಿ ಒಂದು ನಿಯೋಗವು ಸ್ಥಾಪಿತವಾಯಿತು ಕಲ್ಕತ್ತಾ ವಿಶ್ವವಿದ್ಯಾಲಯದ ವಿದ್ಯಮಾನಗಳನ್ನು ಪರಿಶೀಲಿಸುವುದು ಅವರ ನಿರ್ದಿಷ್ಟ ಕೆಲಸವಾಗಿತ್ತು. ಸ್ಥೂಲವಾಗಿ ಶಿಕ್ಷಣಕ್ಕೆ ಸಂಬಂಧ ಪಟ್ಟ ಮುಖ್ಯ ಸಮಸ್ಯೆಗಳನ್ನು ಪರಿಶೀಲಿಸುವುದು ಕೂಡ ಆ ಸಮಿತಿಯ ವ್ಯಾಪ್ತಿಯೊಳಗೆ ಇತ್ತು. ಶಿಕ್ಷಣ ಮಾಧ್ಯಮದ ಸಮಸ್ಯೆಯನ್ನು ಗಮನವಿಟ್ಟು ಪರಿಶೀಲಿಸಿದ ಆ ಸಮಿತಿಯ ವರದಿಯು ಹೀಗೆ ಹೇಳುತ್ತದೆ:

"ಈ ವಿಷಯದ ಬಗ್ಗೆ ನಮಗೆ ಯಾವ ಅನುಮಾನವೂ ಇಲ್ಲ. ತರುಣನೊಬ್ಬ ತನ್ನ ಶಿಕ್ಷಣವನ್ನು ಮುಗಿಸಿದ ನಂತರ, ತನ್ನ ತಾಯಿನುಡಿಯಲ್ಲಿ ಸರಿಯಾಗಿ ಮತ್ತು ಸುಗಮವಾಗಿ ಓದಿ ಬರೆಯುವ ಶಕ್ತಿಯನ್ನು ಸಂಪಾದಿಸುವಂತೆ ಮಾಡದ ಇರುವ ಶಿಕ್ಷಣ ವ್ಯವಸ್ಥೆಯಲ್ಲಿ ಏನೋ ಒಂದು ದೋಷವಿದೆ. ಆದ್ದರಿಂದ ಇನ್ನು ಮೇಲೆ ಪ್ರೌಢಶಾಲೆ, ಪದವಿಪೂರ್ವ ಹಂತ ಮತ್ತು ವಿಶ್ವವಿದ್ಯಾಲಯಗಳಲ್ಲಿ ದೇಶ ಭಾಷೆಗಳ ಅಧ್ಯಯನವನ್ನು ಗಂಭೀರವಾಗಿ ನಡೆಸಲು ನೆರವಾಗುವ ಎಲ್ಲ ಕ್ರಮಗಳನ್ನು ತೆಗೆದುಕೊಳ್ಳಬೇಕೆನ್ನುವುದು ನಿರ್ವಿವಾದವಾದ ಸಂಗತಿ." ಈ ವರದಿಯ ಫಲವಾಗಿ ೧೯೨೦ ರ ನಂತರ ಇಡೀ ದೇಶದಲ್ಲಿ ಇಂಗ್ಲಿಷ್ ಮಾಧ್ಯಮವು ಕೇವಲ ಕಾಲೇಜುಗಳು ಮತ್ತು ವಿಶ್ವವಿದ್ಯಾಲಯಗಳಿಗೆ ಸೀಮಿತವಾಯಿತು.

**ಶಿಕ್ಷಣ ಮಾಧ್ಯಮದ ಕ್ಷೇತ್ರದಲ್ಲಿ ಸ್ವಾತಂತ್ರ್ಯೋತ್ತರ ಸನ್ನಿವೇಶ**

ವಸಾಹತು ಶಾಹಿಯಿಂದ ಬಿಡುಗಡೆ ಪಡೆದ ಎಲ್ಲ ದೇಶಗಳು ಎದುರಿಸಿದ ಮುಖ್ಯ ಸಮಸ್ಯೆಯೆಂದರೆ ರಾಷ್ಟ್ರಭಾಷೆಯೊಂದನ್ನು ಗುರುತಿಸಿಕೊಳ್ಳುವುದು. ಕೇವಲ ರಾಷ್ಟ್ರೀಯ ಭಾವನೆ ಮತ್ತು ಏಕತೆಗಳ ಪ್ರತೀಕವಾಗಿ ಅಲ್ಲ. ಪರಸ್ಪರ ಸಂವಹನಕ್ಕೆ ಅಗತ್ಯವಾದ ಮಾಧ್ಯಮವಾಗಿ. ಪಾಕಿಸ್ಥಾನ, ಬರ್ಮಾ, ಶ್ರೀಲಂಕಾ ಮುಂತಾದ ಚಿಕ್ಕ ರಾಷ್ಟ್ರಗಳು ಈ ಸಮಸ್ಯೆಯನ್ನು ಸುಲಭವಾಗಿ ಪರಿಹರಿಸಿಕೊಂಡವು. ಆದರೆ ಬೇರೆ ಬೇರೆ ಭಾಷೆಗಳನ್ನು ಬಳಸುವ ಜನಸಮುದಾಯಗಳನ್ನು ಗಮನೀಯ ಪ್ರಮಾಣದಲ್ಲಿ ಹೊಂದಿರುವ ದೊಡ್ಡ ರಾಷ್ಟ್ರಗಳಲ್ಲಿ ಈ ಸಮಸ್ಯೆಯು ಜಟಿಲವೂ ಸಂಕೀರ್ಣವೂ ಆಯಿತು. ಸಮಸ್ಯೆಗಳ ಸಂಕೀರ್ಣತೆಯ ದೃಷ್ಟಿಯಿಂದ ಯಾವುದೇ ಎರಡು ದೇಶಗಳನ್ನು ಹೋಲಿಸುವುದು ಸಾಧ್ಯವಿಲ್ಲ. ಆಫ್ರಿಕಾದ ರಾಷ್ಟ್ರಗಳು ಮತ್ತು ಭಾರತದ ಬಹುಭಾಷಿಕ ಹಾಗೂ ಬಹುಜನಾಂಗಿಕ ಸಮುದಾಯಗಳು ಇಂಥ ಕಡೆ ಒಂದೇ ಭಾಷೆಯು ಸಂವಹನ ಮಾಧ್ಯಮವಾಗಿ ಕೆಲಸ ಮಾಡುವುದು ಕಷ್ಟ. ಹಾಗೆ ನೋಡಿದರೆ ಈ ವಿಷಯದಲ್ಲಿ ಭಾರತದ ಪರಿಸ್ಥಿತಿಯು ಸ್ವಲ್ಪ ವಾಸಿ. ಏಕೆಂದರೆ ಇಲ್ಲಿ ಪ್ರಧಾನವಾಗಿ ೧೪ ಆಧುನಿಕ ಭಾಷೆಗಳಿವೆ. ಅವುಗಳನ್ನು ಬೇರೆ ಬೇರೆ ಭೌಗೋಳಿಕ ಪ್ರದೇಶಗಳಲ್ಲಿ ಬಳಸಲಾಗುತ್ತದೆ. ಅವುಗಳ ನಡುವಿನ ಗಡಿಗೆರೆಗಳನ್ನು ಗುರುತಿಸುವುದು ಸುಲಭ.

೧೯೫೦ರಲ್ಲಿ ಜಾರಿಗೆ ಬಂದ ಭಾರತೀಯ ಸಂವಿಧಾನವು ಸಂಸ್ಕೃತವೂ ಸೇರಿದಂತೆ ೧೫ ಭಾಷೆಗಳನ್ನು ಭಾರತದ ಭಾಷೆಗಳೆಂದು ಗುರುತಿಸಿತು. ಭಾರತದ ಅಧಿಕೃತ ಭಾಷೆಯೆಂದು ಗುರುತಿಸಲಾದ ಹಿಂದಿಯ ಜೊತೆಗೆ ಇಂಗ್ಲಿಷ್ ಕೂಡ ಸಹ–ಅಧಿಕೃತ ಭಾಷೆಯ ಸ್ಥಾನವನ್ನು ಪಡೆಯಿತು. ೧೯೯೧ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆಯ ಶೇ. ೮೭ ಭಾಗ ಈ ೧೫ ಭಾಷೆಗಳಲ್ಲಿ ಮಾತನಾಡುತ್ತಾರೆ. ೧೯೫೬ರಲ್ಲಿ ಭಾಷಾವಾರು ಪ್ರಾಂತ್ಯಗಳು ರಚಿತವಾದವು. ೧೯೪೮ರಲ್ಲಿ ಸ್ಥಾಪಿತವಾದ ಶಿಕ್ಷಣ ಆಯೋಗದ ವರದಿಯು ಇತರ ಅನೇಕ ಸಂಗತಿಗಳ ಜತೆಗೆ ಶಿಕ್ಷಣ ಮಾಧ್ಯಮದ ಬಗ್ಗೆ ಈ ರೀತಿಯ ಸೂಚನೆ ಕೊಟ್ಟಿತು.

"ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಉನ್ನತ ಶಿಕ್ಷಣದ ಹಂತದಲ್ಲಿ ಇಂಗ್ಲಿಷನ್ನು ತೆಗೆದುಹಾಕಿ ಅದರ ಜಾಗದಲ್ಲಿ ಯಾವುದಾದರೊಂದು ಭಾರತೀಯ ಭಾಷೆಯನ್ನು ಶಿಕ್ಷಣ ಮಾಧ್ಯಮವಾಗಿ ಜಾರಿಗೆ ತರಬೇಕು" ೧೯೬೪ ರಿಂದ ೧೯೬೬ರ ವರೆಗೆ ಕೆಲಸ ಮಾಡಿದ ಮತ್ತೊಂದು ಶಿಕ್ಷಣ ಆಯೋಗವು ಮಾಧ್ಯಮದ ಪ್ರಶ್ನೆಯನ್ನು ವಿವರವಾಗಿ ಚರ್ಚಿಸಿ, ಎಲ್ಲ ಹಂತಗಳಲ್ಲಿಯೂ ಶಿಕ್ಷಣ ಮತ್ತು ಪರೀಕ್ಷೆಗಳಿಗಾಗಿ ಮಾತೃಭಾಷೆ, ಪ್ರಾದೇಶಿಕ ಭಾಷೆಗಳನ್ನೇ ಬಳಸಬೇಕೆಂದು ಖಡಾಖಂಡಿತವಾಗಿ ಹೇಳಿತು. ಆದರೆ ಇಂಗ್ಲೀಷನ್ನು ಒಂದು ವಿಷಯವಾಗಿ ಹಾಗೂ ಗ್ರಂಥಾಲಯ ಭಾಷೆಯಾಗಿ ಉನ್ನತ ಹಂತಗಳಲ್ಲಿಯೂ ಕಲಿಸಬೇಕೆಂದು ಅದು ಶಿಫಾರಸ್ಸು ಮಾಡಿತು.

ಈ ಶಿಕ್ಷಣ ನೀತಿಯನ್ನು ಅನೇಕ ರಾಜ್ಯಗಳಲ್ಲಿ ಹಸಿಬಿಸಿಯಾಗಿ ಜಾರಿಗೆ ತರಲಾಯಿತು. ಅನೇಕ ರಾಜ್ಯಗಳು ಕಲೆ ಹಾಗೂ ವಿಜ್ಞಾನಗಳ ಸ್ನಾತಕ ಹಂತಗಳಲ್ಲಿ ಇಂಗ್ಲಿಷ್ ಜೊತೆಗೆ ಪ್ರಾದೇಶಿಕ ಭಾಷೆಗಳನ್ನು ಐಚ್ಛಿಕ ಮಾಧ್ಯಮವಾಗಿ ಜಾರಿಗೆ ತಂದವು. ಆದರೆ ವೈದ್ಯಕೀಯ, ಇಂಜಿನಿಯರಿಂಗ್ ಮುಂತಾದ ವೃತ್ತಿ ನಿರತ ವಿಷಯಗಳಲ್ಲಿ ಎಲ್ಲ ಹಂತಗಳಲ್ಲಿ ಇಂಗ್ಲಿಷ್ ಶಿಕ್ಷಣ ಮಾಧ್ಯಮವಾಗಿ ಮುಂದುವರಿಯಿತು. ಶಿಕ್ಷಣ ಮಾಧ್ಯಮದ ಆಯ್ಕೆಯನ್ನು ವಿದ್ಯಾರ್ಥಿಗಳಿಗೆ ಬಿಟ್ಟಿದ್ದರಿಂದ ಎರಡು ರೀತಿಯ ವಿದ್ಯಾರ್ಥಿಗಳು ಮೂಡಿ ಬಂದರು. ಉದ್ಯೋಗ ಮತ್ತು ಸ್ನಾತಕೋತ್ತರ ಶಿಕ್ಷಣಕ್ಕೆ ಸಂಬಂಧಪಟ್ಟಂತೆ ಇಂಗ್ಲಿಷ್ ಮಾಧ್ಯಮದಲ್ಲಿ ಕಲಿತ ವಿದ್ಯಾರ್ಥಿಗಳಿಗೆ ಕೆಲವು ಖಚಿತವಾದ ಅನುಕೂಲಗಳಿದ್ದವು. ಪ್ರಾದೇಶಿಕ ಭಾಷಾಮಾಧ್ಯಮದಲ್ಲಿ ಕಲಿತವರಿಗೆ ಸ್ನಾತಕೋತ್ತರ ಹಂತದಲ್ಲಿ ಇಂಗ್ಲಿಷ್‌ಗೆ ಹೊಂದಿಕೊಳ್ಳುವುದು ಕಷ್ಟವಾಯಿತು. ಆದ್ದರಿಂದ ಪ್ರಾದೇಶಿಕ ಭಾಷಾ ಮಾಧ್ಯಮ ಅದನ್ನು ಆರಿಸಿಕೊಂಡವರಿಗೆ ಎಲ್ಲ ಹಂತಗಳಲ್ಲಿಯೂ ಒಂದು ವರವಾಗುವ ಬದಲು ಶಾಪವೇ ಆಯಿತು. ಇದರ ಫಲವಾಗಿ ಪ್ರಾಥಮಿಕ ಹಂತದಿಂದಲೇ ಇಂಗ್ಲಿಷ್ ಮಾಧ್ಯಮಕ್ಕೆ ಮಹತ್ವ ಕೊಡುವ ಪ್ರವೃತ್ತಿಯು ಕಾಣಿಸಿಕೊಂಡಿದೆ. ಈ ಪ್ರವೃತ್ತಿಯ ಫಲವಾಗಿ ಕಳೆದ ಎರಡು ದಶಕಗಳಲ್ಲಿ ಇಂಗ್ಲಿಷ್ ಪರವಾದ ಒಲವು ಕಾಣಿಸಿಕೊಂಡಿದೆ. ಆದ್ದರಿಂದ ಗ್ರಾಮೀಣ ಪ್ರದೇಶ ಹಾಗೂ ನಗರಗಳಲ್ಲಿ ಇಂಗ್ಲಿಷ್ ಮಾಧ್ಯಮದ ಪ್ರಾಥಮಿಕ ಶಾಲೆಗಳು

ನಾಯಿಕೊಡೆಗಳಂತೆ ತಲೆಯೆತ್ತಿವೆ. ಪ್ರತಿಯೊಂದರಲ್ಲಿಯೂ ಪೂರ್ವಸಿದ್ಧತೆಯಿಲ್ಲದ, ತರಬೇತಿ ಸಾಲದ ಅಧ್ಯಾಪಕರು. ಇಂಥ ಶಾಲೆಗಳಿಂದ ಹೊರಬರುವ ವಿದ್ಯಾರ್ಥಿಗಳಿಗೆ ನಮ್ಮ ತಾಯಿನುಡಿಯ ತಿಳುವಳಿಕೆ ಬಹಳ ಕಮ್ಮಿ. ಅದನ್ನು ಶೈಕ್ಷಣಿಕ ಪರಿಸರದಲ್ಲಿ ಬಳಸುವ ಹಾಗೂ ಅದರ ಬಳಕೆಯ ಹಲವು ಸಂದರ್ಭಗಳನ್ನು ಪರಿಚಯ ಮಾಡಿಕೊಳ್ಳುವ ಅವಕಾಶಗಳು ಮತ್ತಷ್ಟು ಕಡಿಮೆ. ಹೀಗಾಗಿ ಅವರು ಸಾಂಸ್ಕೃತಿಕವಾಗಿ ದಿಕ್ಕುಗೆಟ್ಟಿದ್ದಾರೆ. ಹೊರಗೆ ಉಳಿದಿದ್ದಾರೆ. ತಮ್ಮ ಸುತ್ತಲ ಜಗತ್ತಿನೊಂದಿಗೆ ಅವರ ಸಂಪರ್ಕವು ವಿಕಲವಾಗಿದೆ.

ಭಾರತದ ಕೆಲವು ವಿಶ್ವವಿದ್ಯಾಲಯಗಳಲ್ಲಿನ ಶಿಕ್ಷಣ ಮಾಧ್ಯಮವನ್ನು ಕುರಿತ ಮಾಹಿತಿಯನ್ನು ೧೯೮೭ರಲ್ಲಿ ಪ್ರಕಟವಾದ **The Commonwealth University Year book** ದ ಮೂರನೆಯ ಸಂಪುಟದಲ್ಲಿ ಪಡೆಯಬಹುದು. ಆ ಪಟ್ಟಿಯಲ್ಲಿ ೧೫೪ ಸಂಸ್ಥೆಗಳನ್ನು ಹೆಸರಿಸಲಾಗಿದೆ. ಅವುಗಳಲ್ಲಿ ೮ ಕೇಂದ್ರೀಯ ವಿಶ್ವವಿದ್ಯಾಲಯಗಳು, ೫ ಭಾರತೀಯ ತಂತ್ರಜ್ಞಾನ ಸಂಸ್ಥೆಗಳು, ೨೪ ಕೃಷಿ ಮುಂತಾದ ವೃತ್ತಿಪರ ವಿಶ್ವವಿದ್ಯಾಲಯ ಗಳು. ೨೦ ರಾಷ್ಟ್ರೀಯ ಮಹತ್ವವನ್ನು ಪಡೆದಿರುವ, ವಿಶ್ವವಿದ್ಯಾಲಯಗಳಿಗೆ ಸಮವೆಂದು ಪರಿಗಣಿತವಾಗಿರುವ ಸಂಸ್ಥೆಗಳು. ಉಳಿದ ೯೭ ಹಲವು ವಿಷಯಗಳಲ್ಲಿ ಶಿಕ್ಷಣ ಕೊಡುವ ವಿಶ್ವವಿದ್ಯಾಲಯಗಳು ಮೇಲೆ ಹೆಸರಿಸಿದ ಪುಸ್ತಕದಲ್ಲಿ ದೊರೆಯುವಂತೆ ಬೇರೆ ಬೇರೆ ವಿಶ್ವ ವಿದ್ಯಾಲಯಗಳ ಶಿಕ್ಷಣ ಮಾಧ್ಯಮದ ಬಗೆಗಿನ ಮಾಹಿತಿಯನ್ನು ಈ ಕೆಳಗೆ ಕೊಟ್ಟಿರುವ ಕೋಷ್ಟಕದಲ್ಲಿ ನೋಡಬಹುದು. (ಪುಟ ೧೪೮) ಅನೇಕ ವಿಷಯಗಳಲ್ಲಿ ಶಿಕ್ಷಣ ಕೊಡುವ ೯೭ ವಿಶ್ವವಿದ್ಯಾಲಯಗಳ ಪೈಕಿ ೩೩ರಲ್ಲಿ, ಯಾವ ಮಾಧ್ಯಮದಲ್ಲಿ ಶಿಕ್ಷಣ ದೊರೆಯುತ್ತದೆ ಎನ್ನುವುದನ್ನು ಕುರಿತು ಸರಿಯಾದ ಮಾಹಿತಿ ದೊರೆತಿಲ್ಲ. ಈ ಪಟ್ಟಿಯಲ್ಲಿ ಆಗ್ರ, ಲಕ್ನೊ, ಉತ್ಕಲ, ಗೋವಾ, ಗುಲ್ಬರ್ಗಾ, ಕಾನ್ಪುರ, ಮೀರತ್ ಮುಂತಾದ ಪ್ರಸಿದ್ಧ ವಿಶ್ವವಿದ್ಯಾಲಯಗಳಿವೆ.

ಈ ಪುಸ್ತಕದ ಪೀಠಿಕೆಯಲ್ಲಿ ಶಿಕ್ಷಣ ಮಾಧ್ಯಮದ ಬಗೆಗಿನ ವಿಚಾರಗಳನ್ನು ಈ ರೀತಿ ಸಂಗ್ರಹಿಸಲಾಗಿದೆ.

"ಈಗಾಗಲೇ ವಿವರಿಸಿದಂತೆ, ೧೮೫೭ರಲ್ಲಿ, ಭಾರತದ ಮೊದಲ ಮೂರು ವಿಶ್ವ ವಿದ್ಯಾಲಯಗಳು ಸ್ಥಾಪಿತವಾಗುವುದಕ್ಕಿಂತ ಮುಂಚಿತವಾಗಿಯೇ ಶಿಕ್ಷಣ ಮಾಧ್ಯಮದ ಪ್ರಶ್ನೆಯು ಇಂಗ್ಲಿಷ್ ಪರವಾಗಿ ತೀರ್ಮಾನವಾಗಿತ್ತು. ಆದರೆ ರಾಷ್ಟ್ರೀಯ ಚಳುವಳಿಯ ವಿಕಾಸದೊಂದಿಗೆ ಭಾರತೀಯ ಭಾಷೆಗಳ ಬೆಳವಣಿಗೆಯ ಮೇಲೆ ಸಾಕಷ್ಟು ಒತ್ತು ಬಿತ್ತು. ೧೯೫೦ರಲ್ಲಿ ಜಾರಿಗೆ ಬಂದ ಭಾರತೀಯ ಸಂವಿಧಾನವು ಹಿಂದಿಯನ್ನು ಅಧಿಕೃತ ಭಾಷೆ ಯೆಂದು ಒಪ್ಪಿಕೊಂಡಿತು. ಆದರೂ ಮೊದಲ ಹದಿನೈದು ವರ್ಷಗಳವರೆಗೆ ಇಂಗ್ಲಿಷ್ ಕೂಡ ಅಧಿಕೃತ ಭಾಷೆಯಾಗಿ ಇರಬೇಕೆಂದು ತೀರ್ಮಾನವಾಯಿತು. ೧೯೬೫ರ ಒಳಗೆ ಈ ೧೫ ವರ್ಷಗಳ ಅವಧಿಯು ಮುಗಿಯಿತು. ಆಗ ತಮಿಳುನಾಡಿನಲ್ಲಿ ಬಹಳ ತೀವ್ರವಾದ ಹಿಂದೀವಿರೋಧೀ ಚಳುವಳಿ ನಡೆಯಿತು. ಅದರ ಪರಿಣಾಮವಾಗಿ ಇಂದಿನವರೆಗೆ ಹಿಂದಿ

ಮತ್ತು ಇಂಗ್ಲಿಷ್‌ಗಳೆರಡೂ ದೇಶದ ಅಧಿಕೃತ ಭಾಷೆಯಾಗಿ ಮುಂದುವರಿಯುತ್ತಿವೆ. ಬರಲಿರುವ ಹಲವು ವರ್ಷಗಳವರೆಗೆ ಈ ಸನ್ನಿವೇಶದಲ್ಲಿ ಯಾವುದೇ ಮಹತ್ವದ ಬದಲಾವಣೆಯಾಗುವ ಸೂಚನೆ ಕಾಣುತ್ತಿಲ್ಲ."

ಅದೇನೇ ಇರಲಿ, ವಿಶ್ವವಿದ್ಯಾಲಯದ ಕ್ಷೇತ್ರದಲ್ಲಿ ಕೆಲವು ಬದಲಾವಣೆಗಳಾಗಿವೆ. ಉತ್ತರ ಭಾರತದ ಐದು ಹಿಂದೀ ರಾಜ್ಯಗಳಲ್ಲಿ ಮುಕ್ಕಾಲುಪಾಲು ವಿಶ್ವವಿದ್ಯಾಲಯಗಳು ಹಿಂದಿಯನ್ನು ಶಿಕ್ಷಣ ಮಾಧ್ಯಮವಾಗಿ ಒಪ್ಪಿಕೊಂಡಿವೆ. ಬೇರೆ ಒಂದೆರಡು ಭಾಷೆಗಳಿಗೆ ಸಂಬಂಧಿಸಿಯೂ ಅಪರೂಪವಾಗಿ ಈ ಮಾದರಿಯನ್ನು ಅನುಕರಿಸಲಾಗಿದೆ. ಆದರೂ ಬಹುಪಾಲು ವಿಶ್ವವಿದ್ಯಾಲಯಗಳು ಇಂಗ್ಲಿಷ್ ಮಾಧ್ಯಮವನ್ನೇ ಮುಂದುವರಿಸಿವೆ. ಅವುಗಳಲ್ಲಿ ಕೆಲವು ಮಾತೃಭಾಷೆಯನ್ನು ಬಳಸುವ ಆಯ್ಕೆಯನ್ನು ವಿದ್ಯಾರ್ಥಿಗಳಿಗೆ ಬಿಟ್ಟಿವೆ.

ಮೇಲೆ ಹೇಳಿದ ಮಾತುಗಳಲ್ಲಿ ಬಹುಭಾಗವು ಪದವಿ ತರಗತಿಗಳಿಗೆ ಸಂಬಂಧಿಸಿದ್ದು. ಸ್ನಾತಕೋತ್ತರ ತರಗತಿಗಳಿಗೆ ಇದು ಇನ್ನಷ್ಟು ಕಡಿಮೆ ಪ್ರಮಾಣದಲ್ಲಿ ಅನ್ವಯಿಸುತ್ತದೆ. ವೃತ್ತಿ ಶಿಕ್ಷಣದಲ್ಲಂತೂ ಇಂಗ್ಲಿಷ್ ಮಾಧ್ಯಮ ಎಂದಿನಂತೆ ಮುಂದುವರಿದಿದೆ. ಪ್ರತಿವರ್ಷವೂ ಸುಮಾರು ೮೦೦೦ ದಿಂದ ೧೦,೦೦೦ ಇಂಗ್ಲಿಷ್ ಪುಸ್ತಕಗಳು ಭಾರತದಲ್ಲಿ ಪ್ರಕಟವಾಗುತ್ತಿವೆ. ಅವುಗಳಲ್ಲಿ ಮುಕ್ಕಾಲು ಪಠ್ಯಪುಸ್ತಕಗಳು. ಉಳಿದ ಕಾಲು ಭಾಗ ಅಥವಾ ಅದಕ್ಕಿಂತ ಕಡಿಮೆ, ವಿದ್ವತ್ ಕೃತಿಗಳು ಅಥವಾ ಸಾಮಾನ್ಯ ಆಸಕ್ತಿಗಳಿಗೆ ಸಂಬಂಧಿಸಿದವು. ಒಟ್ಟಿನಲ್ಲಿ ಹೇಳುವುದಾದರೆ ಇಂದು ಭಾರತದಲ್ಲಿ ಇಂಗ್ಲಿಷ್ ಭಾಷೆಯು ೧೯೪೭ರಲ್ಲಿ ಇದ್ದುದಕ್ಕಿಂತ ಹೆಚ್ಚು ಜನಪ್ರಿಯವಾಗಿದೆ.

ಈಗ ಎಲ್ಲ ಹಂತಗಳಲ್ಲಿಯೂ ಇಂಗ್ಲಿಷ್ ಅಧ್ಯಯನಕ್ಕೆ ಅಪಾರ ಬೇಡಿಕೆ ಇದೆ ಎನ್ನುವುದೇನೋ ನಿಜ. ಹಾಗೆ ನೋಡಿದರೆ ಇಂಗ್ಲಿಷ್ ಮಟ್ಟ ಕೂಡ ಆತಂಕ ಹುಟ್ಟಿಸುವ ವೇಗದಲ್ಲಿ ದಿನೇ ದಿನೇ ಕಡಿಮೆಯಾಗುತ್ತದೆ. ಏಕೆಂದರೆ ಅರ್ಹರಾದ ಇಂಗ್ಲಿಷ್ ಶಿಕ್ಷಕರ ಪ್ರಮಾಣವು ಅವರಿಗಾಗಿ ಇರುವ ಬೇಡಿಕೆಗೆ ಹೋಲಿಸಿದರೆ ಬಹಳ ಕಡಿಮೆ. ಅದರಲ್ಲಿಯೂ ಬಾಲ್ಯದಲ್ಲಿ ಕಲಿತ "ಕೆಟ್ಟ ಇಂಗ್ಲಿಷನ್ನು" ಸರಿಪಡಿಸಿಕೊಳ್ಳುವುದು ಬಹಳ ಕಷ್ಟ. ಪ್ರೌಢ ಶಾಲೆಯ ನಂತರ ಕಲಿತ ತಪ್ಪುಗಳನ್ನು ಹೇಗಾದರೂ ಸರಿಪಡಿಸಿಕೊಳ್ಳಬಹುದು.

ಈ ಮಾಹಿತಿಗಳ ಜೊತೆಗೆ ಪ್ರತಿಯೊಂದು ವಿಶ್ವವಿದ್ಯಾಲಯದ ಕಾಲೇಜು ಮತ್ತು ಸ್ನಾತಕೋತ್ತರ ಹಂತಗಳಲ್ಲಿ ಬೇರೆ ಬೇರೆ ಭಾಷಾ ಮಾಧ್ಯಮಗಳಲ್ಲಿ ಕಲಿಯುತ್ತಿರುವ ವಿದ್ಯಾರ್ಥಿಗಳ ಸಂಖ್ಯೆಯನ್ನು ಒದಗಿಸಿದ್ದರೆ ಇನ್ನಷ್ಟು ಚೆನ್ನಾಗಿರುತ್ತಿತ್ತು.

೧೯೬೦ ಕ್ಕಿಂತ ಹಿಂದಿನ ಸನ್ನಿವೇಶವು ಖಂಡಿತವಾಗಿಯೂ ಈಗಿನದಕ್ಕಿಂತ ಚೆನ್ನಾಗಿತ್ತು. ಏಕೆಂದರೆ ಆಗ ಪ್ರಾದೇಶಿಕ ಭಾಷೆಯಿಂದ ಇಂಗ್ಲಿಷಿಗೆ ನಡೆಯುವ ಸ್ಥಿತ್ಯಂತರವು ವಿದ್ಯಾರ್ಥಿಗಳಿಗೆ ಹೊಸ ಪರಿಸ್ಥಿತಿಗೆ ಹೊಂದಿಕೊಳ್ಳಲೆಂದು ಕಾಲಾವಕಾಶವನ್ನು ನೀಡುತ್ತಿತ್ತು. ಎಂದರೆ ಸ್ನಾತಕೋತ್ತರ ತರಗತಿಗಳನ್ನು ತಲುಪುವ ವೇಳೆಗಾಗಲೇ ಅವರು

ನಾಲ್ಕು ವರ್ಷಗಳ ಕಾಲ ಇಂಗ್ಲಿಷ್ ಮೂಲಕ ಕಲಿತಿರುತ್ತಿದ್ದರು. ಈ ಎಲ್ಲ ಗೊಂದಲಗಳ ಫಲವಾಗಿ ಉನ್ನತ ಶಿಕ್ಷಣವು ನಿರ್ದಿಷ್ಟ ಗೊತ್ತು ಗುರಿಯಿಲ್ಲದೆ ವಿಸ್ತರಿಸಿದೆ. ಮುಖ್ಯರಾದ ಉದ್ಯೋಗ ದಾತರೆಂದರೆ ಸರ್ಕಾರ, ಕೈಗಾರಿಕೆಗಳು ಮತ್ತು ಬ್ಯಾಂಕುಗಳೇ ಆಗಿವೆ. ಕೆಲಸ ಕೊಡುವಾಗ ಪ್ರಾದೇಶಿಕ ಭಾಷಾ ಮಾಧ್ಯಮದಲ್ಲಿ ಕಲಿತವರಿಗೆ ಯಾವುದೇ ರಿಯಾಯಿತಿ ಯನ್ನು ನೀಡುವುದಿಲ್ಲ. ಆದ್ದರಿಂದ ಪ್ರಾಥಮಿಕ ಶಾಲೆಯಿಂದ ಹಿಡಿದು ಒಟ್ಟು ಶಿಕ್ಷಣ ವ್ಯವಸ್ಥೆ ಇಂಗ್ಲೀಷಿನ ಹಿಡಿತದಲ್ಲಿ ಸಿಲುಕಿದೆ.

## ಸಲಹೆಗಳು

ಭಾಷಾ ಸನ್ನಿವೇಶವನ್ನು ಯೋಜಿತವಾಗಿ ನಿಯಂತ್ರಿಸಿದ್ದರೆ ಕೆಳಗೆ ಸೂಚಿಸಿರುವ ಎರಡು ಪರ್ಯಾಯಗಳು ಇಂದು ಇರಬೇಕಿತ್ತು.

೧. ವೃತ್ತಿಪರ ಪದವಿಗಳೂ ಸೇರಿದಂತೆ ಶಿಕ್ಷಣದ ಎಲ್ಲ ಹಂತಗಳಲ್ಲಿಯೂ ಪ್ರಾದೇಶಿಕ ಭಾಷೆಯನ್ನು ಕಡ್ಡಾಯವಾದ ಶಿಕ್ಷಣ ಮಾಧ್ಯಮವಾಗಿ ಮಾಡುವುದು. ಅದರ ಜೊತೆಗೆ ವಿದ್ಯಾರ್ಥಿಯು ಶಿಕ್ಷಣದಲ್ಲಿ ಮೇಲೆಮೇಲೆ ಹೋದಂತೆಲ್ಲ ಇಂಗ್ಲಿಷಿನ ಓದು ಬರಹದ ತಿಳುವಳಿಕೆಯನ್ನು ಹೆಚ್ಚಿಸುವುದು.

೨. ಅರವತ್ತರ ದಶಕಕ್ಕಿಂತ ಹಿಂದೆ ಇದ್ದ ಸನ್ನಿವೇಶಕ್ಕೆ ಹಿಂದಿರುಗುವುದು. ಎಂದರೆ ಪ್ರೌಢಶಾಲಾ ಮಟ್ಟದವರೆಗೂ ಪ್ರಾದೇಶಿಕ ಭಾಷಾ ಮಾಧ್ಯಮವನ್ನು, ನಂತರದ ಎಲ್ಲ ಹಂತಗಳಲ್ಲೂ ಇಂಗ್ಲಿಷ್ ಮಾಧ್ಯಮವನ್ನು ಬಳಸುವುದು. ಹೀಗೆ ಮಾಡುವುದರಿಂದ ಸಹಜ ವಾಗಿಯೇ ಉನ್ನತ ಶಿಕ್ಷಣವು ಜನ ಸಮುದಾಯದ ಚಿಕ್ಕ ಭಾಗವೊಂದಕ್ಕೆ ಮೀಸಲಾಗುತ್ತದೆ. ಜನಸಮುದಾಯದ ಮತ್ತು ಬುದ್ಧಿಜೀವಿಗಳ ಅಂತರವು ಎಂದೆಂದಿಗೂ ಹಾಗೆಯೇ ಉಳಿಯುತ್ತದೆ.

ಪ್ರಾದೇಶಿಕ ಭಾಷಾ ಮಾಧ್ಯಮವು ಉನ್ನತ ಶಿಕ್ಷಣದ ಎಲ್ಲಿ ಹಂತಗಳಲ್ಲೂ ಜಾರಿಗೆ ಬರುವುದಕ್ಕಿಂತ ಮೊದಲೇ ಪಠ್ಯಪುಸ್ತಕಗಳ ತಯಾರಿಕೆ, ಪರಿಭಾಷೆಯ ರಚನೆ ಮುಂತಾದ ಸಂಗತಿಗಳಿಗಾಗಿ ನಾವು ಅಪಾರ ಕಾಲವನ್ನು ದುಂದು ಮಾಡಿದ್ದೇವೆ. ಭಾಷಾ ವಿಜ್ಞಾನಿ ಯಾಗಿ ನನಗೆ ಇಂಥ ಪ್ರಯತ್ನವು ಕುದುರೆಗಿಂತ ಮುಂಚೆ ಗಾಡಿಯನ್ನು ಕಟ್ಟಿದಂತೆ ಕಾಣು ತ್ತದೆ. ಒಂದು ನಿರ್ದಿಷ್ಟ ಕ್ಷೇತ್ರದಲ್ಲಿ ಭಾಷೆಯು ಬೆಳೆಯುವುದು ಆ ಕ್ಷೇತ್ರದಲ್ಲಿ ಕೆಲಸ ಮಾಡುವವರು ಅದನ್ನು ಉಪಯೋಗಿಸಿದಾಗ ಮಾತ್ರ. ಇಂಗ್ಲಿಷ್ ಕಲಿಯಬೇಕಾದರೆ ನಿಜ ವಾಗಿಯೂ ತೊಂದರೆ ಕೊಡುವುದು ಪಾರಿಭಾಷಿಕ ಪದಗಳಲ್ಲ. ಬದಲಾಗಿ ಆ ಭಾಷೆಯ ವ್ಯಾಕರಣ ಮತ್ತು ಭಾಷಾ ರೂಢಿಗಳು ಅಡಚಣೆ ಉಂಟುಮಾಡುತ್ತವೆ. ಪ್ರದೇಶ ಭಾಷೆ ಗಳ ಮಾತು ಕೂಡ ಹಾಗೆಯೇ.

ಸ್ವಾತಂತ್ರ್ಯ ಬಂದ ತಕ್ಷಣ ಹಂತಹಂತವಾಗಿ ಪ್ರಾದೇಶಿಕ ಭಾಷೆಗಳನ್ನು ಶಿಕ್ಷಣ ಮಾಧ್ಯಮವಾಗಿ ಜಾರಿಗೆ ತರಬೇಕಾಗಿತ್ತು. ಆಗ ಪಠ್ಯಪುಸ್ತಕಗಳು ಇಂಗ್ಲಿಷ್‌ನಲ್ಲೇ ಇದ್ದರೂ

ಅಡ್ಡಿ ಇರಲಿಲ್ಲ. ನಂತರದ ಎರಡು ದಶಕಗಳಲ್ಲಿ ಇಂಗ್ಲಿಷ್ ಮಾಧ್ಯಮದ ಮೂಲಕ ಕಲಿತಿದ್ದ ಶಿಕ್ಷಕರು ಪ್ರಾದೇಶಿಕ ಭಾಷೆಗಳ ವಾಕ್ಯರಚನೆಯನ್ನು ಬಳಸಿ, ಇಂಗ್ಲಿಷ್ ಹಾಗೂ ಅಂತರ ರಾಷ್ಟ್ರೀಯ ಪಾರಿಭಾಷಿಕ ಪದಗಳನ್ನು ಉಪಯೋಗಿಸಿಕೊಂಡು ಕಲಿಸಲು ಮತ್ತು ಬರೆಯಲು ಸಾಧ್ಯವಾಗುತ್ತಿತ್ತು. ಕ್ರಮೇಣ ಅವರು ಬೇರೆ ಬೇರೆ ವಿಷಯಗಳನ್ನು ಕಲಿಸಲು ಅಗತ್ಯ ವಾದ ಶೈಲಿಯನ್ನು ರೂಪಿಸಿಕೊಳ್ಳುತ್ತಿದ್ದರು. ವಿಜ್ಞಾನ ಮತ್ತು ತಂತ್ರಜ್ಞಾನಗಳಿಗಾಗಿ ಯಂತೂ ಇಂಥ ಶೈಲಿಯ ರೂಪಣವು ಅನಿವಾರ್ಯ.

ಆಮೇಲೆ ಒಂದು ದಶಕ ಕಾಲ ಪಠ್ಯಪುಸ್ತಕಗಳ ರಚನೆ ಮತ್ತು ಪರಿಭಾಷೆಗಳ ಪ್ರಮಾಣೀಕರಣವನ್ನು ಸಾಧಿಸುವುದಾಗಿತ್ತು. ತರಗತಿಯೊಳಗೆ ಬೇರೆ ಬೇರೆ ಶೈಲಿಗಳನ್ನು ಉಪಯೋಗಿಸಬಹುದಿತ್ತು. ಆದರೆ ಈಗ ನಿರ್ದಿಷ್ಟ ಶೈಲಿಯನ್ನೇ ಬಳಸಬೇಕು ಹಾಗೂ ವಿದ್ವಾಂಸರು ಸಿದ್ಧಪಡಿಸಿರುವ ಪಾರಿಭಾಷಿಕ ಪದಗಳನ್ನೇ ಉಪಯೋಗಿಸಬೇಕು ಎಂಬ ಒತ್ತಡವು ಭಾಷಾ ಬೆಳವಣಿಗೆಯ ವೇಗವನ್ನು ತಗ್ಗಿಸಿದೆ. ಪಠ್ಯಪುಸ್ತಕ ರಚನೆಯನ್ನು ಕೆಲವು ಸಂಸ್ಥೆಗಳು ತಮ್ಮ ಸಂಪೂರ್ಣ ಸ್ವಾಮ್ಯಕ್ಕೆ ತೆಗೆದುಕೊಂಡಿರುವುದರಿಂದ, ಅಂಥ ಕೆಲಸದಲ್ಲಿ ಸಮರ್ಥ ಲೇಖಕರು ಸೃಜನಶೀಲವಾಗಿ ಭಾಗವಹಿಸುವುದು ಸಾಧ್ಯವಾಗುತ್ತಿಲ್ಲ. ಇಲ್ಲದೆ ಹೋಗಿದ್ದರೆ ಅನೇಕ ಲೇಖಕರು ವಿವಿಧ ವಿಷಯಗಳ ಮೇಲೆ ಪುಸ್ತಕಗಳನ್ನು ಬರೆಯುತ್ತಿದ್ದರು. ಬಳಸುವವರ ಮಾರುಕಟ್ಟೆಯು ಪಠ್ಯಪುಸ್ತಕಗಳ ವ್ಯಾಪ್ತಿ ಮತ್ತು ಗುಣ ಮಟ್ಟವನ್ನು ತಾನಾಗಿಯೇ ನಿರ್ಧರಿಸುತ್ತಿತ್ತು. ೧೯೨೦ ರಿಂದ ೧೯೪೭ ರ ಅವಧಿಯಲ್ಲಿ ಆಗಿದ್ದು ಹೀಗೆಯೇ.

## ಪ್ರಸ್ತುತ ಸನ್ನಿವೇಶವನ್ನು ಸರಿಪಡಿಸುವ ಕ್ರಮಗಳು

೧. ಪ್ರಾದೇಶಿಕ ಭಾಷಾ ಮಾಧ್ಯಮವನ್ನು ಎಲ್ಲ ಹಂತಗಳಲ್ಲಿ ಕಡ್ಡಾಯವಾಗಿ ಜಾರಿಗೆ ತರಬೇಕು. ಪಠ್ಯಪುಸ್ತಕಗಳು ಮತ್ತು ಪರಿಭಾಷೆ ಸಿದ್ಧವಾಗಬೇಕೆಂದು ಕಾಯುವ ಅಗತ್ಯವಿಲ್ಲ.

೨. ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು ಆಧುನಿಕ ಜ್ಞಾನವನ್ನು ತಮ್ಮ ತಮ್ಮ ತಾಯಿ ನುಡಿಗಳ ಮೂಲಕ ಕಲಿಯುವಾಗ ಹಾಗೂ ಕಲಿಸುವಾಗ ತಮ್ಮದೇ ಆದ ವೈವಿಧ್ಯ ಮತ್ತು ಶೈಲಿಗಳನ್ನು ಬಳಸಿಕೊಳ್ಳುವ ಅವಕಾಶ ಕೊಡಬೇಕು. ಹಾಗೆ ಮಾಡುವುದ ರಿಂದ, ಕ್ರಮೇಣ ಭಾಷೆಯಲ್ಲಿ ವಿಭಿನ್ನ ಶೈಲಿಗಳ ಮತ್ತು ಪರಿಭಾಷೆಯ ವಿಕಾಸ ಸಾಧ್ಯವಾಗುತ್ತದೆ. ಈ ವಿಕಾಸಕ್ಕೆ, ಎರವಲು ತೆಗೆದುಕೊಳ್ಳುವುದು, ಇರುವ ಪದಗಳ ಅರ್ಥ ವಿಸ್ತಾರ, ಹೊಸ ಪದಗಳ ಸೃಷ್ಟಿ ಮುಂತಾದ ಪ್ರಕ್ರಿಯೆಗಳು ನೆರವಾಗುತ್ತವೆ.

೩. ಇನ್ನು ಮುಂದೆಯೂ ಕೂಡ ಅಧಿಕೃತವೆಂದು ಪರಿಗಣಿಸಲಾಗುವ ಇಂಗ್ಲಿಷ್ ಪಠ್ಯ ಪುಸ್ತಕಗಳನ್ನು ಜ್ಞಾನದ ಆಕರಗಳಾಗಿ ಉಪಯೋಗಿಸುವುದು ಮುಂದುವರಿಯಬೇಕು.

೪. ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ವೈಜ್ಞಾನಿಕ ಇಂಗ್ಲಿಷ್‌ನ ನಿಕಟ ಪರಿಚಯ ಆಯಾ

ಕ್ಷೇತ್ರಗಳ ವಿದ್ಯಾರ್ಥಿಗಳಿಗೆ ಬರುವಂತೆ ಮಾಡಲು ವಿಶೇಷ ಅಧ್ಯಯನ ಕ್ರಮಗಳನ್ನು ರೂಪಿಸಬೇಕು.

೫. ಈ ರೀತಿ ಕನಿಷ್ಠ ಪಕ್ಷ ಹತ್ತು ವರ್ಷಗಳ ಕಾಲ, ತರಗತಿಗಾಗಿ ತಯಾರಾಗುವ ಮತ್ತು ತರಗತಿಯೊಳಗೆ ದೇಶಭಾಷೆಗಳನ್ನು ಉಪಯೋಗಿಸುವ ಕೆಲಸ ನಡೆಯುಬೇಕು. ನಂತರ ಈ ರೀತಿ ಪಾಠ ಮಾಡಿದ ಅನುಭವ ಇರುವ ಅಧ್ಯಾಪಕರು ಬೇರೆ ಬೇರೆ ವಿಷಯುಗಳನ್ನು ಕುರಿತು ಪುಸ್ತಕಗಳನ್ನು ಬರೆಯುಬೇಕು. ಈ ಪುಸ್ತಕಗಳು ಮುಕ್ತವಾದ ಮಾರುಕಟ್ಟೆಯಲ್ಲಿ ಪೈಪೋಟಿ ನಡೆಸಬೇಕು. ಅಂಥ ಪೈಪೋಟಿಯಿಂದ ಗುಣಮಟ್ಟ ಹೆಚ್ಚುತ್ತದೆ.

೬. ಪರಿಭಾಷೆಗಳನ್ನು ಪ್ರಮಾಣೀಕರಿಸುವುದಕ್ಕಾಗಿ ದುಡಿಯುವ ಸಮಿತಿಗಳು ಕಟ್ಟಕಡೆಯಲ್ಲಿ ರಚನೆಯಾಗಬೇಕು. ಏಕೆಂದರೆ ಆ ವೇಳೆಗೆ ಪ್ರತಿಯೊಂದು ಅಂತರರಾಷ್ಟ್ರೀಯ ಪರಿಕಲ್ಪನೆಯೂ ಬೇರೆ ಬೇರೆ ರೀತಿಯಲ್ಲಿ ಬಳಕೆಯಾಗಿರುತ್ತದೆ. ಪ್ರಮಾಣೀಕರಣದ ಕೆಲಸದಲ್ಲಿ ಮಾನದಂಡವಾಗಿ ಬಳಸಲು ಕೆಲವಾದರೂ ಮಾಹಿತಿಗಳು ನಮಗೆ ಲಭ್ಯವಾಗಿರುತ್ತವೆ.

## REFERENCES

1. Baman-Behram, B. K. 1943, Educational Controversies in India. Bombay : D. B Taraporevala Sons and Co.

2. Commonwealth Universities Yearbook 1987(Vol. 3) London: The Association of Commonwealth Universities.

3. Ferguson, Charles A. and Dil,Anwar S. 1979, Universals of language planning in national development. In William C. McCormack and Stephen A. Wurm, Language and Society: Anthropological Issues (pp. 693-702). The Hague: Moulton.

4. Kanungo, Gostha Behari, 1962, The Language Controversy in Indian Education: An Historical Study, Chicago: The University of Chicago, Comparative Education Center.

5. Krishnamurti, Bh. 1979, Problems of language standardization in India. 1979. In William C. McCormack and Stephen A. Wurm. Language and Society: Anthropological Issues (pp. 673-92). The Hague: Mouton.

6. Mahmood, Syed 1895, A History of English Education in India (1781 to 1893). Aligarh: Honorary Secretary of the MAO College.

7. Nagarajan, S. 1984. Children of Macaulay. New Quest, 46, 207-20.

8. Naik, J. P. and Nurullah, Syed, 1985, (6th edn. revised).

A Student History of Education in India 1800–1973. New Delhi: Macmillan India Limited. National Policy of Education 1986: Programme of Action, 1986. New Delhi: Government of India (Ministry of Human Resource Development, Department of Education).

9. Report of the Education Commission 1964-66: Education and National Development, New Delhi: Ministry of Education, Government of India.

10. West, Michael, 1926, Bilingualism. Bureau of Education (India): Occasional Reports No 13. Calcutta: Government of India.

**ವಿಶ್ವವಿದ್ಯಾಲಯಗಳು/ತತ್ಸಮ ಸಂಸ್ಥೆಗಳು ಹೊಂದಿರುವ ಶಿಕ್ಷಣ ಮಾಧ್ಯಮ**

| ಸಂಸ್ಥೆಗಳು | ಸಂಖ್ಯೆ | ಶಿಕ್ಷಣ ಮಾಧ್ಯಮ |
|---|---|---|
| ೧. ಕೇಂದ್ರೀಯ ವಿಶ್ವವಿದ್ಯಾಲಯಗಳು | ೮ | ಇಂಗ್ಲಿಷ್ ೧ |
| ೨. ಭಾರತೀಯ ತಂತ್ರಜ್ಞಾನ ಸಂಸ್ಥೆಗಳು | ೫ | ಇಂಗ್ಲಿಷ್ |
| ೩. ವೃತ್ತಿಪರ ಸಂಸ್ಥೆಗಳು | | |
| ಅ) ವಿಶ್ವವಿದ್ಯಾಲಯಗಳು | ೨೫ | ೨ |
| ಆ) ಕೃಷಿ ವಿಶ್ವವಿದ್ಯಾಲಯಗಳು | ೨೨ | |
| ಇ) ಗುಜರಾತ್ ಆಯುರ್ವೇದ ವಿಶ್ವವಿದ್ಯಾಲಯ | ೧ | |
| ಈ) ಜೆ. ಎಸ್. ತಾಂತ್ರಿಕ ವಿಶ್ವವಿದ್ಯಾಲಯ | ೧ | |
| ಊ) ಇಂದಿರಾ ಕಲಾ ಸಂಗೀತ ವಿಶ್ವವಿದ್ಯಾಲಯ | ೧ | ಸ್ಪಷ್ಟವಾಗಿ ಘೋಷಿತವಾಗಿಲ್ಲ |
| ೪. ವಿಶ್ವವಿದ್ಯಾಲಯಕ್ಕೆ ಸಮವೆಂದು ಪರಿಗಣಿತವಾದ ಸಂಸ್ಥೆಗಳು | ೨೦ | ಇಂಗ್ಲಿಷ್<br>ಸಂಸ್ಕೃತ<br>ಹಿಂದಿ } ೩ |
| ೫. ಬಹು ವಿಷಯಕ ವಿಶ್ವವಿದ್ಯಾಲಯಗಳು | ೯೬ | ಸ್ನಾತಕೋತ್ತರ ಹಂತದಲ್ಲಿ ಇಂಗ್ಲಿಷ್, ಪದವಿ ಹಂತದಲ್ಲಿ ಪ್ರಾದೇಶಿಕ ಭಾಷಾ ಮಾಧ್ಯಮದ ಆಯ್ಕೆಗೆ ಅವಕಾಶವಿದೆ. |
| ಒಟ್ಟು | ೧೫೪ | |

೧. ವಿಶ್ವಭಾರತಿಯಲ್ಲಿ ಸ್ನಾತಕೋತ್ತರ ಹಂತದಲ್ಲಿ ವೃತ್ತಿಪರವಲ್ಲದ ವಿಷಯಗಳನ್ನು ಬಂಗಾಳಿ ಮಾಧ್ಯಮದಲ್ಲಿ ಕಲಿಯಬಹುದು.
೨. ಸಾಮಾನ್ಯವಾಗಿ ಕೃಷಿ ವಿಶ್ವವಿದ್ಯಾಲಯಗಳಲ್ಲಿ ಇಂಗ್ಲಿಷ್ ಮಾಧ್ಯಮ ಕಡ್ಡಾಯ.
೩. ಗುಜರಾತಿ ವಿದ್ಯಾಪೀಠದಲ್ಲಿ ಹಿಂದಿ, ಇಂಗ್ಲಿಷ್ ಮತ್ತು ಗುಜರಾತಿ ಮಾಧ್ಯಮಗಳಲ್ಲಿ ಕಲಿಯುವ ಅವಕಾಶವಿದೆ.



# ಪತ್ರಿಕೋದ್ಯಮ ಮತ್ತು ಸಂಸ್ಕೃತಿ ಸಂವಹನ-ಒಂದು ಟಿಪ್ಪಣಿ

**ಗುಡಿಹಳ್ಳಿ ನಾಗರಾಜ್**

ಪತ್ರಿಕೆಗಳೆಂದರೆ 'ರಾಜಕೀಯ ವರದಿಗಳು', ಅದನ್ನು ಬಿಟ್ಟು ಬಹುಶಃ ಮತ್ತೇನು ಇರಲಾರದೇನೋ ಎಂಬುವಷ್ಟರ ಮಟ್ಟಿಗೆ ಪತ್ರಿಕೆಗಳಿಗೆ ಅಂಟಿದ "ರಾಜಕೀಯ"ದ ನಂಟು ಇನ್ನೂ ಸಂಪೂರ್ಣವಾಗಿ ಹೋಗಿಲ್ಲ. ಸ್ವಾತಂತ್ರ್ಯ ಹೋರಾಟಗಳೊಂದಿಗೇ ಭಾರತೀಯ ಪತ್ರಿಕೋದ್ಯಮ ಬೆಳೆದು ಬಂದಿದ್ದರಿಂದ'ರಾಜಕೀಯ'ವು ಪತ್ರಿಕೆಗಳ ಅವಿಭಾಜ್ಯ ಅಂಗವಾಗಿ ಬೆಳೆದು ಬಂದದ್ದು ಒಂದು ಸಹಜ ಕ್ರಿಯೆ. ಆದರ್ಶಗಳಿಗಾಗಿ ಆರಂಭವಾಗಿ ಉದ್ಯಮವಾಗಿ ಬೆಳೆದ ನಮ್ಮ ಬಹು ಪ್ರಸಾರದ ಜನಪ್ರಿಯ ಪತ್ರಿಕೆಗಳು ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕ ಮೇಲೆ ಅಧಿಕಾರಕ್ಕಾಗಿ ನಡೆಯುವ ಕಸರತ್ತುಗಳನ್ನು (ಗಿಮಿಕ್ಸ್‌ಗಳನ್ನು) ಯಥಾವತ್ತಾಗಿ ವರದಿ ಮಾಡುತ್ತ ಒಂದು ರೀತಿಯ ಕುತೂಹಲವನ್ನು ಓದುಗರಲ್ಲಿ ಉಂಟು ಮಾಡಿದವು. ಮುಂದುವರಿಯುತ್ತ ಈ ಕುತೂಹಲವನ್ನು ತಣಿಸುವುದರಲ್ಲೇ ಈ ಪತ್ರಿಕೆಗಳು (ಅಂದರೆ ಪತ್ರಿಕಾ ಮಾಲಿಕರು)ಹಣ ಮಾಡಿದವು.

ದೇಶದ ಪ್ರಗತಿ ಹಾಗೂ ಆಧುನಿಕತೆಯ ಅಗತ್ಯಗಳಿಂದಾಗಿ ಕೃಷಿ ಕೈಗಾರಿಕೆಗಳ ಅಭಿವೃದ್ಧಿಗೆ ಪುಷ್ಟಿ ಕೊಡುವಂತಹ ಕೆಲಸ ಪತ್ರಿಕೆಗಳಿಂದ ಆಗಬೇಕು ಎಂಬ ವಾದಗಳು ಇತ್ತೀಚಿನ ವರ್ಷಗಳಲ್ಲಿ ಪ್ರಚಲಿತವಾಗತೊಡಗಿದವು.ಬಂಡವಾಳಶಾಹಿಯ ಬೆಳವಣಿಗೆಗೆ ಇದು ಅನಿವಾರ್ಯಕೂಡ. ಏನೇ ಇರಲಿ,ಪತ್ರಿಕೆಗಳ ಆಯಾಮಗಳನ್ನು ಹಿಗ್ಗಲಿಸುವ ದೃಷ್ಟಿಯಿಂದ ಇದು ಸ್ವಾಗತಾರ್ಹ ಬೆಳವಣಿಗೆಯಾಗಿಯೇ ಕಂಡು ಬಂತು.

ಸಾಹಿತ್ಯಕ-ಸಾಂಸ್ಕೃತಿಕ ಸಂಗತಿಗಳಿಗೆ ಪತ್ರಿಕೆಗಳಲ್ಲಿ ಆದ್ಯತೆ ಸಿಗಬೇಕು ಎಂಬ ಕೂಗು ಯಾವ ಕಾಲದಿಂದಲೂ ಇದ್ದೇ ಇದೆ. ರಾಜಕೀಯ ಎಂದರೆ ಮೂಗು ಮುರಿಯುವ, ಸಾಂಸ್ಕೃತಿಕ ವಿಷಯಗಳೆಂದರೆ ಈ ದೇಶದ ಭವ್ಯ-ದಿವ್ಯತೆಗಳನ್ನು ಹಾಡಿ ಹೊಗಳುವುದು ಎಂಬ ಸಂಕುಚಿತತೆ ಈ ಕೂಗಿನೊಂದಿಗೆ ತಳಕು ಹಾಕಿಕೊಂಡಿದ್ದೊಂದು ವಿಪರ್ಯಾಸ. ಇಂತಹ ಸೀಮಿತ ನೋಟಕ್ಕೆ ಚರಿತ್ರೆಯನ್ನಾಗಲೀ, ಸಾಂಸ್ಕೃತಿಕ ಲೋಕದ ತನ್ನೆಲ್ಲ ಜನಪರತೆಯನ್ನಾಗಲೀ ಸಮಗ್ರವಾಗಿ ಗ್ರಹಿಸಲು ಸಾಧ್ಯವಾಗುವುದಿಲ್ಲ. ಒಬ್ಬ ವರದಿಗಾರ ಅಥವಾ ಸಂಪಾದಕ ಒಕ್ಕಣ್ಣಿನ ನೋಟಗಾರನಾದರೆ ಆತ ಪತ್ರಿಕೆಗಳಲ್ಲಿ ವರದಿಗಳನ್ನು ಆಯ್ಕೆ ಮಾಡಿ ಪ್ರಕಟಿಸುವಾಗ ಸಹಜವಾಗಿ ಅನೇಕ ಮಿತಿಗಳಿಗೆ ಒಳಪಡುತ್ತಾನೆ. ಇದು ಶಿವರಾಮ ಕಾರಂತರು ಮಾಡಿದ ಭಾಷಣವಾದ್ದರಿಂದ ಮುಖಪುಟಕ್ಕೆ ಬರಬೇಕೆಂದೋ, ಜ್ಞಾನಪೀಠ ಪ್ರಶಸ್ತಿ ಪಡೆದ ಸಾಹಿತಿಯ ವಿಷಯ ಇದಾದ್ದರಿಂದ ಮುಖಪುಟಕ್ಕೆ ಬರಬೇಕೆಂದೋ ಅಥವಾ ಎಲ್ಲ ಮುದ್ರಣಗಳಿಗೆ ಪ್ರಕಟವಾಗಬೇಕೆಂದೋ ಒಂದು ರೀತಿ ಪರಿಮಿತಿಗಳಲ್ಲಿ ತೇಲಿಹೋಗುತ್ತಾನೆ. ಸಾಂಸ್ಕೃತಿಕ ವಿವರಗಳನ್ನು ತೆರೆದಿಡುವಲ್ಲಿ ಪತ್ರಿಕೆ ವಿಫಲವಾಗುತ್ತದೆ.

ಚರಿತ್ರೆಯ ಚಲನಶೀಲ ಬೆಳವಣಿಗೆಯ ಪ್ರಜ್ಞೆಯಿಂದ ತನ್ನ ಸಮಕಾಲೀನ ಪ್ರಪಂಚವನ್ನು ಗ್ರಹಿಸಲು ಸಾಧ್ಯವಾದಂತೆಯೇ, ತನ್ನ ಸಮಕಾಲೀನ ಸಾಂಸ್ಕೃತಿಕ ಲೋಕ ವನ್ನು ಗ್ರಹಿಸಲು ಸಾಧ್ಯವಾಗುತ್ತದೆ. ಸಮಕಾಲೀನ ಸಾಂಸ್ಕೃತಿಕ ಆಶಯಗಳಿಗೆ ಪೂರಕ ವಾಗಿ ಪತ್ರಿಕೆಗಳು ನಿಲ್ಲಬೇಕಾದ್ದು ಅಪೇಕ್ಷಣೀಯ ಕೂಡ.

ಸಾಹಿತ್ಯ ಲೋಕದ ಒಂದು ಉದಾಹರಣೆ ತೆಗೆದುಕೊಳ್ಳುವುದಾದರೆ, ಕನ್ನಡದ ಅಧಿಕ ಪ್ರಸಾರದ ಜನಪ್ರಿಯ ಪತ್ರಿಕೆಗಳಲ್ಲಿ ಬಹುಶಃ ಒಂದು ಪತ್ರಿಕೆ ಮಾತ್ರ ತನ್ನ ಸಮಕಾಲೀನ ಸಾಂಸ್ಕೃತಿಕ ಅಗತ್ಯಗಳಿಗೆ ಪೂರಕವಾಗಿ ನಿಂತದ್ದು ಒಂದೇ ಸಂದರ್ಭದಲ್ಲಿ. ಅದು ಕನ್ನಡದ "ನವ್ಯ" ಸಾಹಿತ್ಯದ ಕಾಲದಲ್ಲಿ. ನಂತರ ಸಂಪಾದಕೀಯ ವರ್ಗದ ಬದಲಾವಣೆಯಿಂದ ಈ ಪ್ರಕ್ರಿಯೆ ನಿಂತುಹೋಯಿತು. ಆದ್ದರಿಂದ "ನವ್ಯ"ದ ನಂತರ ಬಂದ "ಬಂಡಾಯ"ಕ್ಕೆ ಪೂರಕವಾಗಿ ನಿಲ್ಲಬಲ್ಲ ಜನಪ್ರಿಯ ಪತ್ರಿಕೆಗಳು ಇಲ್ಲವಾದವು.

ಹೀಗಾದಾಗ ಪತ್ರಿಕೆಯ ಸಾಂಸ್ಕೃತಿಕ ಲೋಕದ ಒಂದು ಸ್ಪಷ್ಟ ಧೋರಣೆಗೂ ಮಂಕು ಕವಿಯುತ್ತದೆ. ಇಲ್ಲಿ ಮತ್ತೊಂದು ತೊಡಕು ಇದೆ. ಇಂತಹ ಅಸ್ಪಷ್ಟ ವಾತಾವರಣ ದಲ್ಲಿ ಪತ್ರಿಕೆ ಯಾರದಾದರೂ ಮನಾಪಲಿ ಆದರಂತೂ ಸಮಕಾಲೀನ ತುಡಿತಗಳಿಗೆ ಖಂಡಿತಾ ಪೆಟ್ಟು ಬೀಳುತ್ತದೆ. ಅದು ಹಾಗಾಗಿದೆ ಕೂಡ. ತನ್ನ ಕಾಲದ ಹೊಸ ಆಶಯ ವುಳ್ಳ ಯುವ ಜನಾಂಗದ ಬರವಣಿಗೆಯನ್ನು ಸಹನೆಯಿಂದ ನೋಡಬೇಕಾದ ವಿಮರ್ಶಾ ವರ್ಗ ತನಗಿಷ್ಟವಾದ ಯಾವುದೋ ಮಾನದಂಡದಲ್ಲಿ (ಔಟ್ ಆಫ್ ಡೇಟ್ ಆದದ್ದೂ ಆಗಬಹುದು) ಹೊಸದನ್ನು ಚಚ್ಚಿ ಹಾಕಬಹುದು. ಬಹು ಪ್ರಸಾರದ ಪತ್ರಿಕೆಗಳಲ್ಲೇ ಹೀಗಾದರೆ ಸಮಕಾಲೀನ ತುಡಿತಗಳಿಗೆ ಒಂದು ದೊಡ್ಡ ಹೊಡೆತ.ನಿರಂತರ ಬದಲಾವಣೆಯ (ಬೆಳವಣಿಗೆಯ) ಗತಿಯಲ್ಲಿ ತನ್ನ ಕಾಲವನ್ನು ಗ್ರಹಿಸುವ ವೈಜ್ಞಾನಿಕ ದೃಷ್ಟಿಕೋನದ ಕೊರತೆಯಿಂದಲೂ ಇಂತಹ ಲೋಪಗಳಾಗಬಲ್ಲವು.

ಆದ್ದರಿಂದಲೇ, ಇಲ್ಲಿ ನಾನು ಮತ್ತೊಮ್ಮೆ ಒತ್ತಿ ಹೇಳಬಯಸುವ ವಿಷಯ ವೆಂದರೆ, ತನ್ನ ಕಾಲದ ಸಾಂಸ್ಕೃತಿಕ ಅಗತ್ಯಗಳನ್ನು ಪೂರೈಸುವ ಬದ್ಧತೆ ಎಲ್ಲ ಬಹು ಪ್ರಸಾರದ ಪತ್ರಿಕೆಗಳಿಗೂ ಬೇಕು. ತನ್ನ ಕಾಲದೊಂದಿಗೆ ಸ್ಪಂದಿಸುವ ಗುಣವನ್ನು ಸಂಪಾದಕ ವರ್ಗ ಪಡೆದುಕೊಂಡಿರಬೇಕಾದರೆ ಆತ (ವರದಿಗಾರ/ಸಂಪಾದಕ) ಗಳಿಸಿರುವ ಚರಿತ್ರೆಯ ಚಲನಶೀಲ ಬೆಳವಣಿಗೆಯ ಪ್ರಜ್ಞೆ, ಅಧ್ಯಯನ–ಒಟ್ಟಾರೆ ಆತನ ಸಾಂಸ್ಕೃತಿಕ ವ್ಯಕ್ತಿತ್ವ ಸಹ ಮುಖ್ಯವಾಗುತ್ತವೆ.

ಜೀವನದ ಎಲ್ಲ ಕ್ಷೇತ್ರಗಳನ್ನು ನಿರ್ಧರಿಸುವ, ಪ್ರಭಾವಿಸುವ ಪ್ರಮುಖ ಅಸ್ತ್ರ ರಾಜಕೀಯವೇ ಆಗಿರುವುದರಿಂದ, ಪತ್ರಿಕೆಗಳಲ್ಲಿ ಬರೀ ರಾಜಕೀಯ ತುಂಬಿರುತ್ತದೆ ಎಂಬ ಮಡಿವಂತಿಕೆ ಭಾವನೆಯನ್ನು, ಸಿನಿಕತನವನ್ನು ಆದ್ದರಿಂದಲೇ ನಾವು ಬಿಡಬೇಕಾಗುತ್ತದೆ. ರಾಜಕೀಯ–ಸಾಂಸ್ಕೃತಿಕ ಅಗತ್ಯಗಳು ಮಾನವೀಯತೆಯ ದೃಷ್ಟಿಯಿಂದ ಹೇಗೆ ಮುಖ್ಯ ಎಂಬುದೇ ನಮ್ಮ ಮುಂದಿರುವ ಪ್ರಶ್ನೆ.

# ಕನ್ನಡ ಮಾಧ್ಯಮ: ವಿಚಾರ ಸಂಕಿರಣ

ಶಿಕ್ಷಣ ಮಾಧ್ಯಮ ಮತ್ತು ಸಮೂಹ ಮಾಧ್ಯಮಗಳಿಗೆ ಸಂಬಂಧಿಸಿದಂತೆ, ಪ್ರಾದೇಶಿಕ ಭಾಷೆಗಳ ಬಳಕೆಯನ್ನು ಕುರಿತ ವಿಚಾರಗಳ ಸಂಕಲನ ಇಲ್ಲಿದೆ. ಕರ್ನಾಟಕದ ಹಲವು ಶಿಕ್ಷಣ ತಜ್ಞರು ಮತ್ತು ಈ ವಿಷಯದಲ್ಲಿ ನಿರ್ಣಾಯಕವಾದ ತೀರ್ಮಾನಗಳನ್ನು ತೆಗೆದು ಕೊಳ್ಳಬಲ್ಲ ಮಹನೀಯರು ನಾವು ಕೇಳಿದ ಪ್ರಶ್ನೆಗಳಿಗೆ ಸ್ಪಂದಿಸಿದ್ದಾರೆ. ಕೊನೆಗೂ ಸ್ಪಷ್ಟವಾಗುವ ಸಂಗತಿಯೆಂದರೆ ಇಂಥ ವಿಷಯಗಳ ರಾಜಕೀಯ ಹಾಗೂ ಸಾಮಾಜಿಕ ಆಯಾಮಗಳೇ ನಿಜವಾಗಿಯೂ ಮುಖ್ಯ ಎನ್ನುವುದು. ಕನ್ನಡಕ್ಕೆ ಇರುವ ಸಾಮರ್ಥ್ಯದ ಬಗ್ಗೆ ಮಾಡುವ ಊಹಾಪೋಹಗಳೆಲ್ಲವೂ ಕೋಳದ ದಂಡೆಯಲ್ಲಿ ನಿಂತು ನಡೆಸುವ, ಈಜಾಟ ವನ್ನು ಕುರಿತ ಚರ್ಚೆಗಳಾಗಿವೆ. ಒಟ್ಟು ಸಮುದಾಯದ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುವ ಹೊಣೆಯನ್ನು, ಅದರ ಮೂಕಮನದ ವಾಚಾಳಿ ವಕ್ತಾರರು ಹೊರಬೇಕಾಗುತ್ತದೆ. ಆ ವಿಷಯದಲ್ಲಿ ಅವರು ತೋರಿಸುತ್ತಿರುವ 'ಜಾಣತನ'ವು ವರ್ಗ–ವರ್ಣಗಳಿಂದ ಛಿದ್ರವಾದ ಸಮುದಾಯದಲ್ಲಿ ಅಧಿಕಾರದ ಹಂಚಿಕೆಯಾಗುವ ರೀತಿಯ ಸಹಜ ಫಲವಾಗಿದೆ.

೧. ಒಂದು ಸಮುದಾಯದ ಭಾಷಾನೀತಿಯನ್ನು ರೂಪಿಸುವ ಕೆಲಸದಲ್ಲಿ ಸರ್ಕಾರದ ರಾಜಕೀಯ ಇಚ್ಛಾಶಕ್ತಿಗಿಂತ ಭಿನ್ನವಾದ ಇತರ ಒತ್ತಡಗಳು ಕೆಲಸ ಮಾಡುತ್ತಿ ರುತ್ತವೆಯೇ? ಕರ್ನಾಟಕದ ಸಂದರ್ಭದಲ್ಲಿ, ಆ ಒತ್ತಡಗಳು ಯಾವುವು?

೨. ಇಂಗ್ಲಿಷ್, ಹಿಂದಿ ಮತ್ತು ಪ್ರಾದೇಶಿಕ ಭಾಷೆಗಳ ನಡುವೆ ಹುಟ್ಟಿಕೊಂಡಿ–ರುವ ಸ್ಪರ್ಧೆಯನ್ನು ಕೇವಲ ಭಾಷೆಯ ನೆಲೆಯಲ್ಲಿ ಗ್ರಹಿಸದೆ, ವಿಭಿನ್ನ ಸಂಸ್ಕೃತಿಗಳ ಹಾಗೂ ಜೀವನ ಕ್ರಮಗಳ ತಾಕಲಾಟವೆಂದು ಗ್ರಹಿಸಲು ಸಾಧ್ಯವೇ?

೩. ಶಿಕ್ಷಣ ವ್ಯವಸ್ಥೆಯಲ್ಲಿ ಕನ್ನಡ ಮಾಧ್ಯಮ ಕುರಿತು ಮಂಡಿತವಾಗುತ್ತಿರುವ ವಾದಗಳನ್ನು ನೀವು ಜನಸಾಮಾನ್ಯರ ಮುಗ್ಧವೂ, ಸಹಜವೂ, ಪ್ರಾಮಾಣಿಕವೂ ಆದ ಆಯ್ಕೆ ಯೆಂದು ತಿಳಿಯುತ್ತೀರಾ? ಅಂಥ ಆಯ್ಕೆಯನ್ನು ಅವರ ಮೇಲೆ ಹೇರಲಾಗುತ್ತಿದೆಯೇ?

೪. ಉನ್ನತ ಶಿಕ್ಷಣದಲ್ಲಿ ವಿಜ್ಞಾನ ಬೋಧನೆ ಕನ್ನಡ ಮಾಧ್ಯಮದಲ್ಲಿ ಸಾಧ್ಯ ವಾಗುತ್ತದೆಯೇ? ಆ ದಿಕ್ಕಿನಲ್ಲಿ ಯಾವ ರೀತಿಯ ಪ್ರಯತ್ನಗಳು ನಡೆಯಬೇಕಾಗಿವೆ?

೫. ಸಮೂಹ ಮಾಧ್ಯಮಗಳಲ್ಲಿ ಬಳಕೆಯಾಗುತ್ತಿರುವ ಕನ್ನಡದ ಸ್ವರೂಪ ಮತ್ತು ಪ್ರಮಾಣಗಳನ್ನು ಯಾವ ಬಗೆಯ ಒತ್ತಡಗಳು ನಿಯಂತ್ರಿಸುತ್ತಿವೆ?

೬. ಸಮುದಾಯದಲ್ಲಿ ಬಳಕೆಯಲ್ಲಿರುವ 'ಭಾಷಿಕ' ನೆಲೆಗಳನ್ನು 'ಜನಪ್ರಿಯ' ಎಂದು ನಿರಾಕರಿಸಿ, ಹೆಚ್ಚು ಸಂವಹನಶೀಲವಲ್ಲದ ನೆಲೆಗಳನ್ನು ಆರಿಸಿಕೊಳ್ಳುವ ಸೃಜನಶೀಲ ಲೇಖಕರ ಪ್ರಯತ್ನಗಳನ್ನು ನೀವು ಹೇಗೆ ವಿವರಿಸುವಿರಿ?

## ಜಿ. ನಾರಾಯಣ

೧. ಒಂದು ಸಮುದಾಯದ ಭಾಷಾನೀತಿಯನ್ನು ರೂಪಿಸುವ ಕೆಲಸದಲ್ಲಿ ಸರ್ಕಾರದ ರಾಜಕೀಯ ಇಚ್ಛಾಶಕ್ತಿ ಅತ್ಯಂತ ಮುಖ್ಯವಾದುದು. ಆದರೆ ರಾಜಕೀಯ ಇಚ್ಛಾಶಕ್ತಿ ಎಂಬುದು ಪ್ರಜಾಪ್ರಭುತ್ವದಲ್ಲಿ ಕೇವಲ ವ್ಯಕ್ತಿಯೊಬ್ಬನ ನಿರ್ಣಯಕ್ಕಿಂತ ಮಿಗಿಲಾಗಿ, ಪ್ರಜೆಗಳ ಇಚ್ಛಾಶಕ್ತಿ, ಕೇಂದ್ರ ಸರ್ಕಾರದ ಮತ್ತು ರಾಜ್ಯ ಸರ್ಕಾರದ ನಡುವಿನ ಸಂಬಂಧ, ಸರ್ಕಾರದಲ್ಲಿ ಕೆಲಸ ಮಾಡುತ್ತಿರುವ ಹಿರಿಯ ಅಧಿಕಾರಿಗಳ ಮನೋಭಾವನೆ ಇವೆಲ್ಲವುಗಳಿಂದ ರೂಪುಗೊಳ್ಳುತ್ತದೆ. ಈ ಒತ್ತಡಗಳು ರಾಜಕೀಯ ಇಚ್ಛಾಶಕ್ತಿಯನ್ನು ಪ್ರಧಾನವಾಗಿ ನಿರ್ಣಯಿಸುತ್ತವೆ.

ಅ. ಕರ್ನಾಟಕದಲ್ಲಿ ಕನ್ನಡ ಭಾಷಾನೀತಿಗೆ ಪರವಾದ, ಬಲವಾದ ಇಚ್ಛಾಶಕ್ತಿ ಪ್ರಜಾ ಸಮುದಾಯದಿಂದ ಮೂಡಿದಲ್ಲಿ, ರಾಜಕೀಯ ಶಕ್ತಿಗಳು ದಿಟ್ಟ ನಿರ್ಣಯ ತೆಗೆದು ಕೊಳ್ಳುವುದು ಅನಿವಾರ್ಯ ಹಾಗೂ ಸುಲಭವಾಗುತ್ತದೆ. ಆದಕಾರಣವೇ ಕರ್ನಾಟಕ ದಾದ್ಯಂತ ಜಾಗೃತಿಯನ್ನು ಮೂಡಿಸಲು ಕನ್ನಡ ಜಾಗೃತಿ ವರ್ಷವನ್ನು ಕನ್ನಡ ಪ್ರಾಧಿಕಾರ ಹಮ್ಮಿಕೊಂಡಿದೆ.

ಆ. ಯಾವುದೇ ದಿಟ್ಟ ನಿಲುವು ತೆಗೆದುಕೊಳ್ಳಬೇಕಾದರೂ ಮುಖ್ಯಮಂತ್ರಿ ಯಾದವರು ಯಾವುದೇ ರಾಜಕೀಯ ಅಸ್ಥಿರತೆಗೆ ಈಡಾಗುವ ಸ್ಥಿತಿ ಇರಬಾರದು. ಕೇಂದ್ರ ಸರ್ಕಾರದವರು ಮುಖ್ಯಮಂತ್ರಿಗಳನ್ನು ಏಳಿಸುವ ಬೀಳಿಸುವ ಆಟದಲ್ಲಿ ತೊಡಗಿದಲ್ಲಿ ಯಾವುದೇ ನೀತಿಯನ್ನು ಕುರಿತು ದಿಟ್ಟ ನಿಲುವು ತೆಗೆದುಕೊಳ್ಳುವುದು ಸರ್ಕಾರಕ್ಕೆ ಕಷ್ಟ ವಾಗುತ್ತದೆ.

ಇ. ಕರ್ನಾಟಕ ಸರ್ಕಾರದಲ್ಲಿ ಬಹಳ ಮುಖ್ಯವಾದಂಥ ಹುದ್ದೆಗಳಲ್ಲಿ ಹೊರನಾಡಿನ ಅಧಿಕಾರಿಗಳೇ ನೇಮಕವಾಗಿರುತ್ತಾರೆ. ಭಾಷಾನೀತಿಯ ನಿರ್ಣಯದಲ್ಲೂ ಅವರ ಅಭಿಪ್ರಾಯಗಳೇ ಎಷ್ಟೋ ಬಾರಿ ಪ್ರಭಾವ ಬೀರುವುದುಂಟು. ಇದಲ್ಲದೆ ನಮ್ಮ ಶಿಕ್ಷಣ ವ್ಯವಸ್ಥೆ ಮತ್ತು ಸ್ಪರ್ಧಾತ್ಮಕ ಪರೀಕ್ಷೆಗಳು ಇಂಗ್ಲಿಷ್‌ಪರ ಧೋರಣೆಗೇ ಹೆಚ್ಚು ಪ್ರೋತ್ಸಾಹ ಕೊಡುವಂತಿವೆ. ವ್ಯಕ್ತಿಗತ ಮನೋಭಾವನೆಯನ್ನು ನೋಡಿದಾಗಲೂ ಇಂಗ್ಲಿಷ್ ಭಾಷೆಯ ಬಗ್ಗೆ ಇರುವಷ್ಟು ಮೋಹ ಕನ್ನಡ ಭಾಷೆಯ ಬಗ್ಗೆ ಜನಗಳಿಗೆ ಇಲ್ಲ. ಒಂದು ಇಂಗ್ಲಿಷ್‌ಪದ ತನಗೆ ಅರ್ಥವಾಗದಿದ್ದಾಗ ನಾಲ್ಕು ಜನರ ಮುಂದೆ ಅವಮಾನವಾಗದಂತೆ ಆದಷ್ಟು ಬೇಗನೆ ಅದರ ಅರ್ಥ ಗ್ರಹಿಸಿ ಆ ಪದವನ್ನು ತನ್ನದಾಗಿಸಿಕೊಳ್ಳುವ ಪ್ರಯತ್ನ ಮಾಡುತ್ತಾನೆ. ಆದರೆ ಒಂದು ಕನ್ನಡ ಪದದ ಅರ್ಥ ತನಗೆ ಗೊತ್ತಿಲ್ಲ ಎಂದರೆ ಆತ ನಾಚಿಕೆ ಪಡುವುದಿಲ್ಲ. ಈ ಪರಿಸ್ಥಿತಿ ಬದಲಾಗಬೇಕು.

೨. ಇಂಗ್ಲಿಷ್, ಹಿಂದಿ ಮತ್ತು ಪ್ರಾದೇಶಿಕ ಭಾಷೆಗಳ ನಡುವೆ ಹುಟ್ಟಿಕೊಂಡಿರುವ ಸ್ಪರ್ಧೆ ಕೇವಲ ಭಾಷೆಯ ನೆಲೆಯದ್ದಾಗಿದೆ ಎಂಬುದು ನನ್ನ ಅಭಿಪ್ರಾಯ. ನಮ್ಮ ಹೆಚ್ಚಿನ ಜನರು ಜನ ಜೀವನದಲ್ಲಿ ಇಂಗ್ಲಿಷ್ ಸಂಸ್ಕೃತಿ–ಜೀವನ ಕ್ರಮ ಹಾಗೂ ಉತ್ತರ ಭಾರತದ ಸಂಸ್ಕೃತಿ–ಜೀವನ ಕ್ರಮದ ಸ್ವೀಕಾರಾರ್ಹ ಅಂಶಗಳನ್ನು ಬಲು ಸಂತೋಷದಿಂದ ಸ್ವೀಕರಿಸಿರುತ್ತಾರೆ. ಆಡಳಿತದಲ್ಲೂ ಈಗಿರುವ ವ್ಯವಸ್ಥೆ ಇಂಗ್ಲೀಷರಿಂದ ಪಡೆದ ಆಡಳಿತ ವ್ಯವಸ್ಥೆಯೇ. ಈಗ ಈ ಸ್ಪರ್ಧೆ ಮೂಡುತ್ತಿರುವುದು ಕನ್ನಡವನ್ನು ಅಥವಾ ಪ್ರಾದೇಶಿಕ ಭಾಷೆಯನ್ನು ಎಲ್ಲ ರಂಗಗಳಲ್ಲಿ ಜಾರಿಗೆ ತರುವ ಪ್ರಯತ್ನ ಮತ್ತು ಹಿಂದಿಯನ್ನು ಬಲವಂತ ವಾಗಿ ಮೇಲೆ ಹೇರಲು ನಡೆಸುತ್ತಿರುವ ಪ್ರಯತ್ನ ಇವುಗಳಿಂದ ಉಂಟಾಗಿದೆ. ವಿದೇಶ ಗಳೊಡನೆ ವ್ಯವಹಾರ ಮಾಡಲು ಇಂಗ್ಲಿಷ್ ಅತ್ಯಗತ್ಯ. ಹಾಗೆಯೇ ಹಿಂದಿಯೂ ಕೇಂದ್ರ ಸರ್ಕಾರದೊಂದಿಗಿನ ಸಂಪರ್ಕ ಭಾಷೆಯಾಗುವ ಪ್ರಯತ್ನ ನಡೆಸುತ್ತಿದೆ. ಮಹಾತ್ಮಾಗಾಂಧೀಜಿ ಯವರು ಭಾರತದ ಎಲ್ಲ ಭಾಷೆಗಳ ಸಾರವನ್ನು ಪಡೆದುಕೊಂಡ ಹಿಂದೂಸ್ಥಾನಿ ಎಂಬ ಒಂದು ಭಾಷೆ ರಾಷ್ಟ್ರಭಾಷೆಯಾಗಬೇಕೆಂದು ಆಶಿಸಿದರು. ಆದರೆ ಅದಕ್ಕೆ ತದ್ವಿರುದ್ಧವಾಗಿ ಹಿಂದಿಯನ್ನು ಬಲವಂತವಾಗಿ ಹೇರುತ್ತಿರುವುದು ಸಾರ್ವಜನಿಕರ ವಿರೋಧಕ್ಕೆ ಕಾರಣ ವಾಗುತ್ತಿದೆ. ಶಿಕ್ಷಣದಲ್ಲೂ ಅನೇಕ ವಿದ್ಯಾರ್ಥಿಗಳು ಇತರೆ ವಿಷಯಗಳಲ್ಲಿ ಉತ್ತೀರ್ಣ ರಾದರೂ ಇಂಗ್ಲಿಷ್, ಹಿಂದಿಗಳಲ್ಲಿ ಅನುತ್ತೀರ್ಣರಾಗಿ ಅಮೂಲ್ಯ ವಿದ್ಯಾವರ್ಷಗಳನ್ನು ಕಳೆದುಕೊಂಡಿರುವುದುಂಟು. ಇದು ಈ ಸ್ಪರ್ಧೆಗೆ ಒಂದು ಕಾರಣ.

೩. ಶಿಕ್ಷಣ ವ್ಯವಸ್ಥೆಯಲ್ಲಿ ಕನ್ನಡ ಮಾಧ್ಯಮಕ್ಕೆ ಪರ ಮತ್ತು ವಿರೋಧವಾಗಿ ಮಂಡಿತವಾಗುತ್ತಿರುವ ಚರ್ಚೆಯ ಹಿನ್ನೆಲೆಯಲ್ಲಿ ಗೋಕಾಕ್ ವರದಿಗೆ ಕಾರಣವಾದ ಪರಿಸ್ಥಿತಿ ಗಳನ್ನು ಗಮನಿಸಬೇಕು. ನಮ್ಮ ಶಿಕ್ಷಣ ವ್ಯವಸ್ಥೆಯ ಚಿಂತಕರು ಹೆಚ್ಚಾಗಿ ಸಂಸ್ಕೃತ ಮತ್ತು ಇಂಗ್ಲಿಷ್ ಪರವಾದ ನೀತಿಯನ್ನು ತೋರುತ್ತಾ ಬಂದಿದ್ದಾರೆ. ಇಂಗ್ಲಿಷ್ ಮಾಧ್ಯಮ ಒಂದೇ ಪ್ರಗತಿಗೆ ಸಾಧನ ಎಂಬ ತಪ್ಪು ಅಭಿಪ್ರಾಯ ಬಲವಾಗಿ ಬೇರೂರುತ್ತಾ ಬಂದಿದೆ. ನನ್ನ ಅಭಿಪ್ರಾಯದಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಏಳನೆಯ ತರಗತಿಯವರೆಗೆ ಮಾತೃಭಾಷೆಯಲ್ಲಿಯೇ ಶಿಕ್ಷಣ ನಡೆಯಬೇಕು. ಭಾಷೆಯಾಗಿ ಇಂಗ್ಲಿಷ್ ಅಥವಾ ಹಿಂದಿಗಳನ್ನು ಕಲಿಸಲಿ. ಆದರೆ ಮಿಕ್ಕ ಪಠ್ಯ ವಿಷಯಗಳು ಕನ್ನಡ ಮಾಧ್ಯಮದಲ್ಲಿ ಇರಬೇಕು. ಭಾಷೆಯನ್ನು ಕಲಿಸು ವಾಗಲೂ ವಿದ್ಯಾರ್ಥಿ ಭಾಷೆಯನ್ನು ಓದಿ ವಿಚಾರ ಗ್ರಹಿಸುವ ಶಕ್ತಿ, ಆ ಭಾಷೆಯಲ್ಲಿ ತನ್ನ ಮನಸ್ಸಿನ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ವ್ಯಕ್ತಪಡಿಸುವ ಶಕ್ತಿ ಇವೆರಡೂ ಆತನಿಗೆ ದೊರಕುವಂತೆ ಮಾಡಬೇಕು. ಭಾಷೆಯಲ್ಲಿ ಈ ಶಕ್ತಿ ಪಡೆದ ವಿದ್ಯಾರ್ಥಿ ಏನನ್ನು ಓದಿದರೂ ಅದನ್ನು ಮನನ ಮಾಡಿಕೊಳ್ಳಬಲ್ಲವನಾಗುತ್ತಾನೆ. ಆರಂಭದಿಂದ ಕನ್ನಡದಲ್ಲೇ ಶಿಕ್ಷಣ ಕೊಟ್ಟು ಕನ್ನಡದ ಬಗ್ಗೆ ಪ್ರೀತಿ ಆದರ ಮೂಡಿಸಿದರೆ ಕನ್ನಡದ ಅಭಿವೃದ್ಧಿ ತಾನಾಗಿಯೇ ಆಗುತ್ತದೆ.

೪. ಕನ್ನಡ ಸಮರ್ಥವಾದಂತಹ ಭಾಷೆ. ಯಾವುದೇ ವಿಷಯವನ್ನು ಸ್ಪಷ್ಟವಾಗಿ ನಿಸ್ಸಂದಿಗ್ಧವಾಗಿ ಈ ಭಾಷೆಯಲ್ಲಿ ಹೇಳಬಹುದು. ವಿಜ್ಞಾನ ಬೋಧನೆಯ ವಿಷಯ ತೆಗೆದು

ಕೊಂಡಾಗ ಯಾವ ಭಾಷೆಯೂ ತನ್ನಲ್ಲಿರುವ ಮೂಲ ಪದಗಳನ್ನಷ್ಟೇ ಬಳಸಿ ವಿಜ್ಞಾನ ಭಾಷೆಯನ್ನು ಸೃಷ್ಟಿಸಿಲ್ಲ. ಜೀವಶಾಸ್ತ್ರ, ವೈದ್ಯಶಾಸ್ತ್ರ, ಕಾನೂನು ಮುಂತಾದ ಕ್ಷೇತ್ರಗಳಲ್ಲಿ ಇಂಗ್ಲಿಷ್ ಭಾಷೆ ಸಹ ಅನೇಕ ಲ್ಯಾಟಿನ್ ಹಾಗೂ ಗ್ರೀಕ್ ಪದಗಳನ್ನು, ಪದಾವಳಿಗಳನ್ನು, ಉಕ್ತಿಗಳನ್ನು ಹಾಗೆಯೇ ಸ್ವೀಕರಿಸಿ ತನ್ನದಾಗಿಸಿಕೊಳ್ಳುತ್ತಿದೆ. ಭಾಷೆ ಬೆಳೆಯಬೇಕಾದದ್ದೇ ಹೀಗೆ. ಅಂತಾರಾಷ್ಟ್ರೀಯ ಪ್ರಚಲಿತ ಪದಗಳನ್ನು ಕನ್ನಡದ ಲಿಪಿಯಲ್ಲಿ ಬರೆದು ನಮ್ಮದನ್ನಾಗಿಸಿಕೊಂಡು, ನಾವು ವಿಜ್ಞಾನದ ಭಾಷೆಯನ್ನು ರೂಪಿಸಿದರೆ ಅಂತಹ ಕಷ್ಟವೇನೂ ಆಗುವುದಿಲ್ಲ. ಕನ್ನಡವನ್ನು ಅಭಿವೃದ್ಧಿ ಪಡಿಸಬೇಕು ಎಂಬ ಉತ್ಸಾಹ ಹಾಗೂ ನಿಷ್ಠೆಯಿಂದ ಮುಂದುವರಿದಲ್ಲಿ, ಭಾಷಾ ಮಡಿವಂತಿಕೆಯ ಭಾವನೆಯನ್ನು ಬಿಟ್ಟಲ್ಲಿ, ಉನ್ನತ ಶಿಕ್ಷಣದ ವಿಜ್ಞಾನ ಬೋಧನೆಯು ಕನ್ನಡಮಾಧ್ಯಮದಲ್ಲಿ ಸಾಧ್ಯ. ಇಂದು ಉನ್ನತ ಶಿಕ್ಷಣಕ್ಕೆ ಇಂಗ್ಲಿಷ್ ಭಾಷೆಯ ಜ್ಞಾನವೊಂದಿದ್ದರೆ ಸಾಲದು. ತನ್ನ ಶಿಕ್ಷಣ ರಂಗಕ್ಕೆ ತಕ್ಕಂತೆ ವಿದ್ಯಾರ್ಥಿ ಫ್ರೆಂಚ್, ಜರ್ಮನ್, ರಷ್ಯನ್ ಹೀಗೆ ಬೇರೆ ಬೇರೆ ಭಾಷೆ ಕಲಿಯಬೇಕಾಗುತ್ತದೆ. ಮೂರು ತಿಂಗಳಲ್ಲೇ ಈ ಭಾಷೆಗಳನ್ನು ಓದಿ ವಿದೇಶದಲ್ಲಿ ಉನ್ನತ ಶಿಕ್ಷಣ ಪಡೆದುಬರುತ್ತಿಲ್ಲವೇ? ಕನ್ನಡದಲ್ಲಿ ಶಿಕ್ಷಣ ಸಾಮಗ್ರಿ ಸಿದ್ಧಪಡಿಸಿದರೆ ಉನ್ನತ ಶಿಕ್ಷಣವನ್ನು ಕನ್ನಡದಲ್ಲಿ ನೀಡುವುದು ಕಷ್ಟವೇನಲ್ಲ. ಕಂಪ್ಯೂಟರ್ ಇತ್ಯಾದಿಗಳಲ್ಲಿ ಕನ್ನಡ ಬಳಕೆ ಪ್ರಚಲಿತವಾಗುತ್ತಿರುವುದರಿಂದ ಶೀಘ್ರವಾಗಿ ಇಂಥ ಶಿಕ್ಷಣ ಸಾಮಗ್ರಿ ಸಿದ್ಧಪಡಿಸಬಹುದು. ಯಾವುದಕ್ಕೂ ಮನಸ್ಸು ಬೇಕು.

೫. ಭಾಷೆಯಲ್ಲಿನ ಪದಗಳ ಸೃಷ್ಟಿಯಲ್ಲಿ ಸಮೂಹ ಮಾಧ್ಯಮಗಳ ಪಾತ್ರ ಹಿರಿದು. ಸಮೂಹ ಮಾಧ್ಯಮಗಳಲ್ಲಿ ಬಳಕೆಯಾಗುವ ಪದಗಳಲ್ಲಿ ಏನೇ ದೋಷ ಇದ್ದರೂ ಶ್ರೀ ಸಾಮಾನ್ಯನು ಸ್ವೀಕರಿಸಿ ಬಳಕೆಗೆ ತಂದುಬಿಡುತ್ತಾನೆ. ಭಾಷಾ ಶುದ್ಧತೆಯನ್ನು ಬಹಳ ಕಳಕಳಿಯಿಂದ ಈ ಮಾಧ್ಯಮಗಳು ಕಾಪಾಡಿಕೊಂಡು ಬರಬೇಕು. ಇಂಗ್ಲಿಷ್ ಓದಿನ ಪ್ರಭಾವವೋ, ಕನ್ನಡದ ಓದು ಕಡಿಮೆಯಾಗಿರುವ ಕಾರಣದಿಂದಲೋ ಏನೋ ಇತ್ತೀಚೆಗೆ ಪತ್ರಿಕೆಗಳಲ್ಲಿ ಮತ್ತಿತರ ಮಾಧ್ಯಮಗಳಲ್ಲಿ ತಪ್ಪು ತಪ್ಪಾಗಿ ಕನ್ನಡವನ್ನು ಬಳಸುತ್ತಿರುವುದನ್ನು ನಾವು ದಿನನಿತ್ಯ ನೋಡುತ್ತಿದ್ದೇವೆ. 'ಶಾಕಾಹಾರ' ಎಂಬ ಪದವನ್ನು 'ಶಾಖಾಹಾರ' ಎಂದು ತಪ್ಪಾಗಿ ಬರೆದು ಇದಕ್ಕೆ ಮಾಂಸಾಹಾರ ಎಂಬ ತಪ್ಪು ಅರ್ಥವನ್ನು ನೀಡಿರುವವರೂ ಉಂಟು. ಸಮೂಹ ಮಾಧ್ಯಮಗಳ ಶಿಕ್ಷಣವೆಲ್ಲ ಈಗ ಇಂಗ್ಲಿಷ್ ಮಾಧ್ಯಮದಲ್ಲೇ ಆಗುತ್ತಿದೆ. ಕನ್ನಡದಲ್ಲಿ ಈ ಶಿಕ್ಷಣ ನಡೆಯುವಂತಾಗಬೇಕು. ಮೂಲಭೂತವಾಗಿ ಕನ್ನಡದ ವ್ಯಾಕರಣಬದ್ಧ ಕಲಿಕೆಗೆ ಪ್ರೋತ್ಸಾಹ ನೀಡಬೇಕು. ಇಲ್ಲದೆ ಹೋದಲ್ಲಿ ಕನ್ನಡದ ಸ್ವರೂಪ ವಿಲಕ್ಷಣಗೊಳ್ಳುವಂತಾಗುತ್ತದೆ.

೬. ಸಾಹಿತ್ಯದ ಮುಖ್ಯ ಉದ್ದೇಶ ಬರಹಗಾರ ತನ್ನ ವಿಚಾರಗಳನ್ನು, ಭಾವನೆಗಳನ್ನು ಓದುಗರೊಂದಿಗೆ ಹಂಚಿಕೊಳ್ಳುವುದೇ ಆಗಿದೆ. ಅದಕ್ಕಾಗಿ ಭಾಷೆ ಸಂವಹನಶೀಲವಾಗಿ ಇರಬೇಕು. ನಾಲ್ಕು ಜನರಿಗೆ ಅರ್ಥವಾಗದ ಭಾಷೆಯಲ್ಲಿ ಬರೆಯುವ ಲೇಖನ

ತನಗಾಗಿ ದಂತದಗೋಪುರ ನಿರ್ಮಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆ ಎಂದೇ ಹೇಳಬೇಕು. ಹಿಂದೊಂದು ಕಾಲದಲ್ಲಿ ಕವಿಗಳ ಪರಿಚಯವೇ ಇರದಿದ್ದರೂ ಅವರ ಪದ್ಯಗಳು ಜನರ ನಾಲಿಗೆಯ ಮೇಲೆ ಕುಣಿದಾಡುತ್ತಿದ್ದವು ಈ ದಿನಗಳಲ್ಲಿ ಕವಿಗಳ ಪರಿಚಯವೇ ಹೆಚ್ಚಾಗಿದ್ದು ಅವರು ಏನು ಬರೆದಿದ್ದಾರೆ ಎಂಬುದನ್ನು ತಿಳಿಯದಿದ್ದವರೇ ಬಹಳವಾಗಿದ್ದಾರೆ. ಜನಪ್ರಿಯವಾಗಿದ್ದು ಉನ್ನತವಾಗಿರುವ ಸಾಹಿತ್ಯವಿಲ್ಲವೇ? ಕವಿಗಳು, ಸಾಹಿತಿಗಳು ಆದಷ್ಟು ಜನರಿಗೆ ಅರ್ಥವಾಗುವ ಭಾಷೆಯಲ್ಲಿ ಬರೆದರೆ ಕನ್ನಡದ ಬಗ್ಗೆ, ಅದರ ಶ್ರೀಮಂತಿಕೆಯ ಬಗ್ಗೆ ಜನರಲ್ಲಿ ಆದರಾಭಿಮಾನಗಳು ಮೂಡುತ್ತವೆ.



## ಯು. ಆರ್. ರಾವ್

೧. ಯಾವುದೇ ಒಂದು ನೀತಿಯನ್ನು ರೂಪಿಸಲು ಹೊರಟರೆ, ಆ ನೀತಿಯು ಸರ್ಕಾರದ ಭಾವನೆಯಲ್ಲಿ ಜನತೆಗೆ ಶ್ರೇಯಸ್ಸನ್ನು ಉಂಟು ಮಾಡುವುದಾದರೂ, ಹಲವಾರು ಸಂಕುಚಿತ ಭಾವನೆಯ ಶಕ್ತಿಗಳು ಏನೊಂದು ಹೊಸ ನೀತಿಯನ್ನು ರೂಪಿಸುವ ಕಾರ್ಯದಲ್ಲೂ ಒಡ್ಡುವ ಅಡಚಣೆಗಳು ಅಪರೂಪವೇನಲ್ಲ. ಕರ್ನಾಟಕದ ಸಂದರ್ಭದಲ್ಲಿ ಹೇಳುವುದಾದರೆ, ರಾಜ್ಯಗಳು ಪುನರ್ರಚನೆಯಾಗಿ ಹಲವಾರು ಇತರ ಭಾಷೆಗಳನ್ನಾಡುವ ಪ್ರದೇಶಗಳು ಕರ್ನಾಟಕಕ್ಕೆ ಸೇರ್ಪಡೆಯಾದಾಗ, ಆ ಪ್ರದೇಶದ ಜನರಿಗೆ ಇದ್ದ ತಾವು 'ಹೊರಗಿನವರು' ಎಂಬ ಭಾವನೆ ಈಗಲೂ ಅಳಿದಿಲ್ಲ. ಉದಾಹರಣೆಗೆ ಬೆಳಗಾಂವಿ. ಕರ್ನಾಟಕದಲ್ಲಿ ಅನೇಕ ಭಾಷಾಜನರು ನೆಲೆಸಿದ್ದಾರೆ. ಅವರು ಆಡುವ ಭಾಷೆ ಹಲವು. ಹೀಗಾಗಿ ರಾಜಕೀಯವಾಗಿ ಕನ್ನಡನಾಡು ಒಂದಾದರೂ ಮಾನಸಿಕವಾಗಿ ಒಂದಾಗಲಿಲ್ಲ. ಇದರಿಂದಾಗಿ ಏಕರೂಪದ ಭಾಷಾನೀತಿಯನ್ನು ಜಾರಿಗೆ ತರುವುದು ಕಷ್ಟವಾಗಿದೆ.

ಮಧ್ಯಮವರ್ಗದ ಹಾಗೂ ನಗರವಾಸಿಗಳಾದ ಜನತೆಯಲ್ಲಿ ಆಂಗ್ಲಭಾಷೆಯೊಂದೇ ತಮ್ಮ ಜೀವನದಲ್ಲಿ ಹೊಸ ಅವಕಾಶಗಳನ್ನು ನೀಡುವುದೆಂಬ ನಂಬಿಕೆ ಬಲವಾಗಿ ಬೇರೂರಿದೆ. ಸರ್ಕಾರೀ ಉದ್ಯೋಗವನ್ನು (ಅದರಲ್ಲೂ ತಾಂತ್ರಿಕ ವರ್ಗವನ್ನು ಬಿಟ್ಟು) ಬಿಟ್ಟರೆ, ಉನ್ನತ ಹುದ್ದೆಗಳಲ್ಲಿರುವವರೆಲ್ಲರೂ ಆಂಗ್ಲ ಭಾಷೆಯನ್ನೇ ತಮ್ಮ ದಿನನಿತ್ಯದ ವ್ಯವಹಾರದಲ್ಲಿ ಬಳಸುವುದನ್ನು ನಾವು ಗಮನಿಸಿದ್ದೇವೆ. ಇತರ ರಾಜ್ಯಗಳ, ರಾಷ್ಟ್ರಗಳ ಉದ್ಯಮಿಗಳೊಡನೆ ವ್ಯವಹರಿಸಲು ಆಂಗ್ಲ ಭಾಷೆಯನ್ನು ಬಿಟ್ಟರೆ, ಬೇರಾವ ಸಂಪರ್ಕ ಭಾಷೆಯೂ ಇನ್ನೂ ಬಳಕೆಗೆ ಬಂದಿಲ್ಲ. ಹೀಗಿರುವಾಗ ಆಂಗ್ಲಭಾಷೆಗೆ ಹೊರತಾದ ಯಾವುದೇ ಸಮುದಾಯದ ಭಾಷಾನೀತಿಯನ್ನು ರೂಪಿಸುವುದು ಒಂದು ಕಠಿಣವಾದ ಕೆಲಸವಾಗಿದೆ.

ಶಿಕ್ಷಣ ಮಾಧ್ಯಮದಲ್ಲೂ, ಪ್ರಪಂಚದಲ್ಲಿ ಅನೇಕ ವಿಷಯಗಳಲ್ಲಿ ಆಗುತ್ತಿರುವ ಹೊಸ ಜಾಗೃತಿಯೊಡನೆ, ಸಮಕಾಲೀನವಾಗಿರಲು ಈ ಎಲ್ಲ ವಿಷಯಗಳಲ್ಲೂ ಕನ್ನಡದಲ್ಲಿ ಅಥವಾ ಬೇರಾವುದೇ ಮಾತೃಭಾಷೆಯಲ್ಲಿ ಪುಸ್ತಕಗಳು, ನಿಯತಕಾಲಿಕಗಳು ದೊರಕುವುದು ಕಷ್ಟವೇ.

ನಮ್ಮ ರಾಜಕೀಯ ನಾಯಕರೂ ಸಹ ನಮಗೆ ತಿಳಿದಿರುವಂತೆ ಮೇಲುನೋಟಕ್ಕೆ ಸಮುದಾಯದ ಭಾಷಾನೀತಿಯನ್ನು ರೂಪಿಸುವ ಕೆಲಸದಲ್ಲಿ ಸಹಕಾರವನ್ನು ತೋರಿದರೂ, ಅವರಲ್ಲಿ ಈ ಬಗೆಗೆ ಇರುವ ಪ್ರಾಮಾಣಿಕತೆ ಸಂಶಯಾಸ್ಪದವಾದುದು. ಏಕೆಂದರೆ ಹಲವಾರು ರಾಜಕಾರಣಿಗಳು, ತೋರಿಕೆಗೆ ಕನ್ನಡದ ಅಭಿಮಾನಿಗಳಂತೆ ಕಂಡರೂ ತಮ್ಮವರನ್ನು ಬೇರೆ ಭಾಷೆಗಳ ಮಾಧ್ಯಮದಲ್ಲಿ-ಅದರಲ್ಲೂ ವಿಶೇಷವಾಗಿ ಇಂಗ್ಲಿಷ್ ಮಾಧ್ಯಮದಲ್ಲಿ-ಶಿಕ್ಷಣ

ಪಡೆಯುವಂತೆ ಪ್ರೇರೇಪಿಸುವ ದ್ವಂದ್ವನೀತಿ ಅನುಸರಿಸುತ್ತಾರೆ. ಅವರ ಅಂತರಂಗ-ಬಹಿರಂಗಗಳು ಬೇರೆ ಬೇರೆಯೇ ಆಗಿವೆ.

೨. ಭಾರತ ಅನೇಕ ಸಂಸ್ಕೃತಿಗಳ ತವರೂರು. ನಮ್ಮಲ್ಲಿ ವಿವಿಧ ಸಂಸ್ಕೃತಿಗಳು, ಜಾತಿ ಮತಗಳು, ಭಿನ್ನವಾದ ಭೌಗೋಳಿಕ ವಾತಾವರಣ ಹಾಗೂ ಪ್ರಾಕೃತಿಕ ಸನ್ನಿವೇಶಗಳು ಒಳಗೊಂಡಿವೆ. ಒಂದೊಂದು ಸಂಸ್ಕೃತಿಯೂ ತನ್ನದೇ ಆದ ವಿಶಿಷ್ಟ ಸೊಗಸನ್ನು ಹೊಂದಿವೆ. ವಿಭಿನ್ನ ವೇಷ-ಭೂಷಣ, ಆಹಾರದ ರೀತಿ-ನೀತಿಗಳನ್ನು ನಿತ್ಯ ಜೀವನದಲ್ಲಿ ನಾವು ಕಾಣಬಹುದು. ಭಾಷೆಯು ಈ ಎಲ್ಲ ರೀತಿ-ನೀತಿಗಳಿಗೆ ಹೊಂದಿಕೊಂಡಂತೆ ವಿಕಾಸಗೊಳ್ಳುತ್ತದೆ. ಮಾತೃಭಾಷೆಯು ಮನುಷ್ಯನ ರೀತಿ-ನೀತಿ ಮತ್ತು ಅವನ ಜೀವನದ ಅವಿಭಾಜ್ಯ ಅಂಗ. ನಾವೇ ನೋಡುವಂತೆ, ಉದಾಹರಣೆಗೆ ಮಲೆಯಾಳಂ ಭಾಷೆಯ ಪದಗಳ ಉಚ್ಚಾರಣೆ ಹೊರಗಿನ ಪ್ರದೇಶದವರಿಗೆ ಬಹಳ ಕಷ್ಟ. ಹಾಗೆಯೇ ಬೇರೆ ಭಾಷೆಗಳು ಆಯಾ ಪ್ರದೇಶದ ಹಾಗೂ ಆಯಾ ಜನಗಳ ರೀತಿ-ನೀತಿಗಳಿಗನುಸಾರವಾಗಿರುತ್ತವೆ.

ಅಂತೆಯೇ ಯಾವುದೇ ಭಾಷೆಯನ್ನು ಅದು ಜಾರಿಯುಲ್ಲಿರುವ ಪ್ರದೇಶವನ್ನು ಹೊರತುಪಡಿಸಿ ಬೇರೆಯವರ ಮೇಲೆ ಬಲವಂತವಾಗಿ ಹೇರಿದರೆ, ಅವರ ಸಂಸ್ಕೃತಿಯ ಮೇಲೆ ಪ್ರಭಾವ ಬೀರಬಹುದೆಂಬ ಶಂಕೆ ಆ ಜನರಲ್ಲಿ ಮೂಡುವುದು ಸಹಜ. ಭಾಷೆ ನಮ್ಮ ಭಾವನೆಯನ್ನು ವ್ಯಕ್ತಪಡಿಸುವ ಒಂದು ಸಾಧನ. ಅವರವರ ಭಾಷೆಯಲ್ಲಿ ಅವರವರ ಭಾವನೆಯನ್ನು ವ್ಯಕ್ತಪಡಿಸುವುದು ಸುಲಭ. ಅದನ್ನು ಮಾರ್ಪಾಡು ಮಾಡುವುದು ಹಿತಕರವಲ್ಲ. ಇಂಗ್ಲಿಷ್ ಭಾಷೆಯನ್ನು ನಮ್ಮ ವ್ಯಾವಹಾರಿಕ ವಿಧಾನಕ್ಕಾಗಿ ಮಾತ್ರ ವಿಧಿ ಇಲ್ಲದೆ ಬಳಸುತ್ತೇವೆಯೇ ಹೊರತು, ನಮ್ಮ ಭಾವನೆಯನ್ನು ನಮ್ಮವರ ಜೊತೆ ಹಂಚಿಕೊಳ್ಳುವುದಕ್ಕಲ್ಲ. ಹಿಂದೀ ಭಾಷೆ ಇಂಗ್ಲಿಷ್ ಭಾಷೆಯಷ್ಟು ವ್ಯಾಪಕವಾಗಿ ಬಳಕೆಯಲ್ಲಿಲ್ಲ. ಇದರಿಂದಾಗಿ ಆ ಭಾಷೆಯನ್ನು ಕಲಿತುಕೊಳ್ಳಲು ಹಾಗೂ ದಿನನಿತ್ಯದ ವ್ಯವಹಾರದಲ್ಲಿ ಇಂಗ್ಲಿಷ್ ಭಾಷೆಯ ಸ್ಥಾನಕ್ಕೆ ಬರಲು ಹೆಚ್ಚು ಕಾಲಾವಕಾಶ ಬೇಕಾಗುತ್ತದೆ ಎನ್ನುವುದು ತಳ್ಳಿಹಾಕುವಂಥ ವಾದವಲ್ಲ. ಮೊದಲ ಆಯ್ಕೆ ನಮ್ಮ ಭಾಷೆಯಲ್ಲಿ ವ್ಯವಹರಿಸುವುದು, ಅನಿವಾರ್ಯವಾದಲ್ಲಿ ಮಾತ್ರ ಹೆಚ್ಚು ಬಳಕೆಯಲ್ಲಿರುವ ಭಾಷೆಯಲ್ಲಿ ವ್ಯವಹರಿಸಬಹುದು. ಅತ್ಯಂತ ಹೆಚ್ಚು ವಿಷಯಗಳನ್ನು ತಿಳಿದುಕೊಳ್ಳಲು ಸಮರ್ಥವಾಗಿರುವ ಭಾಷೆಯನ್ನು ಆರಿಸಿಕೊಳ್ಳಬೇಕು. ಈ ಎರಡನೆಯ ಭಾಷೆ ಕರ್ನಾಟಕದ ಹೆಚ್ಚು ಜನರ ಭಾವನೆಯಲ್ಲಿ ಇಂಗ್ಲಿಷ್ ಎಂದು ನನ್ನ ನಂಬಿಕೆ.

೩. ಶಿಕ್ಷಣ ನಮ್ಮ ಅಗತ್ಯಗಳನ್ನನುಸರಿಸಿ, ಯೋಜನಾಬದ್ಧವಾಗಿ, ಗುಣಬದ್ಧವಾಗಿ, ರಾಜಕೀಯ ಮುಕ್ತವಾಗಿ ನಮ್ಮ ಭಾಷೆಯಲ್ಲಿ ನಡೆಯಬೇಕು ಎನ್ನುವ ಅಭಿಪ್ರಾಯಗಳು ಕೇಳಿಬರುತ್ತಿವೆ. ಮಾತೃಭಾಷೆಯಲ್ಲಿ ಪಾಠ-ಪ್ರವಚನಗಳು ನಡೆದರೆ ಗ್ರಹಣಶಕ್ತಿಯ ದೃಷ್ಟಿಯಿಂದ ಪರಿಣಾಮಕಾರಿ ಎಂಬ ಮಾತು ನಿಜ. ಖಂಡಿತವಾಗಿಯೂ ಇದು ಉಪಯುಕ್ತವಾದುದು. ಮಾತೃಭಾಷೆಯಲ್ಲಿ ಶಿಕ್ಷಣ ದೊರಕಬೇಕು ಎಂದು ಎಲ್ಲರೂ ಹೇಳುತ್ತಾರೆ.

ಆದರೆ ಅದು ಹೇಗಿರಬೇಕು? ಅದರ "ನೀಲನಕ್ಷೆ" ಏನು? ಎಂಬುದು ಇಂದಿಗೂ ಚಿದಂಬರ ರಹಸ್ಯವಾಗಿಯೇ ಉಳಿದಿದೆ. ಕನ್ನಡ ಜನತೆಗೆ ಕನ್ನಡದಲ್ಲೇ ಶಿಕ್ಷಣ ದೊರಕಬೇಕಾದುದು ಅನಿವಾರ್ಯವೂ ಹೌದು, ಅಗತ್ಯವೂ ಹೌದು. ಆದರೆ ಮುಂದುವರಿದ ಶಿಕ್ಷಣದಲ್ಲಿ ಹೊಸ ವಿಷಯಗಳನ್ನು ಗ್ರಹಿಸಲು, ಹೊಸ ಅವಕಾಶಗಳನ್ನು ಪಡೆದುಕೊಳ್ಳಲು, ಹೊಸತೊಂದು ಭಾಷೆಯನ್ನು ಕಲಿಯುವುದು ಅಗತ್ಯವಾಗುತ್ತದೆ. ಇದು ತಪ್ಪೇನೂ ಅಲ್ಲ. ಈ ಮೇಲಿನ ಕಾರಣಗಳನ್ನು ಬಿಟ್ಟು ಕೇವಲ ಒಂದೇ ಭಾಷೆಯನ್ನು ಎಲ್ಲ ಸಂದರ್ಭಗಳಲ್ಲೂ ಉಪ ಯೋಗಿಸುವುದನ್ನು ಕಡ್ಡಾಯಗೊಳಿಸುವುದು ನಿಸ್ಸಂದೇಹವಾಗಿ ಸಹಜವೂ ಹಾಗೂ ಪ್ರಾಮಾಣಿಕವೂ ಆದ ವಾದವೆಂದು ಪರಿಗಣಿಸಲು ಸಾಧ್ಯವಿಲ್ಲ. ಯಾವ ಭಾಷೆಯಲ್ಲಿ, ಯಾರಿಗೆ, ಯಾವ ಹಂತದಲ್ಲಿ ಹೇಗೆ ಸೂಕ್ತವೋ ಅಂಥ ಭಾಷೆಯನ್ನು ಬಳಸುವದು ಉಚಿತವಾಗುತ್ತದೆ. ಇಂಥ ಬಲವಂತ 'ಮಾಘಸ್ನಾನ'ವನ್ನು ಭಾಷೆಯೆಂಬ ಸಂದರ್ಭದಲ್ಲಿ ಹೇರುವುದು ಸಮಾಜದ ಹಿತದ ದೃಷ್ಟಿಯಿಂದ ಸರ್ವಥಾ ಉಚಿತವಾದುದಲ್ಲ.

೪. ವಿಜ್ಞಾನದ ಮುನ್ನಡೆಯೇ ಮಾನವನ ಪ್ರಗತಿಗೆ ಕಾರಣ. ಸತ್ಯಾನ್ವೇಷಣೆ ವಿಜ್ಞಾನದ ಧ್ಯೇಯ. ಜೀವನದ ಎಲ್ಲ ಕ್ಷೇತ್ರಗಳ ಮೇಲೂ ವಿಜ್ಞಾನ ತನ್ನ ಪ್ರಭಾವವನ್ನು ಬೀರಿದೆ. ವಿಜ್ಞಾನ ವಿಷಯದಲ್ಲಿ ಸಾಂಸ್ಕೃತಿಕ, ಪ್ರಾದೇಶಿಕ, ರಾಜಕೀಯ ಅಥವಾ ಭಾಷೆ ಎಂದು ವಿಭಜನೆಯ ಸೀಮಾರೇಖೆಯನ್ನು ಎಳೆಯುವುದು ಒಂದು ದೊಡ್ಡ ತಪ್ಪು. ಈ ವಿಷಯದಲ್ಲಿ ಅತಿ ಹೆಚ್ಚು ಸಂಗತಿಗಳನ್ನು ಸಮಕಾಲೀನವಾಗಿ ರೂಪಿಸಿಕೊಳ್ಳುವುದು ಬಹು ಮುಖ್ಯ. ಕನ್ನಡದಲ್ಲಿ ವಿಜ್ಞಾನವನ್ನು ಬೋಧಿಸುವುದು ಕಷ್ಟಸಾಧ್ಯವಾದ ಕೆಲಸವೇನಲ್ಲ. ಮನಸ್ಸು ಬೇಕಷ್ಟೆ. ವಿಜ್ಞಾನವನ್ನು ಕನ್ನಡಮಾಧ್ಯಮದಲ್ಲಿ ಪ್ರಭಾವಶಾಲಿಯಾಗಿ ಬಳಸಿಕೊಳ್ಳಬೇಕಾದರೆ, ನಾವು ಹಲವು ಸಲಕರಣೆಗಳನ್ನು ಸಿದ್ಧಮಾಡಿಕೊಳ್ಳಬೇಕು. ಅವುಗಳೆಂದರೆ, ಬೇರೆ ಭಾಷೆಗಳ ಉತ್ತಮವಾದ ವಿಜ್ಞಾನ ವಿಷಯದ ಪುಸ್ತಕಗಳನ್ನು ಕನ್ನಡಕ್ಕೆ ಭಾಷಾಂತರಿಸುವುದು; ಮುಖ್ಯವಾಗಿ ವಿಜ್ಞಾನದ ವಿಷಯಗಳ ಮೇಲೆ ಕನ್ನಡದಲ್ಲಿ ಬರೆಯುವಾಗ ನಾವು ಪ್ರತಿಯೊಂದು ಇಂಗ್ಲೀಷಿನ ಪದಗಳಿಗೂ ಕನ್ನಡದ ಅನುವಾದ ಮಾಡುವುದು ಬಹಳ ತಪ್ಪು. ಹಲವಾರು ಇಂಗ್ಲೀಷಿನ ಪದಗಳು ಈಗ ಜನಸಾಮಾನ್ಯರಲ್ಲಿ ರೂಢಿಯಾಗಿ ಬಳಕೆಯಲ್ಲಿವೆ. ಉದಾಹರಣೆಗೆ ಸ್ವಿಚ್ಚು, ಸಿಗ್ನಲ್ ಮುಂತಾದವು. ಅತಿ ಮುಖ್ಯವಾಗಿ ಪ್ರತಿಯೊಂದು ಭಾಷೆಯೂ ಬೇರೆ ಭಾಷೆಗಳಿಂದ ಹಲವಾರು ಪದಗಳನ್ನು ರೂಢಿಸಿ ಬಳಸಿಕೊಂಡು ವೃದ್ಧಿಯಾಗಿದೆ. ಅಲ್ಲದೆ ಕೆಲವು ಪದಗಳು ಅಂತರರಾಷ್ಟ್ರೀಯ ಮಟ್ಟದಲ್ಲಿ ಆದರ್ಶ ಪದಗಳಾಗಿ ಬಳಕೆಯಲ್ಲಿವೆ. ಉದಾಹರಣೆಗೆ Km ನ್ನು ಕಿ.ಮೀ., Cm ನ್ನು ಸೆಂ.ಮೀ. Mw ನ್ನು ಮೆ.ವಾ. ಎಂದು ಕನ್ನಡದಲ್ಲಿ ತರ್ಜುಮೆ ಮಾಡುವುದ ರಿಂದ ವಿಜ್ಞಾನದ ತರಬೇತಿಗೆ ಅಪಾರವಾದ ಹಾನಿಯಾಗುತ್ತದೆ ಎನ್ನುವುದನ್ನು ನಾವು ಮರೆಯಬಾರದು. ಚೀನೀ, ಜಪಾನಿ, ರಶ್ಯನ್ ಭಾಷೆಗಳಲ್ಲಿ ವಿಜ್ಞಾನದ ಪುಸ್ತಕಗಳಲ್ಲಿ ಅಂತರರಾಷ್ಟ್ರೀಯವಾಗಿ ಒಪ್ಪಿಕೊಂಡ ನಿರ್ದಿಷ್ಟ ಪದಗಳನ್ನು ಬಳಕೆ ಮಾಡುವುದಾ ನಮಗೆ

ಕಂಡುಬರುತ್ತದೆ. ಈ ದೃಷ್ಟಿಯಲ್ಲಿ ವೈಜ್ಞಾನಿಕ ಪತ್ರಿಕೆಗಳು ಅಗತ್ಯ. ನಿಯತಕಾಲಿಕೆಗಳು ಪ್ರತಿ ಸಂಚಿಕೆಯಲ್ಲೂ ಇಂತಿಷ್ಟು ಪುಟಗಳನ್ನು ವಿಜ್ಞಾನ ಸಂಬಂಧದ ವಿಷಯಗಳಿಗೆ ಮೀಸಲಿಟ್ಟು, ಪ್ರಚಲಿತ ವೈಜ್ಞಾನಿಕ ಲೇಖನಗಳನ್ನು ಪ್ರಕಟಿಸುತ್ತಿರುವುದು ಗಮನಾರ್ಹ ವಾದುದು. ಕನ್ನಡದಲ್ಲಿ ಹಲವು ವೈಜ್ಞಾನಿಕ ಪತ್ರಿಕೆಗಳು ಪ್ರಕಟವಾಗುತ್ತಿರುವುದು ಸಂತೋಷದ ವಿಷಯ. ಜನಸಾಮಾನ್ಯರಲ್ಲಿ ವೈಜ್ಞಾನಿಕ ಮನೋಭಾವವನ್ನು ಉಳಿಸಿ, ಬೆಳೆಸಲು ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಕನ್ನಡ ಮಾಧ್ಯಮವನ್ನು ಜಾರಿಗೊಳಿಸುವುದು ಅತ್ಯಂತ ಸೂಕ್ತವೆನಿಸುತ್ತದೆ. ಆದರೆ ಉನ್ನತ ಶಿಕ್ಷಣಕ್ಕೆ ಬಂದಾಗ, ಸದ್ಯಕ್ಕೆ ಆಂಗ್ಲ ಭಾಷೆಯೇ ಅತಿಸೂಕ್ತವಾದುದೆನಿಸುತ್ತದೆಂದು ನನ್ನ ವೈಯಕ್ತಿಕ ಅಭಿಪ್ರಾಯ. ಕನ್ನಡಕ್ಕೆ ಅನುವಾದ ಮಾಡಲು ಭಾಷೆಯ ಮೇಲೆ ಪ್ರಭುತ್ವವಿರುವ ಲೇಖಕರು, ಬೆರಳಚ್ಚು ಯಂತ್ರ, ಗಣಕಯಂತ್ರ, ಆಕರಸಾಹಿತ್ಯ, ತಾಂತ್ರಿಕ ಶಬ್ದಕೋಶ–ಇವೆಲ್ಲ ತುಂಬ ಅಗತ್ಯ ವಾದುವು. ವೈಜ್ಞಾನಿಕವಾಗಿ ಕನ್ನಡ ಬೆಳೆಯಲು ಇವೆಲ್ಲ ಪೂರಕವಾಗುತ್ತವೆ. ಇಂತಹ ಕಾರ್ಯವನ್ನು ಸಾಧಿಸಲು ಒಂದು ಸಮರ್ಪಕವಾದ ವೇಳಾಪಟ್ಟಿಯನ್ನು ಹಾಕಿಕೊಂಡು, ಹಂತಹಂತವಾಗಿ ಕನ್ನಡದಲ್ಲಿ ವೈಜ್ಞಾನಿಕ ಬರವಣಿಗೆಯನ್ನು ಹೆಚ್ಚು ಸಮರ್ಪಕವಾಗಿ ಪಳಗಿಸಿ ಬೆಳೆಸುವಲ್ಲಿ ತರಬೇತಿ ಶಿಬಿರಗಳು, ಕಾರ್ಯಾಗಾರಗಳು ಸಹ ಮಹತ್ವವಾದುವು. ಇದರಿಂದ ವೈಜ್ಞಾನಿಕ ಬೋಧನೆಯ ಹಾದಿ ಸುಗಮವಾಗುತ್ತದೆ. ಎಲ್ಲಕ್ಕೂ ಮಿಗಿಲಾಗಿ ಕನ್ನಡದಲ್ಲಿ ಚಿಂತನೆ ಮಾಡಿ, ಅದನ್ನು ಸರಳ ಭಾಷೆಯಲ್ಲಿ ಶ್ರೀಸಾಮಾನ್ಯನಿಗೆ ಅರ್ಥವಾಗು ವಂತೆ ಬರೆಯುವ ಅಭ್ಯಾಸ ಮೊದಲ ಅಗತ್ಯ. ಕನ್ನಡ ಬಳಕೆಯಲ್ಲಿ ಬೇರೆ ಭಾಷೆಗಳ ಪದಗಳನ್ನು, ಪರಿಕಲ್ಪನೆಯನ್ನು ಪಡೆಯುವುದು ಖಂಡಿತ ತಪ್ಪಲ್ಲ. ಅದು ಬದುಕಿನ ಅಗತ್ಯವೂ ಹೌದು. ಇದರ ಬಗೆಗೆ ಮಡಿವಂತಿಕೆಯ ಆಗತ್ಯವಿಲ್ಲ. ಇದರಿಂದ ಭಾಷೆ ಸಮೃದ್ಧವಾಗುತ್ತದೆ. ಎಲ್ಲಕ್ಕೂ ಮಿಗಿಲಾಗಿ ಮೊದಲು ಮನಸ್ಸು ಮುಖ್ಯ. ಮಿಕ್ಕ ಪರಿಕರಗಳು ತಂತಾನೆ ಒದಗಿ ಬರುತ್ತವೆ. ಈ ದೃಷ್ಟಿಯಲ್ಲಿ ವಿಶ್ವವಿದ್ಯಾಲಯಗಳು, ಕನ್ನಡ ಸಾಹಿತ್ಯ ಪರಿಷತ್ತು, ಅಕಾಡೆಮಿ ಮುಂತಾದುವು ಮಹತ್ವದ ಕೊಡುಗೆ ನೀಡಬಲ್ಲವು.

೫. ಕನ್ನಡ ಭಾಷೆಯ ಸ್ವರೂಪ ಮತ್ತು ಪ್ರಮಾಣಗಳು ಸಮೂಹ ಮಾಧ್ಯಮ ಗಳಲ್ಲಿ ನಿಯಂತ್ರಣಕ್ಕೊಳಪಟ್ಟಿವೆ ಎನ್ನುವುದು ಭಾಗಶಃ ಒಪ್ಪತಕ್ಕ ಮಾತು. ವೃತ್ತ ಪತ್ರಿಕೆಗಳಲ್ಲಿ ಬಳಸುವ ಭಾಷೆ ಯಾವುದೇ ನಿಯಂತ್ರಣಕ್ಕೆ ಒಳಪಡುವುದಿಲ್ಲ ಎನ್ನುವುದು ಅನುಭವವೇದ್ಯವಾದುದು. ಆದರೆ ಅದೇ ಭಾಷೆ ದೃಶ್ಯ-ಶ್ರಾವ್ಯ ಮಾಧ್ಯಮಕ್ಕೆ ಬಂದಾಗ ನಿಯಂತ್ರಣಕ್ಕೊಳಪಡಬೇಕಾದುದು ಅಗತ್ಯವೂ, ಅನಿವಾರ್ಯವೂ ಆಗುತ್ತದೆ, ನೀತಿಸಂಹಿತೆಯ ದೃಷ್ಟಿಯಿಂದ. ಆರೋಗ್ಯಕರವಲ್ಲದ ಭಾಷೆಯ ಬಳಕೆ ಜನ ಜೀವನದ ಮೇಲೆ ಭಾರೀ ಅನಾಹುತವನ್ನು ಮಾಡಬಲ್ಲದು. ಅಂಥ ಹಲವಾರು ದೃಷ್ಟಾಂತಗಳು ನಮ್ಮ ಮುಂದಿವೆ. ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಇದು ಸ್ವಲ್ಪ ಅಡ್ಡಿ ಉಂಟುಮಾಡುತ್ತದೆ ಎಂಬ ಮಾತಿನಲ್ಲಿ ಸತ್ಯವಿದೆ. ಎಂದೇ ಭಾಷೆಯ ಬಳಕೆಯಲ್ಲಿ ಹೆಚ್ಚು ಎಚ್ಚರವಹಿಸುವುದು

ಅಗತ್ಯವಾಗುತ್ತದೆ -ಇದನ್ನೇ ನಿಯಂತ್ರಣವೆನ್ನಬಹುದು. ಎಂದೇ ಸಮೂಹ ಮಾಧ್ಯಮ ಗಳಲ್ಲಿ ರಾಜಕೀಯ ಒತ್ತಡಕ್ಕಿಂತ ಮಾನಸಿಕ ಒತ್ತಡಗಳು ನಿಯಂತ್ರಿಸುತ್ತವೆ ಎನ್ನಬಹು ದೇನೋ. ಹೀಗಾಗಿ, ಕನ್ನಡದ ಸ್ವರೂಪ ಮತ್ತು ಪ್ರಮಾಣಗಳು ಒತ್ತಡಕ್ಕೊಳಗಾಗಿ ನಿಯಂತ್ರಿತಗೊಳ್ಳುತ್ತದೆ ಎನ್ನುವ ಮಾತಿನಲ್ಲಿ ಅರ್ಥವಿದೆ.

೬. 'ಭಾಷೆ' ಎನ್ನುವುದು ಸಂಪರ್ಕ ಸೇತುವಿನಂತೆ. 'ಭಾಷೆ' ಮನಸ್ಸಿನಲ್ಲಿರುವ ಭಾವನೆಗಳನ್ನು ವ್ಯಕ್ತಪಡಿಸುವ ಸಾಧನ. ಪ್ರತಿಯೊಂದು 'ಭಾಷೆಯೂ ಸರಸ್ವತಿಯ ವರ' ಎನ್ನುವ ಮಾತಿದೆ. ಅದನ್ನು ಸರಳವಾದ ರೀತಿಯಲ್ಲಿ, ಸಮುದಾಯದಲ್ಲಿ ಬಳಕೆಯಲ್ಲಿರುವ ಧಾಟಿಯಲ್ಲಿ ವ್ಯಕ್ತಪಡಿಸುವುದರಿಂದ, ಅದು ಜನಸಾಮಾನ್ಯರನ್ನು ನೇರವಾಗಿ ಮುಟ್ಟಿ ಪರಿಣಾಮಕಾರಿಯಾದ ಪ್ರಭಾವ ಬೀರುತ್ತದೆ. ಬಳಕೆಯಲ್ಲಿರುವ 'ಭಾಷಿಕ' ನೆಲೆಗಳನ್ನು 'ಜನಪ್ರಿಯ'ವಾಗಿವೆ ಎಂಬ ಒಂದು ಕಾರಣ ನೀಡಿ ತಿರಸ್ಕರಿಸುವುದು, ಹೆಚ್ಚು ಅರ್ಥಪೂರ್ಣ ವಲ್ಲದ ಭಾಷೆಯ ಬಳಕೆಗೆ ತೊಡಗುವುದು, ಭಾಷೆಯ ಅಭಿವೃದ್ಧಿಯ ದೃಷ್ಟಿಯಿಂದ ಆರೋಗ್ಯಕರವಲ್ಲ.'ಭಾಷೆ' ನಿಂತ ನೀರಾಗಬಾರದು ಎಂಬುದು ಅನುಭವದ ಮಾತು. ಆದರೆ ಹೊಸಹೊಸ ಪ್ರಯೋಗಗಳ ಮೂಲಕ "ಭಾಷೆ" ದೃಢಕಾಯವಾಗುತ್ತದೆ ಎನ್ನುವ ಒಂದು ವಾದವೂ ಇದೆ. ಹಳತನ್ನು, ಹೊಸತನ್ನು ಒಳಗೊಂಡೇ ಭಾಷೆ ಬೆಳೆಯಬೇಕಾಗುತ್ತದೆ. ಎಂದ ಮಾತ್ರಕ್ಕೆ 'ಹಳತೆಲ್ಲ ತ್ಯಾಜ್ಯ, ಹೊಸತೆಲ್ಲ ಗ್ರಾಹ್ಯ' ಎನ್ನುವ ವಾದವಲ್ಲಿ ಹುರುಳಿಲ್ಲ. ಪ್ರತಿಯೊಬ್ಬ ವ್ಯಕ್ತಿ ತನ್ನದೇ ಆದ ಧಾಟಿಯಲ್ಲಿ ಭಾಷೆ ಬಳಸಿದಾಗ ಅದು ಒಂದು 'ವ್ಯಕ್ತಿ ಸಂಕೇತ'ವಾಗುತ್ತದೆ. ಇದಕ್ಕೆ ಹಲವಾರು ಉದಾಹರಣೆಗಳು ನಮಗೆ ಸುಲಭವಾಗಿ ಸಿಗುತ್ತವೆ. ಕುಮಾರವ್ಯಾಸನಂಥ ಸರಳಗನ್ನಡದಲ್ಲಿ ಬರೆದ ಮಹಾಕವಿಗಳೂ ಇದ್ದಾರೆ. ಪಂಪನಂತಹ ಹಳಗನ್ನಡದಲ್ಲಿ ಕಾವ್ಯ ಬರೆದ ಮೇಧಾವಿಗಳೂ ಇದ್ದಾರೆ. ಅವರು ಬಳಸುವ ಭಾಷೆ ಅವರ "ಮುದ್ರೆ" ಒತ್ತಿದಂತಿರುತ್ತದೆ. 'ಹೊಸ ಚಿಗುರು, ಹಳೆ ಬೇರು' ಎಂಬ ತತ್ವದಂತೆ ಇವೆಲ್ಲವುಗಳನ್ನು ಜೀರ್ಣಿಸಿಕೊಂಡು ಭಾಷೆ ಬೆಳೆಯುತ್ತ ಹೋಗುತ್ತದೆ. ಸಂವಹನಶೀಲವಲ್ಲದ ನೆಲೆಗಳನ್ನು ಆರಿಸಿಕೊಳ್ಳುವ ಲೇಖಕರ ಪ್ರಯತ್ನಗಳನ್ನು 'ಸೃಜನಶೀಲ'ವಲ್ಲದ ಸೂತ್ರಗಳೆನ್ನಬಹುದು. 'ನಾನು ಏನು' ಬರೆದೆ ಎನ್ನುವುದಕ್ಕಿಂತ, ಎಷ್ಟು ಅರ್ಥಪೂರ್ಣವಾಗಿ ಬರೆದೆ ಎನ್ನುವುದು ಮಹತ್ವವಾದುದು. ಗಾತ್ರ ಮುಖ್ಯವಲ್ಲ, ಗುಣ ಮುಖ್ಯ. ನಮ್ಮಲ್ಲಿ ಆರು ಸಾಲುಗಳಲ್ಲಿ ಅರ್ಥವಾಗದ ರೀತಿಯಲ್ಲಿ ಬರೆಯುವವರೂ ಇದ್ದಾರೆ. ಒಂದೇ ಸಾಲಿನಲ್ಲಿ ಎಲ್ಲವನ್ನೂ ಸೆರೆಹಿಡಿದು ಅರ್ಥಪೂರ್ಣವಾಗಿ ಬರೆಯುವವರೂ ಇದ್ದಾರೆ. ಇಲ್ಲೇ 'ಜನಪ್ರಿಯ' ಎಂಬ ಮಾತಿನ ಸತ್ಯ ಅಡಗಿದೆ.

'ಕನ್ನಡ ಭಾಷೆ' ಸರ್ವಸಮೃದ್ಧವಾಗಿ ಬೆಳೆದು ಉಳಿಯಲಿ ಎಂದೇ ನನ್ನ ಆಶಯ.

## ಪಿ. ಎಸ್. ಶಂಕರ್

೧. ಹೌದು. ನಮ್ಮಲ್ಲಿ ಭಾಷಾ ನೀತಿಯನ್ನು ರೂಪಿಸುವಲ್ಲಿ ರಾಜಕೀಯ ಇಚ್ಛಾ ಶಕ್ತಿಯಿಲ್ಲದಿರುವುದರಿಂದ ಅದು ಅನೇಕ ಬಗೆಯ ಒತ್ತಡಗಳಿಗೆ ಮಣಿಯುತ್ತದೆ. ಇದರ ಮೂಲ ನಾವೇ ಆಗಿದ್ದು, ನಮ್ಮನ್ನೇ ದೂರಿಕೊಳ್ಳಬೇಕಾಗಿದೆ. ಭಾಷಾವಾರು ಪ್ರಾಂತ್ಯ ರಚನೆಯಾದ ಮೇಲೆ ನಮ್ಮ ರಾಜ್ಯವನ್ನು ಹೊರತುಪಡಿಸಿ ಉಳಿದೆಲ್ಲ ರಾಜ್ಯಗಳು ತಮ್ಮ ರಾಜ್ಯದ ಭಾಷೆಯನ್ನು ಪ್ರಭುತ್ವದ ಮೇಲೆ ಕೂರಿಸಿವೆ. ನಾವು ನಮ್ಮದೇ ಆದ ರಾಜ್ಯವನ್ನು ಪಡೆದುಕೊಂಡು ೩೭ ವರುಷಗಳು ಗತಿಸಿ ಹೋದರೂ ಕನ್ನಡವನ್ನು ಗದ್ದುಗೆಯ ಮೇಲೆ ಕುಳ್ಳಿರಿಸಲು ಶಕ್ತರಾಗಿಲ್ಲ. ಅದು ಜನಸಮುದಾಯದ ಮೇಲೆ ದೂರಗಾಮೀ ಪ್ರಭಾವ ಹೊಂದಿದ್ದು ಅದರ ತೀವ್ರತೆಯನ್ನು ತಿಳಿದುಕೊಳ್ಳದೆ ಹೋಗಿದ್ದೇವೆ.

ಭಾಷಾ ಅಲ್ಪಸಂಖ್ಯಾತರೂ ನಮ್ಮ ರಾಜ್ಯದ ಭಾಷೆಯಲ್ಲಿಯೇ ವ್ಯವಹರಿಸಬೇಕು. ಜನತೆಯಲ್ಲಿ ಇಂಗ್ಲಿಷ್ ಮೋಹವನ್ನುಂಟುಮಾಡಿ ಅವರು ಇಂಗ್ಲಿಷ್ ಭಾಷಾ ಮಾಧ್ಯಮದಲ್ಲಿ ಅಧ್ಯಯನ ಮಾಡಿದರೆ ಮುಕ್ತಿ ಎಂಬ ತಪ್ಪು ವಿಚಾರವನ್ನು ಅವರಲ್ಲಿ ಬೆಳೆಸಿದ್ದೇವೆ. ಕನ್ನಡ ಮಾಧ್ಯಮದ ಮೂಲಕ ಅಧ್ಯಯನಕ್ಕೆ ಯೋಗ್ಯ ಪುರಸ್ಕಾರ ನೀಡದೆ, ಬೇರೆ ಭಾಷಾ ಮಾಧ್ಯಮದ ಮೂಲಕ, ಇಂಗ್ಲಿಷ್ ಮಾಧ್ಯಮದ ಮೂಲಕ ಮಾಡುವ ಅಧ್ಯಯನಕ್ಕೆ ಪ್ರೋತ್ಸಾಹ ನೀಡಲಾಗುತ್ತಿದೆ. ತಮ್ಮ ಸ್ವಹಿತ ಸಾಧಿಸಿಕೊಳ್ಳಬಯಸುವ ವ್ಯಕ್ತಿಗಳು, ಅವರ ಅಧೀನದಲ್ಲಿರುವ ಸಂಸ್ಥೆಗಳು ತರುವ ಒತ್ತಡ ನಮ್ಮ ಭಾಷಾ ನೀತಿಯನ್ನು ರೂಪಿಸುವ ಪ್ರಯತ್ನವನ್ನು ವಿಫಲಗೊಳಿಸಿವೆ. ಭಾಷಾನೀತಿಯನ್ನು ಕಾರ್ಯರೂಪಕ್ಕೆ ಇಳಿಸುವ ಜವಾಬ್ದಾರಿಯನ್ನು ಹೊತ್ತ ಅಧಿಕಾರಿವರ್ಗ ಈ ಸಮಸ್ಯೆಯ ಆಳವಾದ ಅರಿವಿಲ್ಲದೆ ಅದರ ಬಗ್ಗೆ ತೋರುವ ಅನಾಸಕ್ತಿ ಅದಕ್ಕೆ ಪೋಷಕವಾಗಿದೆ.

೨. ಅಲ್ಲ, ಇದು ಕೇವಲ ಭಾಷೆಯ ನೆಲೆ ಹೊಂದಿದೆ. ನಮ್ಮ ದೇಶದಲ್ಲಿ ಬೇರೆ ಬೇರೆ ಭಾಷೆಗಳನ್ನಾಡಿದರೂ, ಇಲ್ಲಿನ ಸಂಸ್ಕೃತಿ, ಜೀವನಕ್ರಮ ಹೆಚ್ಚು ಕಡಿಮೆ ಒಂದೇ ರೀತಿಯ ದ್ದಾಗಿದೆ. ಮೇಲಾಗಿ ಇಂಗ್ಲಿಷ್, ಹಿಂದಿ ಮತ್ತು ಪ್ರಾದೇಶಿಕ ಭಾಷೆಗಳ ಮಧ್ಯ ಸ್ಪರ್ಧೆಯಿದೆಯೆಂದು ಪರಿಗಣಿಸಲಾಗದು. ಇಂಗ್ಲಿಷ್ ಎಲ್ಲ ಭಾಷೆಗಳಿಂದಲೂ ಉಪಯುಕ್ತಕರ ಶಬ್ದಗಳನ್ನು ಸ್ವೀಕರಿಸಿ ಶ್ರೀಮಂತ ಭಾಷೆಯಾಗಿದೆ. ಅದು ಜಗತ್ತಿಗೆ ಕಿಟಕಿಯಿದ್ದಂತೆ. ಅದರ ಮೂಲಕ ಅನೇಕ ವಿಷಯಗಳನ್ನು ತಿಳಿದುಕೊಳ್ಳಲು ನಾವು ಶಕ್ತರಾಗಿದ್ದೇವೆ. ಅದರ ಮೂಲಕವಾಗಿ ವೈಜ್ಞಾನಿಕ ಸಾಧನೆಗಳ ಪರಿಚಯ, ತಿಳಿವಳಿಕೆ, ಲಾಭ ನಮಗೆ ದೊರೆತಿದೆ. ಪ್ರಾದೇಶಿಕ ಭಾಷೆಗಳಂತೆಯೇ ಹಿಂದಿ ಕೂಡಾ ಇಂಗ್ಲಿಷ್ ಭಾಷೆಯಿಂದ ಸಾಕಷ್ಟು ಪಡೆದುಕೊಂಡಿದೆ. ಹಿಂದಿಯಿಂದ ಪ್ರಾದೇಶಿಕ ಭಾಷೆ ಪಡೆದು

ಕೊಳ್ಳುವುದು ಕಡಿಮೆ ಅಥವಾ ಏನೂ ಇಲ್ಲ. ಹೀಗಾಗಿ ಈ ಎರಡರ ಮಧ್ಯೆ ಯಾವ ಸ್ಪರ್ಧೆ? ಇಂಗ್ಲಿಷ್ ಭಾಷೆಯೊಟ್ಟಿಗೂ ಸ್ಪರ್ಧೆಯಿಲ್ಲ. ಏಕೆಂದರೆ ಅದಕ್ಕೂ ಹಿಂದಿ ಅಥವಾ ಪ್ರಾದೇಶಿಕ ಭಾಷೆಗೂ ಭಾಷಾನೆಲೆಯಲ್ಲಿ ಯಾವ ಸ್ಪರ್ಧೆಯೂ ಕಾಣಿಸದು.

೩. ಜನರನ್ನು ಅವರ ಪಾಲಿಗೆ ಬಿಟ್ಟರೆ, ಅವರು ತಾವು ಆಡುವ ಮಾಧ್ಯಮವನ್ನು ಆಯ್ಕೆಮಾಡುತ್ತಾರೆ. ಭಾಷೆಯು ನಮ್ಮ ಮಾನಸಿಕ ಪ್ರತಿಕ್ರಿಯೆಗಳನ್ನು ಮತ್ತು ವಿಚಾರ ಗಳನ್ನು ತಿಳಿಸುತ್ತದೆ. ಇಂಗ್ಲಿಷ್ ಮಾಧ್ಯಮದ ಮೂಲಕ ದೊರೆಯುವ ಶಿಕ್ಷಣ ತಮ್ಮ ಮಕ್ಕಳ ಸ್ಥಾನಮಾನಗಳನ್ನು ಮೇಲಕ್ಕೇರಿಸುತ್ತದೆ, ಉದ್ಯೋಗ ಅವಕಾಶಗಳನ್ನು ಹೆಚ್ಚಿಸುತ್ತದೆ ಎಂಬ ಕಲ್ಪನೆಯನ್ನು ಅವರ ತಲೆಯಲ್ಲಿ ತುಂಬಿದ್ದೇವೆ. ಇಂಗ್ಲಿಷ್ ಮಾಧ್ಯಮ ದಿಂದ ತಮ್ಮ ಮಕ್ಕಳು ವಿಪುಲ ಅವಕಾಶಗಳನ್ನು, ಇತರರೊಡನೆ ಸ್ಪರ್ಧಿಸುವ ಅವಕಾಶವನ್ನು ಪಡೆಯುತ್ತಾರೆಂದು ಅದರ ಬೆನ್ನು ಹತ್ತಿ ಹೋಗುತ್ತಿದ್ದಾರೆ. ಇಂಗ್ಲಿಷ್ ಮಾಧ್ಯಮದ ಬದಲು ಕನ್ನಡ ಮಾಧ್ಯಮದ ಮೂಲಕ ಪಡೆಯುವ ಶಿಕ್ಷಣದಿಂದ ತಾವು ದ್ವಿತೀಯ ದರ್ಜೆಯವರು ಎಂಬ ಕೀಳರಿಮೆ ಅವರಲ್ಲಿ ಬಂದುಬಿಟ್ಟಿದೆ. ನಾನು ಕನ್ನಡ ಮಾಧ್ಯಮದಿಂದ ಬಂದವನು; ನಮ್ಮ ದೇಶದ ನಾಮಾಂಕಿತ ವಿಜ್ಞಾನಿಗಳು ಕನ್ನಡ ಮಾಧ್ಯಮದಿಂದ ಮೇಲೆ ಬಂದವರು. ಕನ್ನಡ ನಮ್ಮ ಜೀವನದ ಎಲ್ಲ ರಂಗಗಳಲ್ಲಿ ಮಹತ್ವ ಪಡೆದರೆ ಮಾಧ್ಯಮದ ಬಗ್ಗೆ ಎದ್ದಿರುವ ವಾದ ತಣ್ಣಗಾಗುತ್ತದೆ.

೪. ಉನ್ನತ ಶಿಕ್ಷಣದಲ್ಲಿ ವಿಜ್ಞಾನ ಬೋಧನೆ ಕನ್ನಡ ಮಾಧ್ಯಮದಲ್ಲಿ ಸಾಧ್ಯ. ಪಾಶ್ಚಿಮಾತ್ಯ, ಪೌರ್ವಾತ್ಯ ರಾಷ್ಟ್ರಗಳ ಬೇರೆ ಬೇರೆ ಭಾಷೆಗಳನ್ನಾಡುವವರಲ್ಲಿ ಸಾಧ್ಯವಾಗಿ ರುವುದು ನಮ್ಮಿಂದ ಏಕೆ ಸಾಧ್ಯವಿಲ್ಲ? ಹಿಂದೆ ಹೈದರಾಬಾದ್ ಸಂಸ್ಥಾನದಲ್ಲಿ ಬೋಧನೆ ಉರ್ದು ಮಾಧ್ಯಮದಲ್ಲಿದ್ದಿತು. ವಿಜ್ಞಾನ ಬರವಣಿಗೆ ನಮಗೆ ಹೊಸದಾಗಿರುವುದರಿಂದ ಅದು ನಮಗೆ ಕಷ್ಟಸಾಧ್ಯವಾಗಿ ತೋರುತ್ತಿದೆ. ನಮ್ಮ ಬೋಧನೆ ಪ್ರಾಥಮಿಕ ಹಂತದಿಂದ ಕಾಲೇಜು ಮಟ್ಟದವರೆಗೆ ಕನ್ನಡದಲ್ಲಿ ಜರುಗಿದರೆ ಅದನ್ನೇ ಉನ್ನತ ಶಿಕ್ಷಣದಲ್ಲಿ ವಿಜ್ಞಾನ ಬೋಧನೆಗೆ ಮುಂದುವರಿಸಬಹುದು. ಪಾರಿಭಾಷಿಕ ಶಬ್ದಗಳ ಬಗ್ಗೆ ಮಡಿವಂತಿಕೆ ತೋರದೆ ಅವುಗಳನ್ನು ಬಳಸಿ ವಿಷಯವನ್ನು ಕನ್ನಡದಲ್ಲಿ ಸುಲಭವಾಗಿ ವಿವರಿಸಬಹುದು.

ವಿಜ್ಞಾನಸಾಹಿತ್ಯ ಕನ್ನಡದಲ್ಲಿ ಈಚಿನ ದಶಕಗಳಲ್ಲಿ ವಿಪುಲವಾಗಿ ಸೃಷ್ಟಿಯಾಗುತ್ತಿದೆ. ವಿಜ್ಞಾನಸಾಹಿತ್ಯ ಶುದ್ಧ ಮತ್ತು ಅನ್ವಯಿಕ ವಿಜ್ಞಾನ ರೂಪಗಳನ್ನು ಹೊಂದಿದ್ದು ಅನ್ವಯಿಕ ವಿಜ್ಞಾನ ಜನಸಾಮಾನ್ಯರ ತಿಳಿವಳಿಕೆಯ ಕ್ಷಿತಿಜವನ್ನು ವಿಸ್ತರಿಸುವಲ್ಲಿ ಮುಖ್ಯ ಪಾತ್ರ ವಹಿಸುತ್ತದೆ. ವಿಜ್ಞಾನವನ್ನು ಜನಪ್ರಿಯಗೊಳಿಸಿ, ನಾಗಾಲೋಟದಿಂದ ಬೆಳವಣಿಗೆ ಹೊಂದು ತ್ತಿರುವ ವೈಜ್ಞಾನಿಕ ಸಾಧನೆಗಳ ಬಗೆಗೆ ದೈನಂದಿನ ಜೀವನದಲ್ಲಿ ಉಪಯೋಗಿಸುವ ಅನೇಕ ಸಾಧನ-ಸಲಕರಣೆಗಳ ಬಗೆಗೆ, ದೇಹ ರಚನೆ, ಕ್ರಿಯೆ, ದೈಹಿಕ-ಮಾನಸಿಕ ಆರೋಗ್ಯ-ಅನಾರೋಗ್ಯಕ್ಕೆ ಸಂಬಂಧಿಸಿದ ವಿಷಯಗಳ ಬಗೆಗೆ ಉತ್ಸಾಹಿಗಳು ಬರೆಯುತ್ತಿದ್ದಾರೆ. ಆದರೂ

ಶುದ್ಧ ವಿಜ್ಞಾನದ ಪುಸ್ತಕಗಳ ರಚನೆಗೆ ಇನ್ನೂ ಹೆಚ್ಚು ಒತ್ತು ಕೊಡಬೇಕಾಗಿದೆ. ಆ ಪ್ರಯತ್ನಕ್ಕೆ ವಿಶ್ವವಿದ್ಯಾಲಯಗಳು ಚಾಲನೆ ನೀಡಬೇಕಾಗಿದೆ.

೫. ಸಮೂಹ ಮಾಧ್ಯಮಗಳಲ್ಲಿ ಬಳಕೆಯಾಗುತ್ತಿರುವ ಕನ್ನಡ ಆ ಕಾರ್ಯದಲ್ಲಿ ನಿರತರಾದವರು ಪಡೆದಿರುವ ಶಿಕ್ಷಣ, ಅಧ್ಯಯನ, ಅನುಭವ, ಸನ್ನಿವೇಶ, ಸಮಯಾವಕಾಶ, ಪುಸ್ತಕಗಳ-ನಿಘಂಟುಗಳ ಸಮರ್ಪಕ ಬಳಕೆಯನ್ನು ಅವಲಂಬಿಸಿದೆ. ಒಮ್ಮೆ ಮಾಡಿದ ತಪ್ಪು ಪದೇ ಪದೇ ಬಳಕೆಯಾಗಿ ರೂಢಿಗೊಂಡ ಮೇಲೆ ಅದನ್ನು ಬದಲಿಸುವುದು ಅಸಾಧ್ಯವಾಗುತ್ತದೆ. ಉದಾಹರಣೆಗೆ ಆಮ್ಲಜನಕ ಆಕ್ಸಿಜೆನ್ ಶಬ್ದದ ಸಮಾನ ಅರ್ಥ ನೀಡದು. ಸಸಾರಜನಕ ವಸ್ತು ಪ್ರೊಟೀನನ್ನು ಪ್ರತಿರೂಪಿಸುವುದಿಲ್ಲ. ಯಾರೋ ಟಂಕಿಸಿದ ಈ ಬಗೆಯ ಶಬ್ದಗಳು ಚಲಾವಣೆಯಲ್ಲಿ ಬಂದು ಬಿಟ್ಟಿವೆ.

೬. ಜೀವಂತ ಭಾಷೆ ಸದಾ ಪುಟಿಯುತ್ತ ಬದಲುಗೊಳ್ಳುತ್ತಿರುವ ಜೀವಾಳ ವಸ್ತು. ಅದು ಸದಾ ಬೆಳೆಯುತ್ತ ಅದನ್ನು ಮಾತನಾಡುವವರ ಮತ್ತು ಬರೆಯುವವರ ಕನ್ನಡಿಯಾಗಿದೆ. ಅದು ಜನಸಾಮಾನ್ಯರಲ್ಲಿ ತನ್ನ ಬೇರುಗಳನ್ನು ಹೊಂದಿದ್ದರೂ, ಅದರ ಮೇಲಣ ರಚನೆ ಕೆಲವರ ಸಂಸ್ಕೃತಿಯನ್ನು ಮಾತ್ರ ಪ್ರತಿನಿಧಿಸುತ್ತದೆಯೆಂದು ಜವಾಹರಲಾಲ ನೆಹರೂ ಅವರು ಹೇಳುತ್ತಿದ್ದರು. ನಮ್ಮ ಭಾಷಿಕ ನೆಲೆ ಭದ್ರವಾಗಿರಬೇಕು. ಜನಕ್ಕೆ ಉಪಯುಕ್ತವಾದುದು ಜನಪ್ರಿಯವಾಗುತ್ತದೆಯೆಂದು, ಆ ನೆಲೆಯನ್ನು ನಿರಾಕರಿಸುವುದು ಸಮಂಜಸವೆನಿಸುವುದಿಲ್ಲ. ಆದರೂ ಹೆಚ್ಚು ಸಂವಹನಶೀಲವಲ್ಲದ ನೆಲೆಗಳನ್ನು ಆಯ್ಕೆಮಾಡುವ ಪ್ರಯತ್ನ ಮೆಚ್ಚತಕ್ಕದ್ದೇ. ಭಾಷೆ ನಮ್ಮ ವಿಚಾರ ಶಕ್ತಿಯ ಪ್ರಬಲ ಸಾಧನ. ಅದು ನಮ್ಮ ವಿಚಾರಗಳ ಕೊಡುಗೆಯೆಂದು ಇಂಗ್ಲಿಷ್ ಲೇಖಕ ಸಾಮ್ಯುಯೆಲ್ ಜಾನ್‌ಸನ್ ವರ್ಣಿಸಿದ್ದರು.

ಸೃಜನಶೀಲ ಲೇಖಕರು ತಮ್ಮ ಶೈಲಿಯನ್ನು ಚಿಂತನದೊಡನೆ ಬೆರೆಯುವಂತೆ ಮಾಡಿ ಹೊಸ ನೆಲೆಗಳನ್ನು ಕಂಡುಕೊಳ್ಳುತ್ತ ದಾರಿಯಿಲ್ಲದ ಕಡೆ ದಾರಿ ನಿರ್ಮಿಸುತ್ತಿದ್ದಾರೆ. ಅಮೆರಿಕನ್ ಲೇಖಕ ಆಲಿವರ್ ವೆಂಡಲ್ ಹೋಮ್ಸ್ ನುಡಿದ ಮಾತುಗಳಿಂದ ಅವರ ಪ್ರಯತ್ನವನ್ನು ವಿವರಿಸಬಹುದು: "ಭಾಷೆ ಪವಿತ್ರವಾದುದು. ಅದು ಜೀವನದ ಯಾತನೆ ಮತ್ತು ಸಂತೋಷದಿಂದ, ಬೇಡಿಕೆ ಮತ್ತು ಬಳಲಿಕೆಯಿಂದ ಬೆಳೆಯುತ್ತದೆ. ಪ್ರತಿಯೊಂದು ಭಾಷೆಯೂ ಒಂದು ದೇವಾಲಯವಾಗಿದ್ದು ಅದನ್ನು ಮಾತನಾಡುವವರ ಆತ್ಮ ಅಲ್ಲಿ ಪ್ರತಿಷ್ಠೆಗೊಂಡಿದೆ."

## ೬. ಮುರಾರಿ ಬಲ್ಲಾಳ

೧. ಸರಕಾರವೆನ್ನುವುದು ನಾವು ಭಾವಿಸಿದಷ್ಟು ಪ್ರಬಲ ಸಂಸ್ಥೆಯಲ್ಲ; ಭಾರತ ದಲ್ಲಂತೂ ಅದು ಯಾವತ್ತೂ ಒಂದು ಶಕ್ತಿಶಾಲಿಯಾದ ಸಂಸ್ಥೆಯಾಗಿರಲಿಲ್ಲ. ಪ್ರಜೆಗಳ ಶಿಕ್ಷಣ, ಉದ್ಯೋಗ, ವಸತಿಗಳ ಹೊಣೆಯನ್ನು ಇಲ್ಲಿ ಸರಕಾರ ತನ್ನ ಜವಾಬ್ದಾರಿ ಎಂದು ತಿಳಿದದ್ದೇ ಇಲ್ಲ. ಸರಕಾರದ ಶಕ್ತಿಯ ಬಗ್ಗೆ ಅತಿರಂಜಿತವಾದ ಕಲ್ಪನೆಗಳನ್ನು ಮುಂದಿಟ್ಟ ವರು ಬಲಪಂಥೀಯ ರಾಜಕೀಯ ನಿಲುವಿನ ಬುದ್ಧಿಜೀವಿಗಳು. ಕನ್ನಡದ ಸಂದರ್ಭದಲ್ಲಿ ಇದು ಕೆಲವು ಹಾಸ್ಯಾಸ್ಪದ ಸನ್ನಿವೇಶಗಳಿಗೂ ಕಾರಣವಾಗಿದೆ. ಉದಾಹರಣೆಗೆ, ಬಂಡವಾಳ ಶಾಹಿಗಳು ಮತ್ತು ವಾಣಿಜ್ಯಪತಿಗಳು ಎಗ್ಗಿಲ್ಲದೆ ಬೆಳೆಯುತ್ತಿದ್ದಾಗ ಮತ್ತು ಶಿಕ್ಷಣ-ವೈದ್ಯಕೀಯದಂತಹ ಕ್ಷೇತ್ರಗಳು ಕೂಡ ಖಾಸಗೀಕೃತವಾಗುತ್ತಿದ್ದಾಗಲೇ ಕನ್ನಡದಲ್ಲಿ ಕಾರಂತರು ಮತ್ತು ಅಡಿಗರು ಸರಕಾರೀ ಕೇಂದ್ರೀಕರಣದ ಬಗ್ಗೆ ದೊಡ್ಡ ಧ್ವನಿಯಲ್ಲಿ ಟೀಕಿಸುತ್ತಿದ್ದರು. ಇವತ್ತು ಸರಕಾರ ಮಾತ್ರ ಸಮಾಜದ ಶಕ್ತಿಕೇಂದ್ರವಲ್ಲ. ಅಧಿಕಾರಶಾಹಿ, ತಂತ್ರಜ್ಞಾನದ ವಲಯಗಳು, ಮಾಧ್ಯಮಗಳು, ಪ್ರಬಲ ಮಠಮಾನ್ಯಗಳು ಮುಂತಾದ ಇನ್ನೂ ಅನೇಕ ಶಕ್ತಿ ಕೇಂದ್ರಗಳಿದ್ದಾವೆ ಮತ್ತು ಭಾಷಾನೀತಿಯನ್ನು ಇವೆಲ್ಲವೂ ಕೂಡ ರೂಪಿಸುತ್ತಿದ್ದಾವೆ. ಇವರಲ್ಲಿ ಯಾವುದರ ಪಾತ್ರ ಹೆಚ್ಚಿನದ್ದು ಎಂಬ ಬಗ್ಗೆ ವಿವಾದ ಗಳಿರಬಹುದು. ಆದರೆ ಒಂದು ಮಾತು ವಿವಾದಾತೀತವಾದದ್ದು ಎಂದು ನನ್ನ ಭಾವನೆ. ಈ ಭಾಷಾನೀತಿಯನ್ನು ರೂಪಿಸುವುದರಲ್ಲಿ ಈ ನಾಡಿನ ಬಡವರಿಗೆ ಯಾವ ಪಾತ್ರವೂ ಇಲ್ಲ.

೨. ಇಂಗ್ಲೀಷು ಮತ್ತು ಸದ್ಯಕ್ಕೆ ಹಿಂದಿಯ ಹೇರಿಕೆಗೆ ಅಖಿಲಭಾರತ ಹರಹನ್ನು ತೆಗೆದುಕೊಂಡಿರುವ ಬಂಡವಾಳಶಾಹೀ ಮಾರುಕಟ್ಟೆಯ ಒತ್ತಡಗಳು, ಒತ್ತಾಸೆಗಳು ಖಂಡಿತ ಕಾರಣವಾಗಿವೆ. ಬಿಳಿ ಮನುಷ್ಯನ ಹೊರೆಯಾಗಿ, ಆಳುವ ವರ್ಗದ ಭಾಷೆಯಾದ ಇಂಗ್ಲೀಷು ತನ್ನ ಅಧಿಕಾರದ ಜತೆಗೆ, ಪ್ರತಿಷ್ಠೆ, ಆಳುವ ವರ್ಗದ ಗೆಳೆತನ, ಸಾಮಾಜಿಕ ಆರ್ಥಿಕ ಸವಲತ್ತುಗಳನ್ನು ಒದಗಿಸಿಕೊಡುವುದರಿಂದ, ನಮ್ಮ ದೇಶದ ಮೇಲ್ವರ್ಗದ ಜನ ಈ ಆಳುವ ಭಾಷೆ, ಸಂಸ್ಕೃತಿಯನ್ನು, ಆಳುವವರ ಜತೆ ತಾವೂ ಸಲ್ಲುವ ಸಲುವಾಗಿ ಬಳಸಿಕೊಂಡರು. ಇಂದು ಇಂಗ್ಲೀಷು ಆರ್ಥಿಕ ಬಲ, ಸಾಮಾಜಿಕ ಪ್ರತಿಷ್ಠೆ ಮತ್ತು ಅಧಿಕಾರವನ್ನು ಪ್ರತಿನಿಧಿಸು ವುದರಿಂದ, ಕನ್ನಡ ಭಾಷೆ ಹ್ಯಾಗೆ ಉಳಿದೀತು? ಪ್ರತಿಷ್ಠಿತ ವರ್ಗ, ಅಂದರೆ ದೇಶದಲ್ಲಿ ಅತ್ಯುತ್ತಮವಾದದ್ದನ್ನೆಲ್ಲ ತನ್ನದನ್ನಾಗಿ ಮಾಡಿಕೊಂಡ ಸುಮಾರು ೧೦ ಕೋಟಿಯಷ್ಟು ಜನ, ನಮ್ಮ ಭಾಷಾನೀತಿಯನ್ನು ತಮ್ಮ ಅನುಕೂಲಕ್ಕಾಗಿ ಮಾತ್ರ ರೂಪಿಸಿಕೊಂಡಿದ್ದಾರೆ. ಸಹಜವಾಗಿಯೇ ಅವರ ಹಿತಾಸಕ್ತಿಯನ್ನು ಬೆಳೆಸುವ ಇಂಗ್ಲೀಷು, ಹಿಂದಿಗೇ ಪ್ರಥಮ ಪ್ರಾಶಸ್ತ್ಯವೇ ಹೊರತು ಪ್ರಾದೇಶಿಕ ಭಾಷೆಗಳು ಮೂಲೆಗುಂಪಾಗಿವೆ.

೩. "ಜನಸಾಮಾನ್ಯರ ಮುಗ್ಧವೂ ಸಹಜವೂ ಪ್ರಾಮಾಣಿಕವೂ ಆದ ಆಯ್ಕೆ" ಎಂಬ ನುಡಿಗಟ್ಟು ಅಸಾಧ್ಯ ಕನಸನ್ನು ವರ್ಣಿಸುವ ಹಾಗೆ ಕಾಣುತ್ತದೆ. ಯಾವುದರಲ್ಲೂ ಜನಸಾಮಾನ್ಯರಿಗೆ ಮುಗ್ಧವೂ, ಸಹಜವೂ, ಪ್ರಾಮಾಣಿಕವೂ ಆದ ಆಯ್ಕೆಯ ಅಧಿಕಾರ, ಜನತಂತ್ರವೆಂದು ಹೇಳಿಕೊಳ್ಳುವ ನಮ್ಮ ರಾಷ್ಟ್ರದಲ್ಲಿ ಕಿಂಚಿತ್ತೂ ಕಾಣುವುದಿಲ್ಲ.

೪. ಹುಚ್ಚು ಬಿಡದೆ ಮದುವೆಯಾಗದು, ಮದುವೆಯಾಗದೆ ಹುಚ್ಚು ಬಿಡದು ಎಂಬ ಹಾಗೆಯೇ, ಕನ್ನಡದಲ್ಲಿ ವಿಜ್ಞಾನ ಬೋಧನೆಯನ್ನು ಪ್ರಾರಂಭಿಸದ ಹೊರತು, ಭಾಷೆ ಆ ನಿಟ್ಟಿನಲ್ಲಿ ಬೆಳೆಯುವುದೇ ಇಲ್ಲ. ಯಾರ ಸದಾಶಯದಿಂದಲೂ ಭಾಷೆ ಬೆಳೆಯುವುದಿಲ್ಲ. ಅದಕ್ಕೆ ತಕ್ಕ ಒತ್ತಡಗಳು ಇರಬೇಕು ಮತ್ತು ಅದಕ್ಕಿಂತ ಹೆಚ್ಚಾಗಿ, ಅದು ಲಾಭದಾಯಕವಾಗಿರಬೇಕು. (ಅಕ್ಷರಶಃ ಅರ್ಥದಲ್ಲಿ ಕೂಡ) ಹಾಗಿದ್ದಲ್ಲಿ ಮಾತ್ರ ಭಾಷೆ ಬೆಳೆಯುತ್ತದೆ.

೫. ಸಮೂಹ ಮಾಧ್ಯಮಗಳಲ್ಲಿ ಬಳಕೆಯಾಗುತ್ತಿರುವ ಕನ್ನಡದ ಸ್ವರೂಪ ಮತ್ತು ಪ್ರಮಾಣಗಳನ್ನು ಕೂಡ, ನಾನು ಮೇಲೆ ಹೇಳಿದ ಪ್ರಬಲ ಶಕ್ತಿಗಳೇ ನಿಯಂತ್ರಿಸುತ್ತವೆ. ನಮ್ಮ ಯೋಜನಾಕ್ರಮ, ನಾವು ಆಯ್ಕೆ ಮಾಡುವ ಶಬ್ದಗಳನ್ನು ಕೂಡ ಇವು ನಿಯಂತ್ರಿಸುತ್ತವೆ.

೬. ಇದು ನಿಜವಾಗಿಯೂ ಭಾಷಾ ನೀತಿಗೆ ಸಂಬಂಧಪಟ್ಟ ಪ್ರಶ್ನೆ ಅಲ್ಲ ಅಂತ ನನ್ನ ಅನ್ನಿಸಿಕೆ. ಸಾಹಿತ್ಯ ವಿಮರ್ಶೆ ತಲೆಕೆಡಿಸಿಕೊಳ್ಳಬೇಕಾದ ಸಮಸ್ಯೆ ಇದು. ಉದಾಹರಣೆಗೆ ಅಡಿಗರ ಕಾವ್ಯ ಕ್ಲಿಷ್ಟವೋ ಅಲ್ಲವೋ ಎಂಬ ಪ್ರಶ್ನೆಗೂ ಶಾಲೆಗಳಲ್ಲಿ ಶಿಕ್ಷಣ ಮಾಧ್ಯಮ ಯಾವುದು ಇರಬೇಕು ಎಂಬ ಪ್ರಶ್ನೆಗೂ ಏನು ಸಂಬಂಧ? ಮತ್ತು ಎಲ್ಲ ಸೃಜನಶೀಲ ಸಾಹಿತಿಗಳು ಜನಪ್ರಿಯ ಸುಲಲಿತ ಭಾಷೆಯನ್ನು ನಿರಾಕರಿಸದೆಯೂ, ಉತ್ತಮ ಕೃತಿಗಳನ್ನು ಕೊಟ್ಟಿದ್ದಾರೆ. ಹಾಗಾಗಿ ಇದು ವಿಮರ್ಶೆಯ ಪರಿಭಾಷೆಗಳಿಗೆ ಹೆಚ್ಚು ಸಂಬಂಧಪಟ್ಟ ಪ್ರಶ್ನೆಯಾಗುತ್ತದೆ.



೧. ಒಂದು ಸಮುದಾಯದ ಭಾಷಾ ನೀತಿಯನ್ನು ರೂಪಿಸುವ ಕೆಲಸದಲ್ಲಿ ಸರ್ಕಾರೇತರ ಒತ್ತಡಗಳು ಕೆಲಸ ಮಾಡುತ್ತಿರುತ್ತವೆ. ಹಾಗೆ ಸರ್ಕಾರೇತರ ಒತ್ತಡಗಳು ಕೆಲಸ ಮಾಡಿದ್ದರಿಂದಲೇ ಸರ್ಕಾರ ಅನೇಕ ಸಲ ಸರಿಯಾದ ನಿರ್ಣಯ ತೆಗೆದುಕೊಂಡದ್ದನ್ನು ಕಾಣಬಹುದಾಗಿದೆ. ಕರ್ನಾಟಕದ ಸಂದರ್ಭದಲ್ಲಿ ಇಂತಹ ಒತ್ತಡಗಳು ಸ್ಪಷ್ಟವಾಗಿ ಗುರುತಿಸಲ್ಪಟ್ಟಿವೆ. ಕನ್ನಡಕ್ಕೆ ಸಂಬಂಧಿಸಿದಂತೆ ಡಾ. ವಿ. ಕೆ. ಗೋಕಾಕ ಅವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ಸರ್ಕಾರ ನೇಮಿಸಿದಾಗ ಆ ಸಮಿತಿಯ ನೆಲೆಗಳು ಸ್ಪಷ್ಟರೂಪ ತಾಳಿದ್ದು ಧಾರವಾಡದಲ್ಲಿ, ಕನ್ನಡಪರ ಕಾಳಜಿಯುಳ್ಳ ಪ್ರಜ್ಞಾವಂತರು ಗೋಕಾಕರೊಂದಿಗೆ ಮುಖಾಮುಖಿಯಾದಾಗ. ಸರ್ಕಾರವಾಗಲಿ, ಸರ್ಕಾರ ನೇಮಿಸಿದ ಸಮಿತಿಗಳಾಗಲಿ ಸ್ವಯಂಭುವಲ್ಲವಾಗುದರಿಂದ ಆ ಬಗೆಗೆ ಕಾಳಜಿಯಿರುವ ಪ್ರಜ್ಞಾವಂತರು ಸರ್ಕಾರದ ಮೇಲೆ ಒತ್ತಡವನ್ನು ತರಲೇಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಭಾಷಾನೀತಿಗೆ ಸಂಬಂಧಿಸಿದಂತೆ ಸರ್ಕಾರದ ಮೇಲೆ ಬಂದ ಪ್ರಮುಖ ಒತ್ತಡವೆಂದರೆ ಗೋಕಾಕ ವರದಿಯ ಜಾರಿಗಾಗಿ ನಡೆಸಿದ ಭಾಷಾ ಚಳುವಳಿ ಧಾರವಾಡದಲ್ಲಿ ಸ್ಥಾಪನೆಯಾದ ಅಖಿಲ ಕರ್ನಾಟಕ ಕನ್ನಡ ಕ್ರಿಯಾ ಸಮಿತಿ, ಬೆಂಗಳೂರಲ್ಲಿ ಹುಟ್ಟಿಕೊಂಡ ಕನ್ನಡ ಶಕ್ತಿ ಕೇಂದ್ರ ಹಾಗೂ ಕರ್ನಾಟಕದ ಇತರ ಅನೇಕ ಕನ್ನಡ ಸಂಘ-ಸಂಸ್ಥೆಗಳು ಈ ಚಳುವಳಿಯಲ್ಲಿ ಪಾಲ್ಗೊಂಡ ಪ್ರಮುಖ ಒತ್ತಡಗಳಾಗಿವೆ. ಇದೇ ರೀತಿ ಮಹಿಷಿ ವರದಿ ಜಾರಿಗಾಗಿ, ಗಡಿನಾಡಿನ ಉಳಿವಿಗಾಗಿ, ಕಾವೇರಿ ನೀರಿಗಾಗಿ, ಕನ್ನಡ ಮಾಧ್ಯಮದ ಮಾದರಿಯ ಶಾಲೆಗಳಿಗಾಗಿ, ಆಡಳಿತದಲ್ಲಿ ಕನ್ನಡ ಬಳಕೆಗಾಗಿ ಹೀಗೆ ಹಲವು ಹತ್ತಾರು ಒತ್ತಡಗಳು ಕೆಲಸ ಮಾಡುತ್ತಲೇ ಬಂದಿವೆ. ಇಷ್ಟೆಲ್ಲ ಒತ್ತಡಗಳ ಹಿನ್ನೆಲೆಯಲ್ಲಿ ಸರ್ಕಾರ ಆಗಾಗ ನಿದ್ದೆಯಿಂದೆದ್ದು ಕೆಲವು ಒಳ್ಳೆಯ ರಚನಾತ್ಮಕ ಕೆಲಸಗಳನ್ನೂ ಮಾಡಿದೆ. ಕನ್ನಡ ಸಂಸ್ಕೃತಿಯ ಬಗೆಗೆ ಬಹಳಷ್ಟು ಕನ್ನಡಿಗರಿಗೆ ಅರಿವು-ಅಭಿಮಾನ ಇಲ್ಲದ್ದಕ್ಕಾಗಿಯೇ ಕರ್ನಾಟಕದಲ್ಲಿ "ಕನ್ನಡ ಜಾಗೃತಿ ವರ್ಷ" ಆಚರಿಸುವ ದುರಂತ ಬಂದಿದೆ.

೨. ಇಂಗ್ಲಿಷ್, ಹಿಂದಿ ಹಾಗೂ ಪ್ರಾದೇಶಿಕ ಭಾಷೆಗಳ ನಡುವಿನ ಸ್ಪರ್ಧೆಯನ್ನು ಕೇವಲ ಭಾಷೆಯ ನೆಲೆಯಲ್ಲಿ ಗ್ರಹಿಸದೆ, ಸಂಸ್ಕೃತಿಯ ಹಿನ್ನೆಲೆಯಲ್ಲಿ ಗ್ರಹಿಸುವುದು ಹೆಚ್ಚು ಸೂಕ್ತವೆನಿಸುತ್ತದೆ. ಹೀಗಾದಾಗ ಭಾಷಾ ವೈಷಮ್ಯದ ಬದಲು ಸಾಂಸ್ಕೃತಿಕ ಸಾಮರಸ್ಯ ವುಂಟಾಗುತ್ತದೆ. ಸ್ಪರ್ಧೆ ಇರುವುದು ಭಾಷೆಗಳಲ್ಲಿ ಅಲ್ಲ, ಜನತೆಯಲ್ಲಿ ಎಂಬ ಅಂಶವನ್ನು ಸರಿಯಾಗಿ ಗ್ರಹಿಸಿಕೊಂಡರೆ ಭಾಷಾ ಜಗಳಗಳಿಗೆ ಅವಕಾಶವೇ ಇರುವುದಿಲ್ಲ. ಆದರೆ ಕೆಲವು ಪಟ್ಟಭದ್ರ ಹಿತಾಸಕ್ತಿಗಳು, ಕೆಲವು ಸ್ವಾರ್ಥಿ ರಾಜಕಾರಣಿಗಳು ಭಾಷೆ, ಗಡಿ, ಜಾತಿ, ಧರ್ಮ

ಇವುಗಳನ್ನು ಮುಂದಿಟ್ಟುಕೊಂಡು ತಮ್ಮ ಸ್ವಾರ್ಥ ಸಾಧಿಸಿಕೊಳ್ಳುತ್ತಾರೆ. ಈ ಸತ್ಯವನ್ನು ಪ್ರತಿಯೊಬ್ಬ ಕನ್ನಡಿಗನೂ ಅರ್ಥಮಾಡಿಕೊಳ್ಳಬೇಕಾಗಿದೆ.

೩. ಜನಸಾಮಾನ್ಯರು, ದುಡಿವವರ್ಗದ ಜನರು, ಭಾಷೆಯ ಬಗೆಗೆ, ಭಾಷಾ ಮಾಧ್ಯಮದ ಬಗೆಗೆ ಎಂದೂ ತಲೆಕೆಡಿಸಿಕೊಳ್ಳುವುದಿಲ್ಲ. ಇದು ಅವರಿಗೆ ಸಮಸ್ಯೆಯೇ ಅಲ್ಲ. ಹೀಗಾಗಿ ಅಲ್ಲಿ ಅವರ ಆಯ್ಕೆಯ ಪ್ರಶ್ನೆಯೇ ಬರುವುದಿಲ್ಲ. ಅವರ ಆಸೆಯೇನಿದ್ದರೂ ಹಸಿವು–ಬಡತನಗಳ ನಿವಾರಣೆಯ ಕಡೆಗಿರುತ್ತದೆ. ಹಾಗೆಂದಾಕ್ಷಣ ಆಯಾ ಪ್ರದೇಶದ ಮಾತೃಭಾಷೆಯನ್ನು ಶಿಕ್ಷಣ ಮಾಧ್ಯಮದಿಂದ ತಪ್ಪಿಸಬೇಕೆಂದರ್ಥವಲ್ಲ. ಮಾತೃಭಾಷೆಯೇ ಪ್ರಾಥಮಿಕ ಹಂತದಲ್ಲಿ ಶಿಕ್ಷಣ ಮಾಧ್ಯಮವಾಗುವುದು ಹೆಚ್ಚು ಸೂಕ್ತವೆಂಬುದು ವೈಜ್ಞಾನಿಕ ಸತ್ಯವಾಗಿದೆ. ಈ ಹಿನ್ನೆಲೆಯಲ್ಲಿ ಜನಪರವಾದ ಆಶಯಗಳನ್ನು ಜನಸಮುದಾಯದಲ್ಲಿ ಯಾರೇ ತಂದರೂ ಅದು ಹೇರಿಕೆಯಾಗುವುದಿಲ್ಲ, ಜಾಗೃತಿಯಾಗುತ್ತದೆ.

೪. ಉನ್ನತ ಶಿಕ್ಷಣದಲ್ಲಿ ವಿಜ್ಞಾನಬೋಧೆಯನ್ನು ಕನ್ನಡ ಮಾಧ್ಯಮದಲ್ಲಿ ನಡೆಸಲು ಖಂಡಿತಾ ಸಾಧ್ಯವಿದೆ. ಹಿಂದೆ ನಿಜಾಮನ ಆಳ್ವಿಕೆಯಲ್ಲಿ ಉನ್ನತ ಶಿಕ್ಷಣದ ಎಲ್ಲ ಹಂತದಲ್ಲೂ ಉರ್ದು ಮಾಧ್ಯಮವಿದ್ದುದನ್ನು ನೆನಪಿಸಿಕೊಳ್ಳಬಹುದು. ವಿಜ್ಞಾನಬೋಧನೆಯನ್ನು ಕನ್ನಡ ಮಾಧ್ಯಮದಲ್ಲಿ ತರುವ ರಚನಾತ್ಮಕ ಪ್ರಯತ್ನಗಳು ನಡೆಯಬೇಕಾಗಿವೆ. ನಮ್ಮ ಕನ್ನಡ ವಿಶ್ವವಿದ್ಯಾಲಯ ಈ ನಿಟ್ಟಿನಲ್ಲಿ ಮಹತ್ವದ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆಯೆನಿಸುತ್ತದೆ. ಭಾಷಾಮಡಿವಂತಿಕೆಯನ್ನು ಬಿಡಬೇಕು. ಸಂಸ್ಕೃತದಿಂದಾದ ತದ್ಭವಗಳನ್ನು ಸ್ವೀಕರಿಸುವ ನಾವು, ಇಂಗ್ಲೀಷದಿಂದಾದ ತದ್ಭವಗಳನ್ನು ಸ್ವೀಕರಿಸಲು ಹಿಂಜರಿಯುತ್ತೇವೆ. ಕೊಡುಕೊಳ್ಳುವಿಕೆಯಿಂದಲೇ ಭಾಷೆ ಬೆಳೆಯುತ್ತದೆ. ಮಡಿವಂತಿಕೆಯಿಂದ ಭಾಷೆ ಸಾಯುತ್ತದೆ. ಸಮಕಾಲೀನ ಭಾಷೆಯನ್ನು ಪರಂಪರೆಯ ಹಿನ್ನೆಲೆಯಲ್ಲಿ ಕಟ್ಟಿಕೊಳ್ಳುವುದು ಇಂದಿನ ಅನಿವಾರ್ಯವಾಗಿದೆ. ಈ ಹಿನ್ನೆಲೆಯಲ್ಲಿ ಅನುವಾದ ಕಾರ್ಯ ನಡೆದು ಬೋಧನಾಸಾಮಗ್ರಿಗಳನ್ನು ಸಿದ್ಧಗೊಳಿಸಿಕೊಳ್ಳಬೇಕಾಗಿದೆ. ಈ ದಿಸೆಯಲ್ಲಿ ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳೂ, ಅಕಾಡೆಮಿಗಳೂ ಕಾರ್ಯೋನ್ಮುಖವಾಗಬೇಕಾಗಿದೆ.

೫. ಸಮೂಹ ಮಾಧ್ಯಮಗಳಲ್ಲಿ ಮುಖ್ಯವಾಗಿ ಆಕಾಶವಾಣಿ ಮತ್ತು ದೂರದರ್ಶನಗಳಲ್ಲಿ ಕನ್ನಡದ ಕಾರ್ಯಕ್ರಮಗಳು ನಿಜವಾದ ಸ್ವರೂಪದಲ್ಲಿ ಪ್ರಕಟವಾಗುತ್ತಿಲ್ಲ. ಈ ಮಾಧ್ಯಮಗಳು ಸ್ವಾಯತ್ತತೆ ಪಡೆಯದ ಹೊರತು, ಅಲ್ಲಿ ಕನಿಷ್ಠ ಪ್ರಮಾಣದ್ದನ್ನು ಕೂಡಾ ಅಪೇಕ್ಷಿಸುವುದು ಸಾಧ್ಯವಿಲ್ಲ. ಕನ್ನಡದ ಬಗೆಗೆ ಆಸಕ್ತಿಯಿರುವ, ಸಾಹಿತ್ಯದ ಬಗೆಗೆ ಪರಿಚಯವಿರುವ, ಕನ್ನಡ ಸಂಸ್ಕೃತಿಯ ಬಗೆಗೆ ಕಾಳಜಿಯಿರುವ ಜನ ಅಲ್ಲಿ ತುಂಬ ವಿರಳ. ಈ ಮಾಧ್ಯಮಗಳಲ್ಲಿ ಜನಪರ ಆಶಯಗಳು, ಜನಸಾಮಾನ್ಯರ ತುಡಿತಗಳು ಮುಖ್ಯವಾಗುವದಿಲ್ಲ. ಕರ್ನಾಟಕದಲ್ಲಿ ಇವು ಇವೆಯೆಂಬ ಕಾರಣಕ್ಕೆ ಕೆಲವು ಕಳಪೆ ಕಾರ್ಯಕ್ರಮಗಳನ್ನು ಪ್ರಸಾರ ಮಾಡಿ ಕೈತೊಳೆದುಕೊಳ್ಳುತ್ತವೆ.

ಆಕಾಶವಾಣಿ-ದೂರದರ್ಶನದಂತಹ ಮಾಧ್ಯಮಗಳನ್ನು ಸರ್ಕಾರದ ಆಳುವ ನೀತಿ ನಿಯಂತ್ರಿಸಿದರೆ, ಕೆಲವು ದೊಡ್ಡ ಪತ್ರಿಕೆಗಳನ್ನು ಬಂಡವಾಳಶಾಹಿ ಶಕ್ತಿಗಳು ನಿಯಂತ್ರಿಸು ತ್ತಿವೆ. ಉಳಿದ ಸಣ್ಣ-ಪುಟ್ಟ ಪತ್ರಿಕೆಗಳು ಆಯಾ ತಾಲೂಕ-ಜಿಲ್ಲಾಗಳಿಗೆ ಸೀಮಿತ ವಾಗುತ್ತವೆ. ಹೀಗಾಗಿ ಪ್ರಸ್ತುತ ಸಂದರ್ಭದ ಸಮೂಹ ಮಾಧ್ಯಮಗಳಲ್ಲಿ ಬಹಳಷ್ಟು ಮಾಧ್ಯಮಗಳನ್ನು ರಾಜಕೀಯ ಶಕ್ತಿಗಳು, ಬಂಡವಾಳ ಶಾಹಿಗಳು ಮತ್ತು ಅಧಿಕಾರಶಾಹಿ ವ್ಯವಸ್ಥೆ ನಿಯಂತ್ರಿಸುತ್ತವೆ. ಕೆಲವು ಪತ್ರಿಕೆಗಳು ಜನಸಾಮಾನ್ಯರ ಸಮಸ್ಯೆಗಳಿಗೆ ಸ್ಪಂದಿಸಿ ದರೂ ಅವುಗಳ ಪ್ರಸಾರ ತುಂಬಾ ಕಡಿಮೆಯೆನ್ನಬಹುದಾಗಿದೆ.

೬. ಒಬ್ಬ ಸೃಜನಶೀಲ ಲೇಖಕ ತಾನು ಬರೆಯುವ ಕ್ರಿಯೆ ಪ್ರಾರಂಭಿಸುವುದೇ ಸಂವಹನಕ್ಕಾಗಿಯೆಂಬುದನ್ನರಿತುಕೊಂಡರೆ, ಈ ಸಮಸ್ಯೆಯೇಳುವುದಿಲ್ಲ. ಆದರೆ ಕೆಲವು ಸೃಜನಶೀಲ ಲೇಖಕರು ಬಳಕೆಯಲ್ಲಿರುವ ಭಾಷಿಕ ನೆಲೆಗಳನ್ನು ನಿರಾಕರಿಸಿ, ಕ್ಲಿಷ್ಟವಾದ ನೆಲೆಗಳಲ್ಲಿ ನಿಂತು ಸಂವಹನಕ್ಕೆ ತೊಡಗುತ್ತಾರೆ. ಇಂಥವರು ಜನಸಾಮಾನ್ಯರನ್ನು ಮುಟ್ಟು ವುದೇ ಇಲ್ಲ. ಜನಸಾಮಾನ್ಯರನ್ನು ಮುಟ್ಟಬೇಕೆಂದಾಕ್ಷಣ ಕೇವಲ ವಾಚ್ಯವಾಗಿ ಹೇಳ ಬೇಕೆಂದರ್ಥವಲ್ಲ. ಜನಸಾಮಾನ್ಯರ ಮಾತುಗಳಲ್ಲಿಯೇ ಮಹತ್ವವಾದುದನ್ನು ಸೃಷ್ಟಿಸಿದ ವಚನಕಾರರ, ದಾಸರ ಸಾಹಿತ್ಯ ನಮ್ಮೆದುರಿಗಿದೆ. ಅದೇ ರೀತಿಯಲ್ಲಿ ಆಧುನಿಕ ಸಾಹಿತ್ಯದ ಸಂದರ್ಭದಲ್ಲಿ ಬೇಂದ್ರೆ, ಕಂಬಾರರಂತಹ ಸಾಹಿತಿಗಳ ಕೃತಿಗಳನ್ನು ಗಂಭೀರವಾಗಿ ಪರಿಶೀಲಿಸಬೇಕಾಗಿದೆ.

ಸಾಮಾನ್ಯರ ಭಾಷೆಯಲ್ಲಿ ಹೇಳಿದರೆ ಮಹತ್ವ ಬರಲಿಕ್ಕಿಲ್ಲವೆಂಬ ಕೀಳರಿಮೆ ಕಾಡಿದಾಗ ಸಂವಹನಶೀಲವಲ್ಲದ ನೆಲೆಗಳನ್ನು ಕೆಲವು ಲೇಖಕರು ಆರಿಸಿಕೊಂಡಿರಬಹುದು. ಅಸಾಮಾನ್ಯ ಅಜರಾಮರ, ಸಾರ್ವಕಾಲಿಕ ಎಂಬಂತಹ ಭ್ರಮೆಗಳನ್ನಿಟ್ಟುಕೊಂಡಂಥವರು ಮಾತ್ರ ಸಾಮಾನ್ಯವಾದುದನ್ನು, ಸಹಜವಾದುದನ್ನು, ಸಕಾಲಿಕವಾದುದನ್ನು ನಿರಾಕರಿಸುತ್ತಾರೆ. ಹಾಗೆಂದು ಅಂಥವರ ಬಗೆಗೆ ಗಂಭೀರವಾಗಿ ಆಲೋಚಿಸಬೇಕಾಗಿಲ್ಲ. ಸತ್ವಯುತವಾದದ್ದನ್ನು ಅವರು ಕೊಟ್ಟರೆ ಅದು ಯಾವ ನೆಲೆಯಲ್ಲಿದ್ದರೂ ಹೊರಬರುತ್ತದೆ.

## ಟಿ. ಎಸ್. ಸತ್ಯನಾಥ್

೧. ಸರ್ಕಾರ, ಸಮುದಾಯದ ಭಾಷಾನೀತಿಯನ್ನು ರೂಪಿಸುತ್ತದೆ ಎಂಬುದನ್ನು 'ಹೆಗೆಮೊನಿ' ಎಂಬ ಅರ್ಥದಲ್ಲಿ ನಾವು ತೆಗೆದುಕೊಳ್ಳಬೇಕಾಗುತ್ತದೆ. ಯಾವುದೇ ನಿಲುವು ಅ–ರಾಜಕೀಯ ಆಗದೆ ಶುದ್ಧವಾಗಿರಲು ಸಾಧ್ಯವಿಲ್ಲ. ಅಲ್ಲದೆ 'ಹೆಗೆಮೊನಿ' ಎಂಬ ಪರಿಕಲ್ಪನೆಯ ನಿರ್ವಚನದ ಒಳಗೇ ಅದರ ವಿರುದ್ಧ ಏಳಬಹುದಾದ ವಿರೋಧದ ಧ್ವನಿಗಳ ಸೂಚನೆ ಕೂಡ ಅಡಗಿದೆ. ಈ ಅರ್ಥದಲ್ಲಿ, ವ್ಯವಸ್ಥೆಯ ವಿರುದ್ಧದ ಧ್ವನಿಗಳು ಸಮುದಾಯದ ಒಳಗಿನಿಂದಲೇ ಹುಟ್ಟಿಬರಬೇಕಾಗುತ್ತದೆ. ಸಮುದಾಯ ಎಂದ ಮಾತ್ರಕ್ಕೆ ಮೆಜಾರಿಟಿಯ ಅಭಿಪ್ರಾಯ ಎಂದಲ್ಲ. ಅದು ಮೈನಾರಿಟಿಯ ಧ್ವನಿಯಾಗಬಹುದು, ಒಂಟಿದನಿ ಕೂಡ ಆಗಿರಬಹುದು. ಹೀಗಾಗಿ ಸೈದ್ಧಾಂತಿಕವಾಗಿ, ಇಂತಹ ಸಮುದಾಯದ ಒತ್ತಡಗಳು ಇರಲು ಸಾಧ್ಯ. ಈ ಅರ್ಥದಲ್ಲಿ 'ಹೆಗೆಮೊನಿ' ಎಲ್ಲ ಬಗೆಯ ಸಾಂಸ್ಕೃತಿಕ ಒತ್ತಡಗಳನ್ನು ಒಳಗೊಂಡಂಥ ಪರಿಕಲ್ಪನೆಯಾಗಿದೆ.

ತ್ರಿಭಾಷಾ ಸೂತ್ರ ರೂಪುಗೊಂಡಿದ್ದೇ ಒಂದು ರಾಜಕೀಯ ಸೆಣಸಾಟದಿಂದಾಗಿ. ಅಂಬೇಡ್ಕರ್ ಇದರ ಬಗ್ಗೆ ಬೆಳಕು ಚೆಲ್ಲಿದ್ದಾರೆ. ರಾಷ್ಟ್ರಭಾಷೆ ಇಂಗ್ಲಿಷ್ ಆಗಬೇಕೆಂದು ಹಿಂದಿಯೇತರ ರಾಜ್ಯಗಳ ಪ್ರತಿನಿಧಿಗಳೂ, ಹಿಂದಿಯೇ ಆಗಬೇಕೆಂದು ಹಿಂ[illegible] ಪ್ರತಿಪಾದಕರೂ ಎಳೆದಾಟ ಮಾಡಿದರಂತೆ. ಕೊನೆಗೆ ಮತಕ್ಕೆ ಹಾಕಿದಾಗ ಇಂಗ್ಲಿಷ್ ಮತ್ತು ಹಿಂದಿಯ ಪರವಾಗಿ ಸರಿಸಮವಾದ (೭೭–೭೭) ಮತಗಳು ಬಂದವು. ಆಗ ಹಿಂದಿ ಪ್ರತಿಪಾದಕರು ಮುಂದಿನ ಮತ ಎಣಿಕೆಯ ವೇಳೆಗೆ ಇಂಗ್ಲಿಷ್ ಪರವಾದ ಒಂದು ಮತವನ್ನು ತಮ್ಮ ಕಡೆಗೆ ಸೆಳೆದುಕೊಳ್ಳುವುದರ ಮೂಲಕ ಮತಗಳ ಹಂಚಿಕೆ ಹಿಂದಿ ಪರವಾಗಿ (೭೮–೭೭) ಆಗುವಂತೆ ಮಾಡಿದರಂತೆ. ಸರ್ಕಾರ ಅನಿವಾರ್ಯವಾಗಿ ತ್ರಿಭಾಷಾ ಸೂತ್ರವನ್ನು ಜಾರಿಗೆ ತರಬೇಕಾಗಿ ಬಂತು.

ತ್ರಿಭಾಷಾಸೂತ್ರವನ್ನು ರೂಪಿಸಿದ ಕೇಂದ್ರಸರ್ಕಾರ, ರಾಜ್ಯಗಳಲ್ಲಿ ಶಿಕ್ಷಣ ಮಾಧ್ಯಮದಲ್ಲಿ ಪ್ರಾದೇಶಿಕ ಭಾಷೆಗೆ ಅಗ್ರಸ್ಥಾನವನ್ನು ಕೊಡಬೇಕೆಂದು ಹೇಳಿತ್ತು. ಆದರೆ ಈ ಅಗ್ರಸ್ಥಾನವನ್ನು ಇಂಗ್ಲಿಷ್ ಹೇಗೆ ನಿಧಾನವಾಗಿ ಆಕ್ರಮಿಸಿಕೊಂಡಿತು ಎಂಬುದು ತಿಳಿದ ವಿಷಯ. ಹಿಂದಿಯೇತರ ರಾಜ್ಯಗಳಲ್ಲಿ ಆಯಾ ಪ್ರಾದೇಶಿಕ ಭಾಷೆಗಳು ಪ್ರಮುಖ ಮಾಧ್ಯಮ ಎಂದು ಪರಿಗಣಿತವಾದರೂ ಸಬಾರ್ಡಿನೇಟ್ ಮಾಧ್ಯಮ ಎಂಬ ತಲೆಬರಹದಲ್ಲಿ ಹಿಂದಿಯು ಹೇಗೋ, ಆಂಧ್ರಪ್ರದೇಶ, ಆಸ್ಸಾಂ, ಕರ್ನಾಟಕ, ಒರಿಸ್ಸಾ, ತಮಿಳುನಾಡು ಮತ್ತು

ಪಶ್ಚಿಮ ಬಂಗಾಳಗಳಲ್ಲಿ ಸೇರಿಕೊಂಡಿವೆ. ಇದಲ್ಲದೆ ಆಂಧ್ರಪ್ರದೇಶ ಮತ್ತು ಅಸ್ಸಾಂಗಳಲ್ಲಿ ಹಿಂದಿಯು ರಾಜ್ಯಭಾಷೆಗಳಲ್ಲಿ ಒಂದಾಗಿ ಪರಿಗಣಿತವಾಗಿದೆ. ಶಿಕ್ಷಣದಲ್ಲಿ ಪ್ರಮುಖ ಪ್ರಥಮ ಭಾಷೆ(Major first language)ಎಂದು ಹಿಂದಿಯನ್ನು ಕರೆದು ಒಂದನೆಯ ತರಗತಿಯಿಂದ ಹತ್ತು ಅಥವಾ ಹನ್ನೊಂದನೆಯ ತರಗತಿಯವರೆಗೆ ಅಭ್ಯಾಸ ಮಾಡಲು ಆಂಧ್ರಪ್ರದೇಶ ಆಸ್ಸಾಂ, ಒರಿಸ್ಸಾ, ತಮಿಳುನಾಡು ಮತ್ತು ಪಶ್ಚಿಮ ಬಂಗಾಳಗಳಲ್ಲಿ ಅನುಕೂಲವಿದೆ. ಮಿಕ್ಕ ರಾಜ್ಯಗಳಲ್ಲಿ ಇದು ಇನ್ನೂ ವ್ಯಾಪಕವಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ. ಸರ್ಕಾರದ ಸೂತ್ರಗಳಲ್ಲಿ ಇಂತಹ ಒತ್ತಡಗಳನ್ನು ರಾಜಕೀಯ ಹಾಗೂ ರಾಜಕೀಯೇತರ ಶಕ್ತಿಗಳು ತಂದು ಹಾಕಿವೆ. ಕೆಲವು ಬಾರಿ ಜನಗಣತಿಯ ಸಂಖ್ಯೆಗಳನ್ನು ಆಧಾರವಾಗಿಟ್ಟು ಕೊಂಡು ಇಂತಹ ನಿರ್ಧಾರಗಳನ್ನು ತೆಗೆದುಕೊಳ್ಳಲಾಗುತ್ತಾದರೂ ಕೇವಲ ತಮ್ಮ ಅನುಕೂಲಕ್ಕೆ ಹೊಂದುವ ವಿವರಗಳನ್ನು ಮಾತ್ರ ತೆಗೆದುಕೊಳ್ಳುವುದು ಮತ್ತು ಜನಗಣತಿಯ ಮಾಹಿತಿಯನ್ನು ಒತ್ತಡಗಳ ಕಾರಣಕ್ಕಾಗಿ ದುರುಪಯೋಗಿಸಿಕೊಳ್ಳುವುದು ಸರ್ವೇ ಸಾಮಾನ್ಯ. ಇದನ್ನು ಸ್ಪಷ್ಟಪಡಿಸಲು, ಕರ್ನಾಟಕದ ಬಗ್ಗೆ ನಾನು ಯಾವ ಸಂಶೋಧನೆ ಯನ್ನೂ ಮಾಡಿಲ್ಲವಾದರೂ ಇಂದು ಹಿಂದಿ ರಾಜ್ಯಭಾಷೆಯಾಗಿರುವ ಮಧ್ಯಪ್ರದೇಶದ ಹೋಷಂಗಾಬಾದ್ ಜಿಲ್ಲೆಯಿಂದ ಒಂದಿಷ್ಟು ಮಾಹಿತಿಯನ್ನು ನೀಡುತ್ತೇನೆ. ಚಾರಿತ್ರಿಕವಾಗಿ ಗೋಂಡ್ ರಾಜರ ಅಧೀನದಲ್ಲಿದ್ದ ಈ ಜಿಲ್ಲೆ ತುಂಬಾ ಫಲವತ್ತಾದ, ಹೇರಳವಾಗಿ ಮಳೆ ಬೀಳುವ ಪ್ರದೇಶ. ಇಡಿಯ ಭಾರತ ಕ್ಷಾಮದ ಬಾಧೆಗೆ ಒಳಗಾಗಿದ್ದಾಗ ಕೂಡ ಗೋಧಿ ಯನ್ನು ವಿದೇಶಕ್ಕೆ ರಫ್ತು ಮಾಡುತ್ತಿದ್ದ ಭೂಭಾಗ. ವಿಶೇಷವಾಗಿ ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದ ಗೋಂಡಿ ಮತ್ತು ಆಸ್ಟ್ರೋ ಏಷಿಯಾಟಿಕ್ (ಮುಂಡಾ) ಭಾಷಾ ಪರಿವಾರಕ್ಕೆ ಸೇರಿದ ಕೊರ್ಕುಗಳು ಇಲ್ಲಿನ ಮೂಲ ನಿವಾಸಿಗಳು, ಸುಮಾರು ೧೭೦೦ರ ಸುಮಾರಿಗೆ ಬುಂದೇಲಖಂಡದಲ್ಲಿ ತಲೆದೋರಿದ ಕ್ಷಾಮ–ಡಾಮರಗಳು ಬುಂದೇಲಿ ಉಪಭಾಷೆ ಯನ್ನು ಮಾತನಾಡುವ ಜನರನ್ನು ಇಲ್ಲಿಗೆ ಅಲೆಯಲೆಯಾಗಿ ವಲಸೆ ಬರಲು ಪ್ರೇರಿಸಿತು. ಹೀಗೆಯೇ ಇತರ ಹಿಂದಿ ಉಪಭಾಷೆಯನ್ನಾಡುವ ಮಾಳವಿ ಮುಂತಾದ ವಲಸಿಗರೂ ಕಳೆದ ೨೦೦ ವರ್ಷಗಳಲ್ಲಿ ಇಲ್ಲಿ ಬಂದು ನೆಲೆಸಿದರು. ೧೯೦೧ರ ಜನಗಣತಿಯ ಪ್ರಕಾರ ಹೋಷಂಗಾಬಾದ್ ಜಿಲ್ಲೆಯಲ್ಲಿ ೬೪% ಬುಂದೇಲಿಯನ್ನು ಮಾತನಾಡುವವರೂ ೨೪% ಮಾಳವಿಯನ್ನು ಮಾತನಾಡುವವರೂ ಇದ್ದರು. ಆದರೆ ೧೯೬೧ರ ಜನಗಣತಿಯ ವೇಳೆಗೆ ಅವರೆಗೂ ಹಿಂದಿಯ ಉಪಭಾಷೆಯನ್ನು ಆಡುತ್ತಾ ಬಂದಿದ್ದ ಈ ಜನಗಳು ಒಮ್ಮೆಗೇ ಹಿಂದಿ ಮಾತೃಭಾಷೆ ಎಂದು ಜನಗಣತಿಯ ವಿವರಗಳಲ್ಲಿ ಹೇಳಿದ್ದನ್ನು ಗಮನಿಸಬಹುದು. ೧೯೬೧ರ ಜನಗಣತಿಯ ವಿವರಗಳ ಪ್ರಕಾರ ಬುಂದೇಲಿ ಮತ್ತು ಮಾಳವಿಯನ್ನು ಮಾತ ನಾಡುವವರ ಸಂಖ್ಯೆ ಇಲ್ಲವೇ ಇಲ್ಲ ಎನ್ನುವಂತಾಗಿದೆ. ಆದರೆ ಪರ್ಯಾಯವಾಗಿ ಹಿಂದಿ ಮಾತನಾಡುವವರ ಸಂಖ್ಯೆ ಅದಕ್ಕೆ ಅನುಗುಣವಾಗಿ ಹೆಚ್ಚಿವೆ.

೧೯೫೬ರಲ್ಲಿ ನಡೆದ,ಭಾಷಾವಾರು ತಳಹದಿಯ ಮೇಲಿನ ರಾಜ್ಯಗಳ ಪುನರ್‌ವಿಂಗಡಣೆ ಮತ್ತು ಅವರೆಗೂ ಮಹಾರಾಷ್ಟ್ರೀಯರಿಂದ ನಿಯಂತ್ರಿಸಲ್ಪಟ್ಟ 'ಸೆಂಟ್ರಲ್ ಪ್ರಾವಿನ್ಸಸ್ ಮತ್ತು ಬೇರಾರ್', ಹಿಂದೀಯರಿಂದ ನಿಯಂತ್ರಿಸಲ್ಪಟ್ಟ ಮಧ್ಯಪ್ರದೇಶವಾದುದು ಚಾರಿತ್ರಿಕ ಅಂಶಗಳನ್ನು ಬದಿಗೊತ್ತಿದ, ಅಂಕಿ-ಅಂಶಗಳನ್ನು ದುರುಪಯೋಗಪಡಿಸಿಕೊಂಡ ಹಾಗೂ ಸ್ಥಳೀಯ ಮೂಲನಿವಾಸಿಗಳನ್ನು ಅವಗಣನೆಮಾಡಿದ ಒಂದು ನಿರ್ದಿಷ್ಟ ಗುಂಪಿನ ಒತ್ತಡದ ಪರಿಣಾಮ. ಈ ಒತ್ತಡ ಎಷ್ಟು ಪ್ರಭಾವಕಾರಿಯಾದುದೆಂದರೆ ೧೯೬೧ರ ಜನಗಣತಿಯಲ್ಲಿ ಗೊಂಡಿ ಮತ್ತು ಕೊರ್ಕು ಭಾಷೆಗಳನ್ನಾಡುವ ಹಿಂದಿಯೇತರ ಗುಂಪುಗಳು ಕೂಡ ಹಿಂದಿ ತಮ್ಮ ಮಾತೃಭಾಷೆ ಎಂದು ಮಾಹಿತಿ ನೀಡಿರುವುದನ್ನು ಕಾಣಬಹುದು. ೧೯೬೧ರ ಮತ್ತು ೧೯೭೧ರ ಜನಗಣತಿಗಳ ನಡುವೆ ಗೊಂಡಿ ಮತ್ತು ಕೊರ್ಕುಗಳ ಜನ ಸಂಖ್ಯೆ ಅನುಕ್ರಮವಾಗಿ ೩೧೮% ಮತ್ತು ೨೪೩% ಹೆಚ್ಚಿರುವುದನ್ನು ಕಾಣಬಹುದು. ಜೈವಿಕವಾಗಿ ಹತ್ತು ವರ್ಷಗಳಲ್ಲಿ ಇಂತಹ ಏರಿಕೆ ಸಾಧ್ಯವಿಲ್ಲವಾದ್ದರಿಂದ ೧೯೭೧ರ ಜನಗಣತಿ ವಾಸ್ತವವಾದ ಗೊಂಡಿ ಮತ್ತು ಕೊರ್ಕು ಜನಸಂಖ್ಯೆಯನ್ನು ನಿರ್ದೇಶಿಸುತ್ತ ದೆಂದೂ, ೧೯೬೧ರ ಜನಗಣತಿಯ ಅಂಕಿ-ಅಂಶಗಳು ಗೊಂಡಿ ಮತ್ತು ಕೊರ್ಕುಗಳನ್ನು ಹಿಂದಿ ಮಾತೃಭಾಷೆಯನ್ನಾಗಿ ಹೇಳಿಕೆ ನೀಡಲು ತಂದ ಒತ್ತಡದ ಪರಿಣಾಮವೆಂದೂ ಮತ್ತು ಈ ಎಲ್ಲ ಅಂಕಿ-ಅಂಶಗಳು ಹಿಂದಿ ರಾಜ್ಯವೊಂದರ ನಿರ್ಮಾಣ ಮತ್ತು ಅದರ ಪರಿಣಾಮವಾಗಿ ಹಿಂದಿಯನ್ನು ರಾಷ್ಟ್ರಭಾಷೆಯನ್ನಾಗಿ ತರಲು ಹಿಂದಿವಾದಿಗಳು ತಂದ ಒತ್ತಡವೆಂದೂ ಸ್ಪಷ್ಟವಾಗುತ್ತದೆ. ಇದು ಕೇವಲ ಒಂದು ಜಿಲ್ಲೆಯ ಎರಡು ಮೂರು ಜನಗಣತಿಗಳ ಅಂಕಿ-ಅಂಶಗಳನ್ನು ಕೊಂಚ ಆಳವಾಗಿ ನೋಡಲು ಪ್ರಯತ್ನಿಸಿದಾಗ ಹೊರಬಂದ ಸಂಗತಿ. ಕರ್ನಾಟಕ ಗಡಿವಿವಾದಗಳಲ್ಲೂ ಇಂತಹ ಒತ್ತಡಗಳು ಕಂಡುಬರಲು ಸಾಧ್ಯವಿದೆ ಎಂಬುದನ್ನು ಇದು ನಿರ್ದೇಶಿಸುತ್ತದೆ.

ಕರ್ನಾಟಕದ ಒಳಗೇ ಸರ್ಕಾರದ ಪರವಾದ, ವಿರೋಧವಾದ, ಗುಂಪುಗಳೇ ಪರಸ್ಪರ ವಿರುದ್ಧವಾದ ಒತ್ತಡಗಳನ್ನು ತರಲು ಸಾಧ್ಯವಿದೆ. ನಾವು ಇಂದು ಶಾಲೆಗಳಲ್ಲಿ ಕಲಿಸು ತ್ತಿರುವ ಕನ್ನಡವನ್ನೇ ನಿದರ್ಶನಕ್ಕೆಂದು ತೆಗೆದುಕೊಳ್ಳೋಣ. ನಾವು ಕಲಿಸುತ್ತಿರುವ ಗ್ರಾಂಥಿಕ ಕನ್ನಡ ಬ್ರಾಹ್ಮಣ ಮತ್ತು ಇತರ ನಗರವಾಸಿ ಮುಂದುವರಿದ ಜಾತಿಗಳ ದಿನನಿತ್ಯದ ವ್ಯಾವಹಾರಿಕ ಭಾಷೆಗೆ ಸಮೀಪವಾಗಿದ್ದು, ಅಬ್ರಾಹ್ಮಣ, ಹರಿಜನ ಮತ್ತು ಅಸಂಖ್ಯಾತ ಗ್ರಾಮವಾಸಿಗಳ ದಿನ ನಿತ್ಯದ ವ್ಯಾವಹಾರಿಕ ಭಾಷೆಯಿಂದ ದೂರವಾಗಿದೆ. ಈ ಸ್ಥಿತಿ ಸಮಾಜದ ಕೆಲವು ಗುಂಪುಗಳಿಗೆ, ಶೈಕ್ಷಣಿಕವಾಗಿ ಕೆಲವು ಉಪಯುಕ್ತತೆಗಳನ್ನು ನೀಡಿದರೆ ಉಳಿದ ಗುಂಪುಗಳನ್ನು ಅನುಪಯುಕ್ತತೆಗೆ ಈಡು ಮಾಡುತ್ತದೆ. ಇದರ ಬಗ್ಗೆ ಅಲ್ಲಲ್ಲಿ ವಿರೋಧದ ಧ್ವನಿಗಳೂ ಕಂಡು ಬಂದಿವೆ. ಚಾರಿತ್ರಿಕವಾಗಿ ಕೆಲವು ಶಕ್ತಿಗಳ ಒತ್ತಡ ದಿಂದ ರೂಪುಗೊಂಡಿರುವ ಈ ಗ್ರಾಂಥಿಕ ಭಾಷೆಯನ್ನು ಹೇಗೆ ಕಸಿಗೊಳಿಸಬೇಕು ಎಂಬ ಬಗ್ಗೆ ಸರ್ಕಾರ, ಸಮುದಾಯ, ಭಾಷಾವಿಜ್ಞಾನಿಗಳು ಮತ್ತು ಶಿಕ್ಷಣತಜ್ಞರು ಒಟ್ಟಾಗಿ

ಯೋಚನೆ ಮಾಡಬೇಕಾದ ಅವಶ್ಯಕತೆ ಇದೆ. ಈಗಾಗಲೇ ಕೊಡವರು ಪ್ರತ್ಯೇಕ ಕೊಡಗು ಮತ್ತು ಸ್ವಾಯತ್ತತೆಗೆ ತಮ್ಮ ಬೇಡಿಕೆಯನ್ನು ಮುಂದಿಟ್ಟಿದ್ದಾರೆ. ಈ ರೀತಿಯ ವಿರೋಧ ವನ್ನು ವ್ಯಕ್ತಪಡಿಸದೆಯೇ ಅಥವಾ ಅಂತಹ ಅಗತ್ಯವನ್ನು ಮನಗಾಣದೆ ತುಳುವರು, ಕೊಂಕಣಿಗಳು, ಸೋಲಿಗರು, ಜೇನು ಕುರುಬರು ಇತ್ಯಾದಿ ಗುಂಪುಗಳು ತಮ್ಮ ಮಾತೃಭಾಷೆ ಯನ್ನು ಬಿಟ್ಟು ಕನ್ನಡವನ್ನು ಕಲಿಯುತ್ತಾ ಬಂದಿದ್ದಾರೆ. ತುಳು ಇತ್ತೀಚೆಗೆ ತನ್ನದೇ ಆದ ಲಿಪಿಯೊಂದನ್ನು ರೂಪಿಸಿಕೊಂಡು ನಿಘಂಟು ರಚನೆ, ಸಂಶೋಧನೆ ಮುಂತಾದ ಕೆಲಸಗಳ ಮೂಲಕ ಭಾಷೆ ಮತ್ತು ಸಂಸ್ಕೃತಿಗೆ ಒಂದು ಸ್ಥಾನವನ್ನು ದೊರಕಿಸಿಕೊಡುವ ಹಾಗೂ ಶಿಷ್ಟ ಭಾಷೆಯನ್ನು ರೂಪಿಸುವ ದಾರಿಯಲ್ಲಿ ಸಾಗುತ್ತಿದೆ. ರಾಜಕೀಯವಾಗಿ ಹೆಚ್ಚು ಒತ್ತಡ ತರಬಲ್ಲ ಕೊಂಕಣಿಯು ಸಾಹಿತ್ಯ ಅಕಾಡೆಮಿಯಿಂದ ಮನ್ನಣೆ ಪಡೆದಿದೆಯಾದರೂ ಮೂರು ರಾಜ್ಯಗಳಲ್ಲಿ ಹರಿದುಹಂಚಿಹೋಗಿರುವುದರಿಂದ ಸಾಕಷ್ಟು ಒತ್ತಡವನ್ನು ತರುವುದರಲ್ಲಿ ಸಫಲವಾಗಿಲ್ಲ. ಸೋಲಿಗ, ಜೇನು ಕುರುಬ ಇತ್ಯಾದಿ ಭಾಷೆಗಳನ್ನಾಡುವ ಮಂದಿ ಇಂತಹ ಒತ್ತಡದ ಬಗ್ಗೆ ಇನ್ನೂ ಯೋಚನೆ ಕೂಡ ಮಾಡಲು ಹೋಗಿಲ್ಲ. ಆದರೆ ಇವು ಒಂದಲ್ಲ ಒಂದು ದಿನ ಜಾಗೃತಗೊಂಡು ಚಲನಶೀಲವಾಗಬಲ್ಲ ಶಕ್ತಿಗಳು. ಇದಲ್ಲದೆ ಧಾರ್ಮಿಕ ನೆಲೆಯ ಉರ್ದು ಒತ್ತಡ, ಆರ್ಥಿಕ ನೆಲೆಯ ಕನ್ನಡ ಚಳುವಳಿ, ಚರ್ಚುಗಳಲ್ಲಿ ಕನ್ನಡ ಹಾಡುಗಳ ಬಳಕೆಯ ಒತ್ತಡ, ಬ್ರಾಹ್ಮಣೀಕರಣ ಮತ್ತು ಸುಲಭ ಅಂಕಗಳಿಕೆಯ ಯಂತ್ರವಾದ ಸಂಸ್ಕೃತ ಇತ್ಯಾದಿಗಳು ಸರ್ಕಾರ ಮತ್ತು ಸಮುದಾಯದ ಮೇಲೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ತರಲಾಗುತ್ತಿರುವ ಒತ್ತಡಗಳೇ. ಆದರೆ ಈ ಎಲ್ಲ ಒತ್ತಡಗಳಿಗೂ ಒಂದಲ್ಲ ಅನೇಕ ಮುಖಗಳಿವೆ. ವಸ್ತುನಿಷ್ಠವಾದ ವಿಶ್ಲೇಷಣೆ ಈ ಸಂದರ್ಭಗಳಲ್ಲಿ ತುಂಬಾ ಕ್ಲಿಷ್ಟವೂ ಹೌದು.

೨. ಭಾರತವನ್ನು ನಾವು ಬಹುಭಾಷಾ ಸಂದರ್ಭ ಎಂದು ಕರೆಯುತ್ತೇವೆ. ಹತ್ತೊಂಬತ್ತನೆಯ ಶತಮಾನದ ಯುರೋಪಿನ ರಾಷ್ಟ್ರಗಳು ಏಕಭಾಷಾ ಸಂದರ್ಭದಲ್ಲಿ ರೂಪುಗೊಂಡವಾಗಿದ್ದು 'ಒಂದು ಭಾಷೆ–ಒಂದು ರಾಷ್ಟ್ರ' ಎಂಬ ಪರಿಕಲ್ಪನೆ ಬೆಳೆಯಿತು. ಇದರ ಪರಿಣಾಮವಾಗಿ ಒಂದು ರಾಷ್ಟ್ರದ ಭಾಷೆ ಅದರ ಸಂಸ್ಕೃತಿ ಮತ್ತು ಜೀವನ ಕ್ರಮ ಗಳನ್ನು ಪ್ರತಿಬಿಂಬಿಸುತ್ತದೆ ಎಂಬ ಅಭಿಪ್ರಾಯ ಬೆಳೆದು ರಾಷ್ಟ್ರ ಮತ್ತು ರಾಷ್ಟ್ರೀಯತೆಯ ಪರಿಕಲ್ಪನೆಗಳು ಭಾಷೆಯನ್ನು ಆಧಾರವನ್ನಾಗಿಟ್ಟುಕೊಂಡು ರೂಪುಗೊಂಡಿದ್ದನ್ನು ಕಾಣು ತ್ತೇವೆ. ಇಂದು ಜಗತ್ತಿನ ಬಹುಪಾಲು ರಾಷ್ಟ್ರಗಳು ಬಹುಭಾಷಾ ರಾಷ್ಟ್ರಗಳು ಎಂದು ಪರಿಗಣಿತವಾದರೂ ಎಲ್ಲವೂ ಭಾರತದಂತೆ ಬಹು ಸಂಸ್ಕೃತಿಯಿಂದ ಕೂಡಿದ ರಾಷ್ಟ್ರಗಳಾಗಿಲ್ಲ. ಬಹುಭಾಷಾ, ಬಹು ಸಂಸ್ಕೃತಿಯ ಸಂದರ್ಭದಲ್ಲಿ ಪ್ರತಿಯೊಂದು ಭಾಷೆಯ ಹಿಂದೆಯೂ ಒಂದು ವಿಶಿಷ್ಟ ಜೀವನ ಕ್ರಮವಿದ್ದು ಅದಕ್ಕನುಗುಣವಾಗಿ ಶಾಬ್ದಿಕ ಮತ್ತು ಅಶಾಬ್ದಿಕ (non-verbal) ಸಂವಹನಗಳ ಮೂಲಕ ಒಂದು ಜನಾಂಗ ತನ್ನನ್ನು ಅಭಿವ್ಯಕ್ತಿಸಿ ಕೊಳ್ಳುತ್ತಿರುತ್ತದೆ. ಇಲ್ಲಿ ಅಶಾಬ್ದಿಕ ಸಂವಹನ ಎಂದಾಗ ಮುಖಭಾವ (f cial

expression), ಹಸ್ತಾಭಿನಯ (gesture), ನೋಟ (gaze), ಸ್ಥಳಾಭಿವ್ಯಕ್ತಿ (proximics), ಭಂಗಿ (posture), ಧ್ವನಿಯ ಏರಿಳಿತ, ಸ್ಪರ್ಶ (bodily contact), ದೇಹಭಾಗ ಚಲನೆ (kinesics), ಉಡುಪು ಮತ್ತಿತರ ಸಾಮಾಜಿಕ ನಡವಳಿಕೆಗಳ ಮೂಲಕ ಅಭಿವ್ಯಕ್ತಿಗೊಳ್ಳುವ ಸಂದೇಶ ಎಂದು ಅರ್ಥವಾಗುತ್ತದೆ. ಶಾಬ್ದಿಕ ಮತ್ತು ಅಶಾಬ್ದಿಕ ಸಂವಹನಗಳೆರಡೂ ಪರಸ್ಪರ ಪೂರಕವಾಗಿದ್ದು, ವಿಪುಲವಾದ 'ರಿಡಂಡೆನ್ಸಿ'ಯಿಂದ ಕೂಡಿರುತ್ತವೆ. ಸಂವಹನದಲ್ಲಿ ಸಂದಿಗ್ಧತೆ ಉಂಟಾದಾಗ ಈ ರಿಡಂಡೆನ್ಸಿ ಅದನ್ನು ನಿವಾರಿಸುತ್ತದೆ ಹಾಗೂ ಈ ದಿಸೆಯಲ್ಲಿ ಶಾಬ್ದಿಕ ಸಂವಹನಕ್ಕಿಂತ ಅಶಾಬ್ದಿಕ ಸಂವಹನ ಹೆಚ್ಚು ಅಥೆಂಟಿಕ್ ಆದ ಸಂದೇಶವನ್ನು ನೀಡುತ್ತಿರುತ್ತದೆ. ಹೀಗಾಗಿ ಒಂದು ಭಾಷೆ ಕೇವಲ ಒಂದು ಭಾಷೆಯಷ್ಟೇ ಅಲ್ಲದೆ, ಒಂದು ಸಮುದಾಯದ ವಿಶಿಷ್ಟ ನಡಾವಳಿಯ ಒಂದು ಘಟಕವಾಗಿರುತ್ತದೆ. ವಿವಿಧ ಭಾರತೀಯ ಪ್ರಾದೇಶಿಕ ಭಾಷೆಗಳು ಒಂದೊಂದು ಉಪ ಸಂಸ್ಕೃತಿಯಾಗುವುದು ಮತ್ತು ಭಾರತೀಯತೆಯ ಏಕತೆಯ ಪರಿಕಲ್ಪನೆಯಿಂದ ಭಿನ್ನವಾಗುವುದು ಈ ಅರ್ಥದಲ್ಲಿ. ಅನ್ಯಭಾಷಿಕರ ವಿರುದ್ಧ ಅಸಹನೆ, ಪೂರ್ವಗ್ರಹ (stereotype) ಗಳು ಬೆಳೆಯುವುದೂ ಇದೇ ಕಾರಣದಿಂದ. ಕರ್ನಾಟಕದ ಒಳಗೆ ಪರಸ್ಪರ ಕಿತ್ತಾಡುವ ತಮಿಳು, ತೆಲುಗು, ಮಲಯಾಳಿ ಮತ್ತು ಕನ್ನಡಿಗರು ಕರ್ನಾಟಕದ ಹೊರಗೆ, ಅದರಲ್ಲೂ ಹಿಂದಿ ಮಾತನಾಡುವ ರಾಜ್ಯಗಳಿಗೆ ವಲಸೆ ಹೋಗಬೇಕಾಗಿ ಬಂದಾಗ ತಮ್ಮಲ್ಲಿರುವ ಅಲ್ಪ ಸಾಂಸ್ಕೃತಿಕ ಭಿನ್ನತೆಗಳನ್ನು ಮರೆತು ತಮ್ಮಲ್ಲಿರುವ ಸಾಮ್ಯಗಳ ಆಧಾರದ ಮೇಲೆ ಬೆಸುಗೆಗೊಂಡು ಪರಸ್ಪರ ಸೌಹಾರ್ದದಿಂದ ಬಾಳುವುದನ್ನು ಕಾಣಬಹುದು. ಇಲ್ಲಿ ದ್ರಾವಿಡ ಭಾಷೆಗಳನ್ನಾಡುವವರ ನಡುವೆ ಶಾಬ್ದಿಕ ಅಭಿವ್ಯಕ್ತಿಯ ದೃಷ್ಟಿಯಿಂದ ಭಿನ್ನತೆ ಕಂಡು ಬಂದರೂ ಪರಸ್ಪರ ಸಾಮಾನ್ಯವಾದ ಅಶಾಬ್ದಿಕ ಅಭಿವ್ಯಕ್ತಿಯ ಅಂಶಗಳು ಹಾಗೂ ಅದಕ್ಕಿಂತ ತೀವ್ರವಾಗಿ ಭಿನ್ನವಾದ ಹಿಂದಿಯ ಅಶಾಬ್ದಿಕ ಅಭಿವ್ಯಕ್ತಿಯ ಅಂಶಗಳು ದಕ್ಷಿಣ ಭಾರತೀಯರನ್ನು ಪರಸ್ಪರ ಹತ್ತಿರ ತರುವ ಅಂಶ. ಇಂಥದೇ ನಡವಳಿಕೆಯನ್ನು ನಾವು ದಕ್ಷಿಣ ಭಾರತದ ನಗರಗಳಿಗೆ ವಲಸೆ ಬಂದಿರುವ ಉತ್ತರ ಭಾರತೀಯರಲ್ಲೂ ನೋಡಬಹುದು.* ಅನ್ಯಭಾಷಿಕನೊಬ್ಬ ಮೊದಲಿಗೆ ನಮ್ಮ ಭಾಷೆಯನ್ನು ಅಸಮರ್ಪಕವಾಗಿ ಮಾತನಾಡಲು ಪ್ರಯತ್ನಿಸಿದಾಗ ಅದನ್ನು ಗುರುತಿಸಿ ಮೆಚ್ಚಿಕೊಂಡರೂ,

---

* ವೈಯಕ್ತಿಕವಾಗಿ ಕೂಡ ಇದು ನನ್ನ ಅನುಭವಕ್ಕೆ ಆಗಾಗ್ಗೆ ಬಂದಿದೆ. ಹಿಂದಿಯನ್ನು ಮಾತೃಭಾಷೆಯನ್ನಾಗುಳ್ಳ ಕನ್ನಡೇತರ ಹೆಣ್ಣನ್ನು ಮದುವೆಯಾಗಿ ಹತ್ತು ವಸಂತಗಳನ್ನು ಕಳೆದಿದ್ದರೂ ಆಗಾಗ್ಗೆ ತಲದೋರುವ 'ವರ್ಷ'ದ ಗುಡುಗು–ಸಿಡಿಲುಗಳು ಅನಿವಾರ್ಯವಾಗಿ ಸಂವಹನದಲ್ಲಿನ ಸಂದಿಗ್ಧತೆಯಿಂದಲೇ ಉಂಟಾಗಿರುವುದನ್ನು ನಾವು ಗಮನಿಸಿದ್ದೇವೆ. ಇಂಗ್ಲಿಷ್–ಹಿಂದಿ–ಕನ್ನಡಗಳು ಹಾಗೂ ಅವುಗಳ ಸಮ್ಮಿಶ್ರಣವನ್ನು ಉಪಯೋಗಿಸುತ್ತಾ ಬಂದಿದ್ದರೂ ಸಂವಹನದಲ್ಲಿ ಸಂದಿಗ್ಧತೆ ಉಂಟಾದಾಗ suprasegmental features ಅಥವಾ ಅಶಾಬ್ದಿಕ ಸಂವಹನ ಅಥವಾ ಸಾಂಸ್ಕೃತಿಕವಾದ ಒಂದು ವಿವರ ಇದರ ಮೂಲ ಕಾರಣ ಎಂಬುದನ್ನು ನಾವು ಮನಗಂಡಿದ್ದೇವೆ.

ಕಾಲಕ್ರಮೇಣ ಅದನ್ನು ಒಂದು ಕೊರತೆಯನ್ನಾಗಿ ಪರಿಗಣಿಸಿ ಅಸಹನೆಯನ್ನು ವ್ಯಕ್ತಪಡಿಸ ಬಹುದು. ದಕ್ಷಿಣ ಭಾರತೀಯನೊಬ್ಬ ಹಿಂದಿಯಲ್ಲಿ ಮಾತನಾಡಲು ಪ್ರಯತ್ನಿಸಿದಾಗ ಅದನ್ನು ಮದ್ರಾಸೀ ಹಿಂದಿ ಎಂದು ಗುರುತಿಸುವ ಹಿಂದೀಯರು ಅವನ ಹಿಂದಿ ಕಲಿಯುವಿಕೆಯ ಪರಿಶ್ರಮವನ್ನು ಗುರುತಿಸಿ ಬೆನ್ನು ತಟ್ಟಿದರೂ. ಆಮೇಲೆ ಅದನ್ನೇ ಕಳಂಕ (stigmatize) ಎಂದು ಗುರುತಿಸಿ 'ಸಾಲಾ ಮದ್ರಾಸಿ, ಇಷ್ಟು ವರ್ಷ ಇಲ್ಲೇ ಇದ್ದೂ ನಮ್ಮ ಭಾಷೆಯನ್ನು ಸರಿಯಾಗಿ ಕಲಿತಿಲ್ಲ' ಎಂದು ಆಕ್ಷೇಪಣೆ ಮಾಡುವುದೂ ಉಂಟು. ಇಂತಹ ಸಂದರ್ಭದಲ್ಲಿ ನಾವು ಭಾರತದ ಏಕತೆಯನ್ನು ಸಾಬೀತುಪಡಿಸುವಲ್ಲಿ ಭಾಷಾ ವಿಜ್ಞಾನದ ಅತ್ಯಂತ ಅಮೂಲ್ಯ ಕೊಡುಗೆ ಎಂದು ಭಾವಿಸುವ ಭಾಷಾ ಪ್ರದೇಶ, ಭಾಷೆಗಳ ಪರಸ್ಪರ ಕೊಳುಕೊಡೆ (convergence), ಭಾರತೀಯ ಭಾಷೆಗಳ ಏಕರೂಪದ ವಾಕ್ಯರಚನಾ ವಿನ್ಯಾಸ (Syntactic studies) ಹಾಗೂ ಪದ-ಪದ, ಆಕೃತಿಮ-ಆಕೃತಿಮ ಅನುವಾದ ಸಾಧ್ಯತೆ (word to word, morph to morph translatability) ಮುಂತಾದ ಐಕ್ಯತೆಯ ಸರಳೀಕರಣಗಳು ಮಸುಕು ಮಸುಕಾಗುತ್ತವೆ. ಈ ರಾಷ್ಟ್ರದ ಬಹು ಸಂಖ್ಯಾತರು ಹಿಂದಿ ಭಾಷೆಯನ್ನು ಆಡುತ್ತಾರೆ ಎಂದು ಭಾವಿಸಲಾಗಿದೆಯಾದರೂ ಅದರಲ್ಲೇ ಅವಧಾರಣೆ (stress), ಕಾಕು (intonation) ಗಳಂತಹ ವಾಕ್ಯಾಂಶಾತೀತ ಲಕ್ಷಣಗಳ (supra-segmental feature) ಗಳ ಆಧಾರದ ಮೇಲೆ ಉಪಭಾಷೆಗಳ ಭಿನ್ನತೆಯನ್ನು ಗುರುತಿಸ ಲಾಗುತ್ತದೆ. ಇಡೀ ಭಾರತದಲ್ಲಿ ಉಪಯೋಗಿಸುವ Indian Englishನ ರಚನೆ ಹೆಚ್ಚು ಕಡಿಮೆ ಒಂದೇ ರೀತಿ ಇದ್ದರೂ ಅದರ ಭಿನ್ನತೆ ಮತ್ತು ಸಂವಹನದ ತೊಡಕುಗಳಿಗೆ (non-comprehension) ಗಳಿಗೆ ಕಾರಣ ವಿವಿಧ ರಾಜ್ಯಗಳ ಇಂಗ್ಲಿಷ್‌ನಲ್ಲಿರುವ suprasegmental feature ಗಳು ಹಾಗೂ ಅದರ ವಿಶಿಷ್ಟ ಪ್ರಾದೇಶಿಕ ಸಾಂಸ್ಕೃತಿಕ ನಡವಳಿಕೆಯ ಅರ್ಥವಲಯಗಳು, (semantics) ದೇಶದ ಐಕ್ಯದ ಹೆಸರಿನಲ್ಲಿ ಪ್ರಾದೇಶಿಕ ಅಂಶಗಳನ್ನು ಕಡೆಗಣಿಸಲಾಗುತ್ತಿರುವ ಈ ಸಂದರ್ಭದಲ್ಲಿ ಪ್ರಾದೇಶಿಕ ಭಾಷೆ ಮತ್ತು ಅದರ ಸಂಸ್ಕೃತಿಗಳ ಬಹುತ್ವ (plurality) ವನ್ನು ಅಗತ್ಯವಾಗಿ ಒಪ್ಪಿಕೊಂಡೇ ಕೆಲಸ ಮಾಡಬೇಕಾಗಿದೆ. ಈ ಅರ್ಥದಲ್ಲಿ ಭಕ್ತಿ ಪಂಥ ಒಂದು ಎಳೆಯ ಏಕಶಿಲಾಕೃತಿಯ (monolithic) ಪಂಥವಲ್ಲ. ಕೆಲವು ಬಾರಿ ಪರಸ್ಪರ ವಿರೋಧವ ಎಳೆಗಳಿಂದ ಕೂಡಿರುವ ಹಾಗೂ ಹಲವಾರು ಪ್ರಾದೇಶಿಕ ಭಾಷೆಗಳ ಎಳೆಯಿಂದ ಕೂಡಿದ ಭಕ್ತಿ ಪಂಥಗಳ ಒಂದು ಸಮೂಹ. ಹಾಗೆಯೇ ನಮ್ಮ ಬಹುಭಾಷಿಕತೆ ಕೂಡ ಚಾರಿತ್ರಿಕವಾಗಿ ರೂಪುಗೊಂಡ ಒಂದು ಸಮುದಾಯದ ಭಾಷೆಗಳ ಶಾಬ್ದಿಕ ಮತ್ತು ಅಶಾಬ್ದಿಕ ಸಂವಹನಗಳ ಸಂದರ್ಭ. ಈ ಅರ್ಥದಲ್ಲಿ ಅದು ಭಿನ್ನ ಭಿನ್ನ ಉಪ ಸಂಸ್ಕೃತಿಗಳ ಸಂಘರ್ಷ ಕೂಡ ಹೌದು ಇದೊಂದು ಚಾರಿತ್ರಿಕ ವಾಸ್ತವಿಕತೆ. ಇದನ್ನು ನಾವು ದೇಶದ ಐಕ್ಯದ ಹೆಸರಿನಲ್ಲಿ ಗಮನಾರ್ಹವಲ್ಲದ ಅಂಶ ಎಂದು ಕುಗ್ಗಿಸಿ ಪಕ್ಕಕ್ಕೆ ಸರಿಸಬಹುದು ಅಥವಾ ತಮಿಳುನಾಡಿನಲ್ಲಿ ದ್ರಾವಿಡ ಕಳಗಂ ಮಾಡಿದಂತೆ ಅದನ್ನು ಹಿಗ್ಗಿಸಿ ಪರಸ್ಪರ ವಿರೋಧೀ ರೂಪದ ಆರ್ಯ-ದ್ರಾವಿಡ ಸಂಸ್ಕೃತಿ

ಗಳ ಘರ್ಷಣೆಯ ರೂಪಕ್ಕೆ ತಂದು ಅದನ್ನೇ ಒಂದು ದೊಡ್ಡ ಚಳುವಳಿಯನ್ನಾಗಿ ಮಾಡಬಹುದು. ಆದರೆ ಬಹುಭಾಷಿಕತೆ ಮತ್ತು ಬಹುಸಂಸ್ಕೃತಿ ಹಾಗೂ ಅದರೊಳಗಿನ ಅಂತರ್ ಚಲನಶೀಲತೆ ಒಂದು ವಾಸ್ತವ ಸತ್ಯ.

೩. ಕನ್ನಡ ಮಾಧ್ಯಮದ ಪರ ಮತ್ತು ವಿರೋಧವಾಗಿ ಮಂಡಿತವಾಗುತ್ತಿರುವ ವಾದಗಳು ಒಂದು ಅರ್ಥದಲ್ಲಿ ಜನಸಾಮಾನ್ಯರ ಆಯ್ಕೆಯಲ್ಲ. ಈ ಆಯ್ಕೆಯನ್ನು ಜನಸಾಮಾನ್ಯರ ಮೇಲೆ ಹೇರಲಾಗುತ್ತಿದೆಯೇ ಅಥವಾ ಇಲ್ಲವೆ ಎಂಬುದರ ಬಗ್ಗೆ ಚರ್ಚೆಯ ಅಗತ್ಯವಿದೆ.

ಸಂಸ್ಕೃತಿಯೊಂದರಲ್ಲಿ ಚಾರಿತ್ರಿಕವಾಗಿ ಸಂವಹನವಾಗುವ ಮೌಲ್ಯಗಳೆಲ್ಲವೂ ಸಹಜ, ಪ್ರಾಮಾಣಿಕ ಮತ್ತು ಪ್ರಜ್ಞಾಪೂರ್ವಕವಾದ ಆಯ್ಕೆಗಳಾಗಿರುವದಿಲ್ಲ. ನಾವು ಮಾಡುವ ಸಾಂಸ್ಕೃತಿಕ ನಿರ್ಧಾರಗಳಲ್ಲಿ ಅನೇಕವು ಪ್ರಜ್ಞಾಪೂರ್ವಕವಲ್ಲದ ಪಾತಳಿಗೆ ಸೇರಿರುತ್ತವೆ ಹಾಗೂ ಅವು ನಮ್ಮ ವೈಯಕ್ತಿಕ ಆಯ್ಕೆಗಳಾಗಿರುವುದಿಲ್ಲ. ಈ ಪ್ರಕ್ರಿಯೆಯನ್ನು ರೇಮಾಂಡ್ ವಿಲಿಯಮ್ಸ್ ಡಾಮಿನೆಂಟ್, ರೆಸಿಡ್ಯುಯಲ್ ಮತ್ತು ಎಮರ್ಜೆಂಟ್ ಎಂಬ ಪರಿಕಲ್ಪನೆಗಳ ಮೂಲಕ ಗುರುತಿಸುತ್ತಾನೆ. ಸಂಸ್ಕೃತಿಯೊಂದರ ಮೌಲ್ಯ ವ್ಯವಸ್ಥೆಯ ಸಮಕಾಲೀನ (synchronic) ಹಂತವೊಂದರಲ್ಲಿ ಚಾರಿತ್ರಿಕ (diachronic) ಆಗಿ ಬಂದ ಪ್ರಧಾನ (dominant) ಮತ್ತು ರೆಸಿಡ್ಯುಯಲ್ (residual) ಮೌಲ್ಯಗಳಿದ್ದು ಇವುಗಳ ಸಂಘರ್ಷದಿಂದ ಮೂಡುವ ಹೊಸ ಮೌಲ್ಯಗಳನ್ನು ಮೂಡಿ ಬಂದ ಮೌಲ್ಯಗಳು ಎಂದು ಕರೆದು ಉಳಿದವನ್ನು ದತ್ತವಾಗಿ ಬಂದವುಗಳು ಎಂದು ನಿರ್ದೇಶಿಸಬಹುದು. ಹೀಗಾಗಿ ಪ್ರತಿಯೊಂದು synchronic ಪೀಳಿಗೆಯಲ್ಲಿಯೂ residual ಆಗುತ್ತಾ ಉಳಿಯುವ ಮೌಲ್ಯಗಳು ಉರುಳುತ್ತಿರುವ ಹಿಮದುಂಡಿನಂತೆ ಗಾತ್ರಗೌರವವನ್ನು ಪಡೆದು ತಲತಲಾಂತರಗಳಿಂದ ಉಳಿದು ಬಂದ residual ಆದ ಮೌಲ್ಯಗಳನ್ನು ಒಟ್ಟಾಗಿ ಸೇರಿಸಿಕೊಂಡು ಮುಂದಿನ ಪೀಳಿಗೆಯ ಮೇಲೆ ಹೇರಲ್ಪಡುತ್ತಾ ಹೋಗಬಹುದು. ಶಿಕ್ಷಣ ಮಾಧ್ಯಮದಲ್ಲಿ ಕನ್ನಡದ ಪರ ಮತ್ತು ವಿರೋಧವಾಗಿರುವ ಧ್ವನಿಗಳು ಕೂಡ ಈ ತರಹದ ದತ್ತವಾಗಿ ಬಂದ ರೆಡಿಮೇಡ್ ಮೌಲ್ಯಗಳಾಗಿದ್ದು ಯಾವ ವಿಧವಾದ ಸಾಕ್ಷ್ಯಾಧಾರ (empirical evidence) ಗಳಿಂದ ಹೊರತಾದ ಮೌಲ್ಯಗಳಿಂದ ರೂಪುಗೊಂಡಿದ್ದಾಗಿವೆ. ತಮ್ಮ ಅನುಕೂಲಗಳಿಗಾಗಿ ವ್ಯಕ್ತಿಗಳು, ಗುಂಪುಗಳು ಈ ಮೌಲ್ಯಗಳನ್ನು ಅನ್ಯರ ಮೇಲೆ ಹೇರಬಹುದು. ಉಳಿದ ಸಮುದಾಯ ಅದನ್ನು ತನ್ನದೇ ಆದ ಮೌಲ್ಯಗಳು ಎಂದು ಒಪ್ಪಿಕೊಳ್ಳಲೂಬಹುದು.

ಇಂತಹ ವಸ್ತುಸ್ಥಿತಿಯ ಬಗ್ಗೆ ಏನಾದರೂ ಮಾಡಬೇಕೆಂದಿದ್ದರೆ ಮೊದಲಿಗೆ ತಟಸ್ಥವಾದ ಸಂಶೋಧನಾ ಸಂಸ್ಥೆಯೊಂದು ಈ ವಿಷಯದ ಬಗ್ಗೆ ವೈಜ್ಞಾನಿಕವಾದ ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನ ನಡೆಸುವ ಅವಶ್ಯಕತೆ ಇದೆ. ಪರ ವಿರೋಧಿ ವಾದಗಳನ್ನು

ಒಳಗೊಳ್ಳುವಂತೆ ಮತ್ತು ವೈಜ್ಞಾನಿಕ ಅಂಶಗಳನ್ನು ಒಳಗೊಳ್ಳುವಂತೆ ಒಂದು ಪ್ರಶ್ನಾವಳಿಯನ್ನು ರೂಪಿಸಿ ಅದರ ಮೂಲಕ ಜನಸಾಮಾನ್ಯರ ಹಾಗೂ ತಜ್ಞರ ಅಭಿಪ್ರಾಯಗಳನ್ನು ಸಂಗ್ರಹಿಸಿ ವಿಶ್ಲೇಷಿಸಬಹುದು. ನಂತರ ಈ ವಿಶ್ಲೇಷಣೆಯ ಆಧಾರದ ಮೇಲೆ ಕನ್ನಡ ಮಾಧ್ಯಮ ಬೋಧನೆಯ ಇತಿ-ಮಿತಿ ಹಾಗೂ ಉಪಯುಕ್ತತೆಗಳನ್ನು ಪ್ರಯೋಗಗಳ ಮೂಲಕ ಅಭ್ಯಾಸ ಮಾಡಬಹುದು. ಕನ್ನಡ ಮಾಧ್ಯಮದ ಬೋಧನಾಕ್ರಮ, ಕಲಿಕೆಯ ಕ್ರಮ ಹಾಗೂ ಅದರ ಫಲಿತಾಂಶಗಳನ್ನು ಸೂಕ್ತವಾದ ಮತ್ತು ವೈಜ್ಞಾನಿಕವಾದ ಪರಿಕರಗಳಿಂದ ವಿಶ್ಲೇಷಿಸಿ ಅಂತಿಮ ನಿರ್ಧಾರಗಳನ್ನು ತೆಗೆದುಕೊಳ್ಳಬಹುದು.

೪. ಉನ್ನತ ಶಿಕ್ಷಣದಲ್ಲಿ ವಿಜ್ಞಾನ ಬೋಧನೆ ಕನ್ನಡದಲ್ಲಿ ಸಾಧ್ಯವೇ ಎಂಬ ಪ್ರಶ್ನೆ ವಾಸ್ತವಿಕವಾಗಿ ಏಳಲು ಸಾಧ್ಯವೇ ಇಲ್ಲ. ಶುದ್ಧವಾಗಿ ಭಾವಿಸಿದಲ್ಲಿ ಯಾವುದೇ ಭಾಷೆಗೆ ಸಾಧ್ಯಾಸಾಧ್ಯತೆಗಳ ಮಿತಿ ಇಲ್ಲ. ಸಾಧ್ಯವೇ ಇಲ್ಲವೇ ಎಂಬ ವಾದ ವಿವಾದದಲ್ಲಿ ನಾವು ತೊಡಗಿದ್ದೇವೆಯೇ ಹೊರತು ಸಾಧ್ಯ ಮಾಡುವ ದಿಕ್ಕಿನಲ್ಲಿ ಯಾವ ಹೆಜ್ಜೆಯನ್ನೂ ಇಡಲು ಪ್ರಯತ್ನ ಮಾಡಿಲ್ಲ. ಯಾವುದೇ ಭಾಷೆ ಒಂದು ಉಪಯೋಗ ಕ್ಷೇತ್ರ (Domain) ದಲ್ಲಿ ಉಪಯೋಗಗೊಂಡಾಗ ಮಾತ್ರ ಅದರಲ್ಲಿನ ಉಪಯುಕ್ತತೆಯ ಅಂಶ ಮನವಟ್ಟಾಗುವುದು. ಕನ್ನಡವಲ್ಲಿ ವಿಜ್ಞಾನ ಬೋಧನೆಗೆ ಕನ್ನಡ ಭಾಷೆಯದೇ ಆದ ಮಿತಿಗಳು ಯಾವುವೂ ಇಲ್ಲವಾದರೂ ಇವಕ್ಕೆ ಸಂಬಂಧಿಸಿದಂತೆ ಕೆಲವು ಕಾರ್ಯಕ್ರಮಗಳ ರೂಪುರೇಷೆಯನ್ನು ಸಿದ್ಧಪಡಿಸಬೇಕಾಗುತ್ತದೆ. ಈ ಕೆಳಕಂಡ ಅಂಶಗಳನ್ನು ಅಂತಹ ರೂಪುರೇಷೆಯನ್ನು ಯೋಜಿಸುವುದರಲ್ಲಿ ಗಮನದಲ್ಲಿಟ್ಟುಕೊಳ್ಳಬಹುದು.

ಮೊದಲಿಗೆ ಅಗತ್ಯವಿರುವುದು ಸರ್ಕಾರದ ಭಾಷಾ ನೀತಿಯಲ್ಲಿ ಅಗತ್ಯವಿರುವ ಬದಲಾವಣೆ. ಇಂಗ್ಲಿಷ್ ಮತ್ತು ಕನ್ನಡಗಳ ನಡುವೆ ಅಂತಸ್ತು, ಪರೀಕ್ಷಾಕ್ರಮ ಹಾಗೂ ವೃತ್ತಿ ಸಂಬಂಧವಾಗಿರುವ ತರ-ತಮ ಭಾವಗಳಿರುವತನಕ ಕನ್ನಡ ಮಾಧ್ಯಮದ ಮೂಲಕ ವಿಜ್ಞಾನ ಬೋಧೆ ಕಷ್ಟವಾಗುತ್ತದೆ. ಇಂಗ್ಲೀಷಿಗೆ ಈಗ ಇರುವ ಅಗ್ರಪ್ರಭಾವದಿಂದ ಅದನ್ನು ಕೆಳಗಿಳಿಸಿ ಅದನ್ನು ನಾವು ಫ್ರೆಂಚ್, ಜರ್ಮನ್‌ಗಳಂತಹ ಅಂತರ್ರಾಷ್ಟ್ರೀಯ ಭಾಷೆ ಮತ್ತು ಜ್ಞಾನಾರ್ಜನೆಯ ಭಾಷೆಯನ್ನಾಗಿ ರೂಪಿಸಿಕೊಳ್ಳಬೇಕು. ಈಗ ವಿಜ್ಞಾನಕ್ಕೆಂದು ಇಂಗ್ಲೀಷಿನಲ್ಲಿ ನಾವು ಹುಡುಕುತ್ತಿರುವ ಜ್ಞಾನದ ಮೂಲಗಳನ್ನು ಕನ್ನಡ ಅನುವಾದಗಳಲ್ಲಿ ಸುಲಭವಾಗಿ ಸಿಗಲು ಸಾಧ್ಯವಾಗುವಂತೆ ಮಾಡಬೇಕು. ಬಹುಪಾಲು ಇಂಗ್ಲೀಷೇತರ ರಾಷ್ಟ್ರಗಳು ಈ ದಾರಿಯನ್ನು ಈಗಾಗಲೇ ಅನುಸರಿಸಿ ಈ ಮಾರ್ಗ ಸಾಧ್ಯವೆಂದು ತೋರಿಸಿಕೊಟ್ಟಿವೆ.

ಎರಡನೆಯದಾಗಿ ಬೋಧನೆಗೆ ಅಗತ್ಯವಿರುವ ಪಠ್ಯಪುಸ್ತಕಗಳು ಮತ್ತು ಸಂಶೋಧನಾ ಲೇಖನಗಳ ಅನುವಾದಕ್ಕೆ ಪ್ರಯತ್ನ. ಇವುಗಳ ರಚನೆ ಮತ್ತು ಮುದ್ರಣ ದುಬಾರಿಯಾದರೂ ಅವುಗಳ ಕಂಪ್ಯೂಟರ್ ಡೇಟಾಬೇಸನ್ನು ಸಿದ್ಧಗೊಳಿಸಿ ಕಂಪ್ಯೂಟರ್ ಟರ್ಮಿನಲ್‌ಗಳ ಮುಂದೆ ಕುಳಿತು ಅವುಗಳನ್ನು ಓದಿ ಅಭ್ಯಾಸ ಮಾಡುವಂತೆ ಮಾಡಬಹುದು.

ಉನ್ನತ ವ್ಯಾಸಂಗ ಕರ್ನಾಟಕದ ಮಟ್ಟಿಗೆ ವಿಶ್ವವಿದ್ಯಾಲಯಗಳು ಹಾಗೂ ಸಂಶೋಧನಾ ಸಂಸ್ಥೆಗಳಲ್ಲಿ ನಡೆಯುತ್ತಿರುವುದರಿಂದ ಈ ಸ್ಥಳಗಳ ಕಂಪ್ಯೂಟರ್‌ಗಳನ್ನು ಜಾಲವೊಂದರ ಒಳಗೆ (Networking) ಮಾಡುವುದರ ಮೂಲಕ ಮಾಹಿತಿ ವಿನಿಮಯ ಹಾಗೂ ವೆಚ್ಚದ ಹಂಚಿಕೆ (Cost Sharing) ಎರಡೂ ಸಾಧ್ಯವಾಗುತ್ತದೆ.

ಮೂರನೆಯದಾಗಿ ಇಂತಹ ಡೇಟಾಬೇಸ್‌ಗಳ ರಚನೆಗೆ ಅನುಕೂಲಿಸುವಂತೆ ಅಗತ್ಯ ವಿರುವ ಲೇಖಕರ ಹಾಗೂ ಭಾಷಾಂತರಕಾರರ ತರಬೇತಿ ಮತ್ತು ಅವರಿಗೆ ಪೂರಕ ಸಾಮಗ್ರಿಯಾಗಬಲ್ಲ ಪಾರಿಭಾಷಿಕ ಶಬ್ದಕೋಶ ನಿಘಂಟು, ವಿಶ್ವಕೋಶ ಹಾಗೂ ಕಂಪ್ಯೂಟರ್ ನೆರವು ಪಡೆದ ಯಾಂತ್ರಿಕ ಅನುವಾದ (Computer aided automatic translation) ಕಾರ್ಯಕ್ರಮಗಳ ವಿನ್ಯಾಸ ಮತ್ತು ರಚನೆಗೆ ಸಿದ್ಧತೆ, ಇವುಗಳನ್ನು ಕಂಪ್ಯೂಟರ್ ಡೇಟಾಬೇಸ್‌ನಲ್ಲಿ ಅಳವಡಿಸಿ ಅವುಗಳ ಉಪಯೋಗಕ್ಕೆ ಮುಕ್ತ ಅನುಮತಿಯನ್ನು ನೀಡಬಹುದು.

ನಾಲ್ಕನೆಯದಾಗಿ ಕನ್ನಡದಲ್ಲಿ ವಿಜ್ಞಾನ ಬೋಧನೆ ಮಾಡಲು ಅಗತ್ಯವಿರುವ ಕ್ರಮಗಳ ಕರಡೊಂದನ್ನು ತಯಾರಿಸಿ ಅದರ ಪ್ರಯೋಗವನ್ನು ಆರಂಭಿಸುವುದು. ಒಂದು ನಿಯಂತ್ರಿತ ಸನ್ನಿವೇಶ (Controlled Situation) (ಪ್ರಸ್ತುತ ಇರುವ ಪದ್ಧತಿಯ ಅಭ್ಯಾಸಕ್ಕೆ) ಹಾಗೂ ಒಂದು ಪ್ರಾಯೋಗಿಕ ಸನ್ನಿವೇಶ(Experimental Situation) (ಹೊಸ ಕ್ರಮವನ್ನು ಅಭ್ಯಾಸ ಮಾಡಲು)ಗಳನ್ನು ತೌಲನಿಕವಾಗಿ ಅಭ್ಯಾಸ ಮಾಡಿ, ಅದನ್ನು ಮೌಲ್ಯಮಾಪನೆಗೆ ಒಳಗೊಳಿಸಿ ನಂತರ ತಿದ್ದುಪಡಿ ಮಾಡಿದ ಬೋಧನಾಕ್ರಮದ ಅಂತಿಮ ರೂಪುರೇಷೆಯನ್ನು ನಿರ್ಧಾರ ಮಾಡುವುದು.

ಐದನೆಯದಾಗಿ ಈ ಹೊಸ ಬೋಧನಾಕ್ರಮವನ್ನು ಹಂತಹಂತವಾಗಿ ಕಾರ್ಯಗತಗೊಳಿಸುವುದು. ಈ ದಿಸೆಯಲ್ಲಿ ಅದನ್ನು ಪದೇ ಪದೇ ಪರೀಕ್ಷೆ ಮತ್ತು ಮೌಲ್ಯಮಾಪನೆಗೆ ಒಳಗುಪಡಿಸಿ ಸೂಕ್ತ ತಿದ್ದುಪಡಿಗಳನ್ನು ಅದರಲ್ಲಿ ಅಳವಡಿಸುವ ಸಾಧ್ಯತೆಯನ್ನು ಆ ಕ್ರಮವು ಒಳಗೊಂಡಿರಬೇಕು.

ಆರನೆಯದಾಗಿ ಇಂತಹ ಪ್ರಯೋಗವನ್ನು ನಡೆಸಲು ಸೂಕ್ತವಾದ ಹಾಗೂ ತಜ್ಞರಿಂದ ಕೂಡಿದ ಒಂದು ಪ್ರಾಧಿಕಾರವನ್ನು ರೂಪಿಸುವ ಅಗತ್ಯವಿದೆ. ಈ ಪ್ರಾಧಿಕಾರ ಯಾವುದೇ ಬಗೆಯ ರಾಜಕೀಯ ಮತ್ತಿತರ ಪ್ರಭಾವ, ಪ್ರಲೋಭನೆಗಳಿಗೆ ಒಳಗಾಗದಂತೆ ಅದನ್ನು ಸ್ವಯಮಧಿಕಾರೀ (autonomous) ಮಾಡುವುದಲ್ಲದೆ ಅದರ ನಿರ್ಧಾರಗಳು ಕೇವಲ ವೈಜ್ಞಾನಿಕ ತಳಹದಿಯ ಮೇಲೆ ಮಾತ್ರ ನಿಂತಿರುವಂತೆ ಮಾಡಲು ಕ್ರಮ ತೆಗೆದು ಕೊಳ್ಳಬೇಕು.

ಕೊನೆಯದಾಗಿ ಇಂತಹ ಪ್ರಯೋಗ ಈ ವಿಷಯದಲ್ಲಿ ತಜ್ಞತೆ ಇಲ್ಲದ ಜನಸಾಮಾನ್ಯರ ಭಾವನಾತ್ಮಕ (Emotoinal) ಆದ ವಾದ ವಿವಾದಗಳ ಸುಳಿಗೆ ಸಿಲುಕಿ ಗೊಂದಲಮಯ ವಾಗದಂತೆ ನೋಡಿಕೊಳ್ಳಲು ಹಾಗೂ ಸಾರ್ವಜನಿಕ ಅಭಿಪ್ರಾಯವನ್ನು ಇಂತಹ

ಪ್ರಯೋಗಗಳಿಂದಾಗಿ ಸಹಾನುಭೂತಿಯಿಂದ ಇರುವಂತೆ ರೂಪಿಸಲು ಒಂದು ಪ್ರತ್ಯೇಕ ಅಂಗದ ಅವಶ್ಯಕತೆ ಇದ್ದು ಅದು ತಜ್ಞರ ಗುಂಪಿನ ಜೊತೆಜೊತೆಯಾಗಿ ತನ್ನ ಕಾರ್ಯವನ್ನು ನಿರ್ವಹಿಸುವಂತೆ ನೋಡಿಕೊಳ್ಳಬೇಕಾಗಿದೆ.

೫. ಭಾರತೀಯ ಸಮೂಹ ಮಾಧ್ಯಮಗಳಲ್ಲಿ ಬಹುಪಾಲು ಜನಸಂಖ್ಯೆಯನ್ನು ತಲುಪುವ ಸಾಧ್ಯತೆ ಇರುವ ದೂರದರ್ಶನ ಮತ್ತು ಆಕಾಶವಾಣಿಗಳು ಕೇಂದ್ರ ಸರ್ಕಾರದ ನಿಯಂತ್ರಣದಲ್ಲಿವೆ. ಉಳಿದ ಮುದ್ರಣ ಸಮೂಹ ಮಾಧ್ಯಮಗಳನ್ನು ಓದಬಲ್ಲವರ ಸಂಖ್ಯೆ ತುಂಬಾ ಕಡಿಮೆ ಇರುವುದರಿಂದ ಅವುಗಳ ವ್ಯಾಪ್ತಿಯ ವಿಸ್ತಾರ ಹೇಳಿಕೊಳ್ಳುವಂತಹುದೇನೂ ಅಲ್ಲ. ದೂರದರ್ಶನ ಮತ್ತು ಆಕಾಶವಾಣಿಗಳಲ್ಲಿ ಬಳಕೆಯಾಗುವ ಕನ್ನಡದ ಸ್ವರೂಪ ನಾವು ಉಪಯೋಗಿಸುವ ಗ್ರಾಂಥಿಕ ಭಾಷೆಗೆ ಹಾಗೂ ಸಮಾಜದ ಕೆಲವು ವರ್ಗಗಳ ದಿನನಿತ್ಯದ ವ್ಯಾವಹಾರಿಕ ಭಾಷೆಗೆ ಸಮೀಪವಾಗಿದೆ. ಈ ಕಾರಣದಿಂದಾಗಿಯೇ ಇಂದು ಈ ವರ್ಗ ಈ ಮಾಧ್ಯಮದ ಸಮೀಪವರ್ತಿಯಾಗಿದ್ದುಕೊಂಡು ಅದರ ಉಪಯೋಗವನ್ನು ಪಡೆದುಕೊಳ್ಳಲು ಸಾಧ್ಯವಾಗಿದೆ. ಹಾಗೂ ಇಡಿಯ ಸಮುದಾಯ ಈ ಪ್ರಕ್ರಿಯೆಯಲ್ಲಿ ಭಾಗವಹಿಸಲು ಅಡ್ಡಿಯೂ ಆಗಿದೆ. ಭಾಷೆಯ ಬಗ್ಗೆ ಸಂವಹನ ಮಾಧ್ಯಮಗಳಲ್ಲಿ ಸುಧಾರಣೆ ತರಲು ಮಾಡುವ ಪ್ರಯತ್ನಗಳು ಎಂತಹ ಪ್ರತಿಗಾಮಿ ಮತ್ತು ಸರ್ಕಾರಿ ಶಕ್ತಿಗಳ ವಿರುದ್ಧ ಸೆಣೆಸಬೇಕಾಗಬಹುದು ಎಂಬುದನ್ನು ತೋರಿಸಲು ಒಂದು ನಿದರ್ಶನ ವನ್ನು ಕೊಡಬಹುದು. ಸುಮಾರು ಹತ್ತು ಹನ್ನೆರಡು ವರ್ಷಗಳ ಹಿಂದೆ ದೆಹಲಿಯ ಆಕಾಶವಾಣಿಯಲ್ಲಿ ಕನ್ನಡ ವಾರ್ತೆಗಳನ್ನು ಓದುತ್ತಿದ್ದ ಶ್ರೀಯುತರಾದ ರಂಗರಾವ್ ಮತ್ತು ನಾಗಭೂಷಣ ಅವರುಗಳು ವಾರ್ತೆಯನ್ನು ಓದುವ ಭಾಷೆಯಲ್ಲಿ ಜೀವಂತಿಕೆಯನ್ನು ತರಲು ಹಾಗೂ ಅದನ್ನು ದಿನನಿತ್ಯದ ವ್ಯಾವಹಾರಿಕ ಭಾಷೆಯ ಸಮೀಪಕ್ಕೆ ತರಲು ಒಂದೆರಡು ಬದ ಲಾವಣೆಗಳನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸಿದರು. ಇದರ ಫಲಿತಾಂಶವಾಗಿ ಕರ್ನಾಟಕದ ಉದ್ದಗಲಕ್ಕೂ ವಿರೋಧಗಳು ಕೇಳಿಬಂದವು. ಇಂತಹ ಪ್ರಯತ್ನವೊಂದರ ಉಪಯುಕ್ತತೆ, ವೈಜ್ಞಾನಿಕ ತಳಹದಿಯ ಬಗ್ಗೆ ತನಿಖೆಯನ್ನು ಕೂಡ ಮಾಡುವ ಗೋಜಿಗೆ ಹೋಗದೆ ಸರ್ಕಾರ ಹೊಸ ಪ್ರಯತ್ನವನ್ನು ಸ್ಥಗಿತಗೊಳಿಸಲು ಹೇಳಿತು. ವೈಜ್ಞಾನಿಕ ಸತ್ಯಕ್ಕಿಂತ, ಎಲ್ಲರನ್ನೂ ತೃಪ್ತಿಪಡಿಸುವ ಧೋರಣೆ ಸರ್ಕಾರೀ ನಿಯಂತ್ರಿತ ಮಾಧ್ಯಮಗಳಿಗೆ ಮುಖ್ಯ ವಾಗುವುದರಿಂದ ಅಲ್ಲಿ ಉಪಯೋಗವಾಗುವ ಕನ್ನಡದ ಸ್ವರೂಪ ಒಂದು ಜಡ ಸ್ವರೂಪಕ್ಕೆ ಅಂಟಿಕೊಂಡಿರುತ್ತದೆ. ಅಲ್ಲದೆ ಈ ಬಗೆಯ ಸ್ವರೂಪದೊಂದಿಗೆ ಹೊಂದಾಣಿಕೆ ಮಾಡಿ ಕೊಳ್ಳಬಲ್ಲವರಿಗೆ ಮಾತ್ರ ಸರ್ಕಾರ ನಿಯಂತ್ರಿಸುವ ಸಮೂಹ ಮಾಧ್ಯಮಗಳಲ್ಲಿ ಅವಕಾಶ ಸಿಗುತ್ತದೆ.

ಇನ್ನು ಕನ್ನಡದ ಪ್ರಮಾಣದ ಬಗ್ಗೆ: ಭಾಷೆ, ವರ್ಗ, ಜಾತಿ ಇತ್ಯಾದಿ ಆಧಾರಗಳ ಮೇಲೆಯೇ ಎಲ್ಲವನ್ನೂ ಹಂಚಿ ಹಂಚಿ ಅಭ್ಯಾಸವಾಗಿರುವ ಸರ್ಕಾರಕ್ಕೆ ಸಮೂಹ ಮಾಧ್ಯಮಗಳಲ್ಲಿ ಕನ್ನಡದ ಪ್ರಸಾರ ಪ್ರಮಾಣ ಕೂಡ ಯಾವುದೇ ಒಂದು ಸಮಾನ

ಪ್ರಮಾಣದ ಸೂತ್ರವನ್ನು ಆಧರಿಸಿಯೇ ಇರಬೇಕು ಎನ್ನುವುದರಲ್ಲಿ ಸಂದೇಹವಿಲ್ಲ. ಕರ್ನಾಟಕದಲ್ಲಿ ದೂರದರ್ಶನ ಮತ್ತು ಆಕಾಶವಾಣಿಯ ಕಾರ್ಯಕ್ರಮಗಳನ್ನು ನೋಡಲು, ಕೇಳಲು ನನಗೆ ಅವಕಾಶಗಳಿಲ್ಲ. ಅದರ ಪ್ರಮಾಣದ ಬಗ್ಗೆ ನನ್ನಲ್ಲಿ ಯಾವ ಅಂಕಿ-ಅಂಶಗಳೂ ಇಲ್ಲ. ಆದರೆ ಅಂತಹುದೇ ಸರ್ಕಾರೀ ನಿಯಂತ್ರಿತ ಸಂಸ್ಥೆಯಾದ ಕೇಂದ್ರ ಸಾಹಿತ್ಯ ಅಕಡೆಮಿ ಇಡುವ ಪುಟಸಂಖ್ಯೆಯ ಮಿತಿ ಎಂತಹ ಆಭಾಸಕ್ಕೆ ಎಡೆಗೊಡಬಹುದು ಎಂಬುದರ ಬಗ್ಗೆ ಒಂದು ನಿದರ್ಶನವನ್ನು ಕೊಡುತ್ತೇನೆ. ಇದು ನನ್ನ ಗಮನಕ್ಕೆ ಬಂದುದು ನಾನು ದೆಹಲಿ ವಿಶ್ವವಿದ್ಯಾಲಯದಲ್ಲಿ ಭಾರತೀಯ ಸಾಹಿತ್ಯ ಚರಿತ್ರೆಯನ್ನು ಕಲಿಸಿದಾಗ. ಸುಮಾರು ೩೦ ವರ್ಷಗಳ ಹಿಂದೆ ಕೇಂದ್ರ ಸಾಹಿತ್ಯ ಅಕಡೆಮಿ ವಿವಿಧ ಭಾರತೀಯ ಭಾಷೆಗಳ ಸಾಹಿತ್ಯ ಚರಿತ್ರೆಯನ್ನು ಹೊರತರುವ ಯೋಜನೆಯನ್ನು ಹಾಕಿಕೊಂಡಿತು. ಭಾರತೀಯ ಸಾಹಿತ್ಯ ಚರಿತ್ರೆಯ ಒಂದು ತಾಂತ್ರಿಕ ಸಮಸ್ಯೆಯೆಂದರೆ ಅದರ ಇತಿಹಾಸದ ಅವಧಿ. (Periodization) ಬೇರೆ ಬೇರೆ ಭಾಷೆಗಳ ಸಾಹಿತ್ಯ ಚರಿತ್ರೆಗಳು ಬೇರೆ ಬೇರೆ ಪ್ರಮಾಣದ ಸಾಹಿತ್ಯದ ಇತಿಹಾಸವನ್ನು ಒಳಗೊಂಡಿರುವುದು. ತಮಿಳು ಸಾಹಿತ್ಯಕ್ಕೆ ಸುಮಾರು ಎರಡು ಸಾವಿರ ವರ್ಷಗಳ ಸಾಹಿತ್ಯವಿದ್ದರೆ, ಕನ್ನಡಕ್ಕೆ ಸುಮಾರು ಸಾವಿರದ ಇನ್ನೂರು, ತೆಲುಗಿಗೆ ಸುಮಾರು ಸಾವಿರ ವರ್ಷಗಳ ಇತಿಹಾಸವಿದೆ. ಉಳಿದ ಭಾರತೀಯ ಭಾಷೆಗಳಿಗೆ ಸುಮಾರು ಐನೂರರಿಂದ ಎಂಟುನೂರು ವರ್ಷಗಳ ಇತಿಹಾಸವಿದೆ. ಪುಟ ಮಿತಿಯ ನಿರ್ಬಂಧವನ್ನು ಇಟ್ಟುಕೊಂಡಿದ್ದರಿಂದ ದೀರ್ಘಾವಧಿಯ ಸಾಹಿತ್ಯ ಚರಿತ್ರೆಯನ್ನುಳ್ಳ ತಮಿಳಿಗೂ ಕೇವಲ ನೂರು ವರ್ಷಗಳ ಸಾಹಿತ್ಯ ಚರಿತ್ರೆಯನ್ನುಳ್ಳ ಭಾರತೀಯ ಆಂಗ್ಲ ಸಾಹಿತ್ಯಕ್ಕೂ ಒಂದೇ ಗಾತ್ರ ಬಂದಿದೆ. ಇದರಿಂದಾಗಿ ಈ ಸಾಹಿತ್ಯ ಚರಿತ್ರೆಗಳು ಒದಗಿಸುವ ಮಾಹಿತಿಯಲ್ಲಿ ಏರುಪೇರಾಗಿ ಇವುಗಳ ಉಪಯುಕ್ತತೆ ಗಮನಾರ್ಹವಾಗಿ ಕಡಿಮೆಯಾಗಿದೆ. ಇಡೀ ಸಂಸ್ಕೃತಿಯಲ್ಲಿ ಬೇರೆಲ್ಲೂ ಕಾಣದ ಸಮಾನತೆಯ ಸೂತ್ರವನ್ನು ಇಂತಹ ಯೋಜನೆಗಳಲ್ಲಿ ಮಾತ್ರ ಅಳವಡಿಸುವುದರಿಂದ ಸಾಹಿತ್ಯ, ಜಾನಪದ ಸಂಗೀತ, ನೃತ್ಯ ವೈಚಾರಿಕ ಚರ್ಚೆ ಇವುಗಳಿಗೆ ಸರ್ಕಾರಿ ಸಂವಹನ ಮಾಧ್ಯಮಗಳಲ್ಲಿ ಸಿಗುತ್ತಿರುವ ಪ್ರಮಾಣ ಕೇವಲ ಪ್ರಾತಿನಿಧಿಕವಾದುದು ಅಷ್ಟೆ. ಎಲ್ಲಿಯತನಕ ಸಂವಹನ ಮಾಧ್ಯಮಗಳು ಸರ್ಕಾರದ ನಿಯಂತ್ರಣದಲ್ಲಿದ್ದು ಅದರ ಮುಖವಾಣಿಯಾಗಿರುತ್ತವೋ, ಎಲ್ಲಿಯತನಕ ಸಮುದಾಯ ತನ್ನ ಬೇಕು ಬೇಡಗಳನ್ನು ಸಂವಹನ ಮಾಧ್ಯಮಗಳ ಮೂಲಕ ಅಭಿವ್ಯಕ್ತಿಸಲು ಸಾಧ್ಯವಿಲ್ಲವೋ ಅಲ್ಲಿಯತನಕ ಸಮುದಾಯ ಮತ್ತು ಸಂವಹನ ಮಾಧ್ಯಮಗಳ ನಡುವೆ ಅರ್ಥಪೂರ್ಣ ಸಂವಾದ ಸಾಧ್ಯವಿಲ್ಲ.

ಈ ದೃಷ್ಟಿಯಿಂದ ಅಮೇರಿಕದ 'Public Broadcasting System' (PBS) ಮಾಡಿರುವ ಸಾಧನೆ ನಮಗೆ ಒಂದು ಮಾದರಿಯಾಗಬೇಕು. ABC, CBS, CNN ಮುಂತಾದ ಕಮರ್ಷಿಯಲ್ ಟಿ.ವಿ. ಕಂಪನಿಗಳ ಸ್ವಾಮ್ಯದ ನಡುವೆಯೂ ಸುಮಾರು ೩೦ ವರ್ಷಗಳಿಂದ ವೀಕ್ಷಕರಿಂದಲೇ ಧನಸಹಾಯವನ್ನು ಪಡೆಯುತ್ತಾ ಕಮರ್ಷಿಯಲ್

ಜಾಹೀರಾತುಗಳಿಗೆ ಶರಣಾಗದೆ ಸಾಹಿತ್ಯ, ಕಲೆ, ನಿಸರ್ಗ, ವೈಚಾರಿಕತೆಯನ್ನು ಪ್ರಸಾರ ಮಾಡುತ್ತಾ ಬಂದಿರುವ PBS ಮುಕ್ತ ಸಂವಹನ ಮಾಧ್ಯಮವೊಂದು ತನ್ನ ವೀಕ್ಷಕರೊಡನೆ ಬೆಳಸಿಕೊಳ್ಳಬಹುದಾದ ಅರ್ಥಪೂರ್ಣ ಸಂವಾದಕ್ಕೆ ಒಂದು ಒಳ್ಳೆಯ ನಿದರ್ಶನ.

೬. ಭಾಷೆ ನಿರಂತರವೂ ಬದಲಾವಣೆ ಹೊಂದುತ್ತಿರುವಂತಹ ಒಂದು ಚಟುವಟಿಕೆ. ಪ್ರತಿಯೊಂದು ಪೀಳಿಗೆ ಉಪಯೋಗಿಸುತ್ತಿರುವ ದಿನನಿತ್ಯದ ವ್ಯಾವಹಾರಿಕ ಭಾಷೆಯಲ್ಲಿ ವೈವಿಧ್ಯ ಮತ್ತು ವ್ಯತ್ಯಾಸಗಳಿದ್ದರೂ ನಮಗೆ ಉಪಲಬ್ಧವಿರುವ ಸಾಹಿತ್ಯ ಕೃತಿಗಳು ಮತ್ತು ಶಾಸನಗಳಲ್ಲಿ ಸಿಗುವುದು ಕೇವಲ ಗ್ರಾಂಥಿಕಭಾಷೆ. ಸಾಹಿತ್ಯ ಚರಿತ್ರೆಯನ್ನು ಗಮನಿಸಿದರೆ ಈ ಗ್ರಾಂಥಿಕಭಾಷೆ ಕೂಡ ಕಾಲಾನುಕ್ರಮದಲ್ಲಿ ದಿನ ನಿತ್ಯದ ವ್ಯಾವಹಾರಿಕ ಭಾಷೆಗೆ ಸಮೀಪವಾಗಿ ಪರಿವರ್ತನೆ ಹೊಂದುವ ಪ್ರಯತ್ನವನ್ನು ಪದೇ ಪದೇ ಮಾಡಿರುವುದು ಕಂಡು ಬರುತ್ತದೆ. ಆದರೆ ಈ ಬಗೆಯ ಪ್ರಯತ್ನ ಅದರ ವಿರುದ್ಧ ದಿಕ್ಕಿನಲ್ಲಿ ಅಂದರೆ ಪ್ರಾಚೀನ (Archaic) ಭಾಷಾ ರೂಪದತ್ತ ಕೂಡ ಕೆಲವು ವೇಳೆ ಸಾಗಬಹುದು. ವಾಸ್ತವವಾಗಿ ಈ ಬಗೆಯ ತುಯ್ದಾಟಗಳು, ಅವು ವ್ಯಾವಹಾರಿಕ ಭಾಷೆಯ ಕಡೆಗಾಗಲಿ ಅಥವಾ Archaic ಭಾಷೆಯ ಕಡೆಗಾಗಲಿ ಪರಿಪೂರ್ಣವಾಗಿ ಆಗುವುದಿಲ್ಲ. ಈ ತುಯ್ದಾಟ ಕೇವಲ ಸಾಪೇಕ್ಷವಾದ ತುಯ್ದಾಟ ಅಷ್ಟೇ.

ಸಂವಹನದ ಸಾಧ್ಯತೆಯನ್ನು ಗಮನದಲ್ಲಿಟ್ಟುಕೊಂಡು ಹಾಗೂ ಸಾಹಿತ್ಯ ಸಂದರ್ಭದ ವಸ್ತು ಮತ್ತು ರೂಪಗಳ ಆಯ್ಕೆಯನ್ನು ಗಮನದಲ್ಲಿಟ್ಟುಕೊಂಡು ತನ್ನ ಸಮಕಾಲೀನ ದತ್ತ ಭಾಷೆಯಲ್ಲಿ ಕವಿ ಸಾಹಿತ್ಯ ರಚನೆಯನ್ನು ಮಾಡುತ್ತಾನಾದರೂ ಈ ದತ್ತಭಾಷೆಯನ್ನು ಕುಗ್ಗಿಸಿ ಅಥವಾ ಹಿಗ್ಗಿಸಿ ಭಾಷೆಯ ಹೊಸ ಹೊಸ ಆಯಾಮಗಳನ್ನು ಸೃಷ್ಟಿಸುವ ಸಾಧ್ಯತೆ ಕೂಡ ಅದರಲ್ಲಿ ಅಡಗಿದೆ. ಹೀಗಾಗಿ ಸಾರಾಸಗಟಾಗಿ ಭಾಷೆ ಜನಸಾಮಾನ್ಯರಿಗೆ ಸಮೀಪವಾಗಿದ್ದ ಮಾತ್ರಕ್ಕೆ ಅದರ ಸಂವಹನ ಸಾಧ್ಯತೆಗಳು ಹೆಚ್ಚುತ್ತವೆ ಎಂಬ ನಿರ್ಧಾರಕ್ಕೆ ತಲುಪುವುದು ಕಷ್ಟ. ಒಂದು ಸೂಕ್ತ ವಸ್ತುವಿನ ಆಯ್ಕೆ ಯಾವ ಅರ್ಥದಲ್ಲಿ ಕವಿಯ ಮೇಲೆ ಅವನ ಸುತ್ತ ಇರುವ ಸಮಾಜ ತರುತ್ತಿರುವ ಒತ್ತಡಗಳಿಂದ ಆಗುತ್ತಿರುತ್ತದೋ ಅದೇ ಅರ್ಥದಲ್ಲಿ ಸೂಕ್ತ ರೂಪದ ಆಯ್ಕೆ ಕೂಡ ಅದೇ ಸಮಾಜದ ಅನಿವಾರ್ಯ ಒತ್ತಡಗಳಿಂದ ಆಗುತ್ತಿರುತ್ತದೆ. ಭಾಷೆಯ ಈ ತುಯ್ದಾಟ ಯಾವುದೇ ದಿಕ್ಕಿನಲ್ಲಿ ಇರಬಹುದು. ಇದನ್ನು ಸ್ಪಷ್ಟಪಡಿಸಲು ಚಂಪೂ ಸಾಹಿತ್ಯ ರೂಪವನ್ನು ಗಮನಿಸಬಹುದು. ಹನ್ನೆರಡನೆಯ ಶತಮಾನದಲ್ಲಿ ವಚನಕಾರರು ಹಾಗೂ ವೀರಶೈವ ಕವಿಗಳು ಜೈನಸಾಹಿತ್ಯ, ಆಸ್ಥಾನ, ಮಾರ್ಗ, ಪಂಡಿತ ಮಾಧ್ಯಮ ಎನಿಸಿದ್ದ ಚಂಪೂ ರೂಪವನ್ನು ಪಕ್ಕಕ್ಕೆ ತಳ್ಳಿ, ಭಕ್ತಿ, ಜನಸಾಮಾನ್ಯ, ದೇಸಿ ಮಾಧ್ಯಮ ಎನಿಸಿಕೊಂಡ ವಚನ, ರಗಳೆ ಮತ್ತು ಷಟ್ಪದಿಗಳಲ್ಲಿ ಕಾವ್ಯ ರಚನೆಯನ್ನು ಆರಂಭಿಸಿದರು. ಆದರೆ ಹದಿನಾರು-ಹದಿನೇಳನೆಯ ಶತಮಾನದ ವೇಳೆಗೆ ಈ ಚಿತ್ರ ಅದಲು ಬದಲಾದುದನ್ನು ಗಮನಿಸಬಹುದು. ಈ ಕಾಲದ ವೀರಶೈವ ಕವಿಗಳು ಚಂಪೂರೂಪ, ಸಂಕಲನ ಮತ್ತು ಸಂಸ್ಕೃತ ಅನುವಾದಗಳನ್ನು ಕೈಗೊಂಡರೆ ಜೈನ ಕವಿಗಳು

ಷಟ್ಪದಿ ಮತ್ತು ಸಾಂಗತ್ಯಗಳಲ್ಲಿ ಕಾವ್ಯರಚನೆಗೆ ತೊಡಗಿದ್ದನ್ನು ಕಾಣಬಹುದು. ಇದು ಜೈನ ಮತ್ತು ವೀರಶೈವ ಕವಿಗಳಿಗೆ ಚಾರಿತ್ರಿಕವಾಗಿ ಏಕಕಾಲದಲ್ಲಿದ್ದ ಭಿನ್ನ ಭಿನ್ನ ಸಾಮಾಜಿಕ ಒತ್ತಡಗಳು ಹಾಗೂ ಅದಕ್ಕೆ ಅವರು ಭಾಷೆ ಮತ್ತು ರೂಪಗಳ ಆಯ್ಕೆಯಲ್ಲಿ ಪ್ರತಿಕ್ರಿಯೆ ನೀಡಿದ ರೀತಿಯ ವೈವಿಧ್ಯ ಹಾಗೂ ಕಾವ್ಯಮಾಧ್ಯಮದ ಸಾಮಾಜಿಕ ಸ್ವರೂಪದ ಪರಿಚಯವನ್ನು ಮಾಡಿಕೊಡುತ್ತದೆ.

ಕಾವ್ಯದ ಭಾಷೆಯ ಸ್ವರೂಪ, ಪ್ರಭೇದದಿಂದ ಪ್ರಭೇದಕ್ಕೆ ತದ್ವಿರುದ್ಧ ದಿಕ್ಕುಗಳಲ್ಲಿ ಚಲಿಸಲು ಸಾಧ್ಯವಿದೆ. ನವೋದಯ ಕಾವ್ಯದ ಆರಂಭದ ಭಾಷೆಗೂ, ಕಾದಂಬರಿಯ ಭಾಷೆಗೂ ಹಾಗೂ ಅವುಗಳ ಸಮಕಾಲೀನ ವಿಮರ್ಶೆಯ ಭಾಷೆಗೂ (ಮುಳಿಯ ತಿಮ್ಮಪ್ಪಯ್ಯ, ಗೋವಿಂದಪೈ ಇತ್ಯಾದಿ) ಇರುವ ಅಂತರವನ್ನು ಗಮನಿಸಿ ಅಷ್ಟೇಕೆ, ಬೇಂದ್ರೆಯವರ ಕಾವ್ಯದ ಭಾಷೆಗೂ ಅವರ 'ಸಾಹಿತ್ಯ-ಸಂಶೋಧನ'ದ ಭಾಷೆಗೂ ಇರುವ ವ್ಯತ್ಯಾಸ ವನ್ನು ನೋಡಿ. ಅವರ ಕಾವ್ಯದ ಭಾಷೆ ಸ್ವಚ್ಛಂದ ಕುದುರೆಯಂತೆ ನಾಗಾಲೋಟದ ವಿಹಾರವಾದರೆ ಅವರ ವಿಮರ್ಶೆಯ ಭಾಷೆ ಒಂದು ಹಿನ್ನೆಗೆತದಂತೆ ಭಾಸವಾಗುತ್ತದೆ. ಕುವೆಂಪು ಇಂತಹ ವೈರುಧ್ಯಗಳ ಅತ್ಯಂತ ಸಮರ್ಪಕ ಉದಾಹರಣೆಯಾಗುತ್ತಾರೆ. ಅವರ ಕಾವ್ಯದ ವಸ್ತು ಮತ್ತು ರೂಪಗಳು ಇಪ್ಪತ್ತನೆಯ ಶತಮಾನದ ಮುನ್ನೋಟವನ್ನು ಕಾಣುತ್ತಿದ್ದರೆ ಅವರ ವಿಮರ್ಶೆಯ ತಾತ್ವಿಕ ಹಿನ್ನೆಲೆ ಮತ್ತು ಅದರ ಭಾಷೆ-ಪರಿಭಾಷೆಗಳು ರೊಮ್ಯಾಂಟಿಕ್ ಮತ್ತು ಭಾರತೀಯ ಕಾವ್ಯಮೀಮಾಂಸೆಯತ್ತ (ಸಂಸ್ಕೃತ) ಹಿನ್ನೋಟ ವನ್ನು ಪಡೆದುಕೊಂಡಿವೆ. ಹೀಗಾಗಿ ಕವಿಯ ಭಾಷೆಯ ಸ್ವರೂಪದ ಬಗ್ಗೆ ದತ್ತವಾಗಿ ಯಾವುದೇ ಸಂವಹನ ಸಾಧ್ಯತೆ ಇರುತ್ತದೆ ಎಂದು ಒಪ್ಪಿಕೊಳ್ಳುವುದು ಕಷ್ಟ. ಆದರೆ ಸೃಜನಶೀಲ ಕವಿಯ ಭಾಷೆಯ ಆಯ್ಕೆ ಅದು ಯಾವ ಸ್ವರೂಪದ್ದೇ ಇರಲಿ, ಕವಿಯ ಹಾಗೂ ಸಮಕಾಲೀನ ಸಮಾಜದ ಒತ್ತಡಗಳನ್ನು ಪ್ರತಿಬಿಂಬಿಸುತ್ತಿರುತ್ತದೆ.



# ಬೆಸಗರಹಳ್ಳಿ ರಾಮಣ್ಣ

೧. ಒಂದು ಸಮುದಾಯದ ಭಾಷಾನೀತಿಯನ್ನು ರೂಪಿಸುವ ಕೆಲಸದಲ್ಲಿ ರಾಜಕೀಯ ಇಚ್ಛಾಶಕ್ತಿಯನ್ನು ನಿಯಂತ್ರಿಸಬಲ್ಲ ಒತ್ತಡಗಳು ಯಾವುವು ಎಂಬುದು ಒಂದು ಮುಖ್ಯ ಪ್ರಶ್ನೆಯಾಗಬಹುದೆಂದು ಕಾಣಿಸುತ್ತದೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ, ಬಹುಸಂಖ್ಯಾತ ಪ್ರಜೆಗಳ ಭಾಷೆಯಾದ ಕನ್ನಡಕ್ಕೆ ಅಗ್ರಮಾನ್ಯ ಸ್ಥಾನ ಸಂದು ಎಷ್ಟೋ ದಶಕಗಳಾಗಬೇಕಿತ್ತು. ಆದರೆ ಅಲ್ಪಸಂಖ್ಯಾತರನ್ನು ಅಸಂತುಷ್ಟಗೊಳಿಸಲು ಸಿದ್ಧವಿಲ್ಲದ ಸರ್ಕಾರ ತನ್ನ ಇಚ್ಛಾಶಕ್ತಿಯನ್ನು 'ಅಲ್ಪಶಕ್ತಿ' ಉಳ್ಳವರ ಬಳಿ ಒತ್ತೆಯಿಟ್ಟಿದೆ ಎಂದು ಹೇಳದೆ ವಿಧಿಯೇ ಇಲ್ಲ. ಯಾರು ರಾಜಕೀಯ ಶಕ್ತಿಯನ್ನು ತಮ್ಮಲ್ಲಿ ಹುದುಗಿಸಿಕೊಂಡಿದ್ದಾರೋ ಅವರು ಕನ್ನಡವನ್ನು ಮನಸಾರೆ ಪ್ರೀತಿಸುವುದಿಲ್ಲ; ಅವರು ಈ ಭಾಷೆಯಲ್ಲಿರುವ ಅಸಾಧಾರಣ ಶಕ್ತಿಯ ಬಗೆಗೆ ಯಾವ ಪರಿಕಲ್ಪನೆಯನ್ನೂ ಹೊಂದಿಲ್ಲದವರು. ಬಹಿರಂಗವಾಗಿಯೇ ಇಂಗ್ಲೀಷನ್ನು ಜನರ ಮೇಲೆ ಹೇರುತ್ತಲೇ ಕನ್ನಡವೇ ಈ ನೆಲದ ಸಾರ್ವಭೌಮ ಭಾಷೆ ಎಂದು ಕೂಗುತ್ತಾರೆ. ಆದರೆ ಸಾರ್ವಭೌಮನಿಗೆ ಸಿಂಹಾಸನವೂ ಇಲ್ಲ, ಬಲವೂ ಇಲ್ಲ. ಕಾರಣ: ಆಳಲು ಸಾಮ್ರಾಜ್ಯವೇ ಇಲ್ಲ. ಇಂಥ ವಿಪರ್ಯಾಸ ಪರಿಸ್ಥಿತಿಯಲ್ಲಿ ಕನ್ನಡ ಸಿಕ್ಕಿಕೊಂಡಿದೆ.

ರಾಜಕೀಯ ಇಚ್ಛಾಶಕ್ತಿಯನ್ನು ಅಧಿಕಾರಶಾಹಿ, ಅಲ್ಪಸಂಖ್ಯಾತರ ಓಟಿನಶಕ್ತಿ, ಮುಗ್ಧಜನರ ಇಂಗ್ಲಿಷ್ ವ್ಯಾಮೋಹ, ಕನ್ನಡಿಗರ ದುರ್ಬಲ ಹೋರಾಟಶಕ್ತಿ–ಇವುಗಳು ದುರ್ಬಲಗೊಳಿಸಿವೆ. ಜೊತೆಗೆ ಭಾರತದ ರಾಜಕೀಯ ಶಕ್ತಿಕೂಟದಲ್ಲಿ, ಕರ್ನಾಟಕದ ಧ್ವನಿ ಹೇಳಿಕೊಳ್ಳುವಂಥ ಘನತೆಯನ್ನು ಪಡೆದಿಲ್ಲವಾದ್ದರಿಂದ, ಹಿಂದಿಯನ್ನು ನಮ್ಮ ಮೇಲೆ ಹೇರಲಾಗುತ್ತಿದೆ. ಇದು ಕನ್ನಡವನ್ನು ಮೂಲೆಗೆ ತಳ್ಳುತ್ತಿದೆ. ಹೀಗೆ ದುರ್ಬಲಗೊಂಡಿರುವ ರಾಜಕೀಯ ಇಚ್ಛಾಶಕ್ತಿಯನ್ನು ಚೇತನಗೊಳಿಸಲು ಕನ್ನಡ ಸಾಹಿತ್ಯಾಭಿಮಾನಿಗಳು, ಜನಸಾಮಾನ್ಯರು, ಸಾಹಿತ್ಯಪರಿಷತ್ ಇನ್ನಿತರ ಕನ್ನಡ ಪರ ಹೋರಾಡುವ ಸಂಘಟನೆಗಳು, ಪತ್ರಿಕೆಗಳು ತಮ್ಮ ಒತ್ತಡವನ್ನು ತೀವ್ರವಾಗಿ ಹೇರಬೇಕಾಗಿದೆ.

೨. ಇಂಗ್ಲಿಷ್, ಹಿಂದಿ ಮತ್ತು ಪ್ರಾದೇಶಿಕ ಭಾಷೆಗಳ ನಡುವೆ ಹುಟ್ಟಿಕೊಂಡಿರುವ ಸ್ಪರ್ಧೆಯನ್ನು ವಿಭಿನ್ನ ಸಂಸ್ಕೃತಿಗಳ ಹಾಗೂ ಜೀವನ ಕ್ರಮಗಳ ತಾಕಲಾಟವೆಂದು ಗ್ರಹಿಸದೆ ವಿಧಿ ಇಲ್ಲ. ಕನ್ನಡಿಗರೇ ವಿಶಿಷ್ಟವಾದ ಒಂದು ಪ್ರಾದೇಶಿಕವಾದ ಸಂಸ್ಕೃತಿ ಇದೆ. ಈ ಸಂಸ್ಕೃತಿಯನ್ನು, ಕನ್ನಡವನ್ನು ಹಂತ ಹಂತವಾಗಿ ನಿರ್ವೀರ್ಯಗೊಳಿಸುವುದರ ಮೂಲಕ ಸಂಪೂರ್ಣವಾಗಿ ಮೂಲೆಗೆ ತಳ್ಳುವ ಸನ್ನಾಹವನ್ನು ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳ ಮೋಹಿಗಳು ಮಾಡುತ್ತಿದ್ದಾರೆ. ನಾವು ಈ ಕಠೋರಸತ್ಯವನ್ನು ಕಂಡೂ ಕಾಣದಂತಿದ್ದರೆ ನಮ್ಮ ಸರ್ವನಾಶ ಖಂಡಿತ.

೩. ಶಿಕ್ಷಣ ವ್ಯವಸ್ಥೆಯಲ್ಲಿ ಕನ್ನಡ ಮಾಧ್ಯಮಕ್ಕೆ ಪರ ಮತ್ತು ವಿರೋಧವಾಗಿ ಮಂಡಿಸಲಾಗುತ್ತಿರುವ ವಾದಗಳನ್ನು ಜನಸಾಮಾನ್ಯರ ಮೇಲೆ ಹೇರಲಾಗುತ್ತಿದೆ. ಕರ್ನಾಟಕದ ಮೂಲನಿವಾಸಿಗಳಾದ ಕನ್ನಡ ಮಾತನಾಡುವ ಜನ ಇಂದು ತೀರ ಬಡವರಾಗಿದ್ದಾರೆ. ಅವರನ್ನು, ಅವರ ಹೊಟ್ಟೆಯೊಳಗಿನ ಹಸಿವಿನ ಬೆಂಕಿ ದಗದಗನೆ ಸುಡುತ್ತಿದ್ದೆ, ಕನ್ನಡಿಗರು ದಿಕ್ಕು ಕಾಣದೆ ಕಂಗಾಲಾಗಿದ್ದಾರೆ. ತನ್ನ ಹುಟ್ಟೂರಿನಲ್ಲೆ ಅವನನ್ನು ತೊಟ್ಟಿಲಲ್ಲಿಟ್ಟು ತೂಗುವವರಿಲ್ಲ. ಇಷ್ಟೇ ಯಾಕೆ, ಇವನು ಮಲಗಬೇಕಾದ ತೊಟ್ಟಿಲಲ್ಲಿ ಯಾರ್ಯಾರೋ ಮಲಗಿದ್ದಾರೆ. 'ಕನ್ನಡತಿ' ಅವರಿವರ ತೊಟ್ಟಿಲತೂಗುವ ತೊತ್ತಾಗಿದ್ದಾಳೆ. ಇವಳ ಪ್ರೀತಿಯ ಕೂಸುಗಳು ಧೂಳಲ್ಲಿ ಹೊರಳಾಡುತ್ತಿವೆ. ಇವಳು ಕನ್ನಡದಲ್ಲಿ ಜೋಗುಳಗಳನ್ನು ಹಾಡುವಂತಿಲ್ಲ, ತನ್ನ ನೆಲದಲ್ಲೇ, ತನ್ನ ತೊಟ್ಟಿಲಲ್ಲೇ ಪರರನ್ನು ಮಲಗಿಸಿ, ಪರಭಾಷೆಯಲ್ಲಿ ಜೋಗುಳ ಹಾಡಲು ಕನಿಷ್ಠ ಇಂಗ್ಲಿಷ್ ಅಥವಾ ಹಿಂದಿ ಕಲಿಯಬೇಕಾದ ಗುಲಾಮ ಸ್ಥಿತಿ ಬಂದಿದೆ. ಇದು ಆಗಬಾರದಾಗಿತ್ತು.

೪. ಈ ಪ್ರಶ್ನೆಯ ಮೊದಲ ಭಾಗಕ್ಕೆ ಉತ್ತರಿಸುವುದು ಸ್ವಲ್ಪ ಕಷ್ಟದ ಕೆಲಸ. ಮನಸ್ಸಿದ್ದರೆ ಖಂಡಿತ ನಮ್ಮ ವಿಶ್ವವಿದ್ಯಾಲಯಗಳು ಕನ್ನಡದಲ್ಲಿ ಉನ್ನತ ವಿಜ್ಞಾನವನ್ನು ಬೋಧಿಸಬಹುದು. ಜಪಾನ್, ಜರ್ಮನಿ, ಚೀನಾ ಹಾಗೂ ಇನ್ನಿತರ ದೇಶಗಳಲ್ಲಿ ಹೇಗೆ ಈ ಕಾರ್ಯ ನಡೆಯುತ್ತಿದೆ ಎಂಬುದನ್ನು ಒಂದು ಆರೋಗ್ಯಕರವಾದ ಮುಕ್ತ ಆಲೋಚನೆಗಳುಳ್ಳ ತಂಡವನ್ನು ಕಳುಹಿಸಿ ಅಭ್ಯಾಸ ಮಾಡಬಹುದು. ಇದನ್ನು ಯಾವುದೇ ಕಾರಣಕ್ಕಾದರೂ 'ಕಳಪೆ' ಎನ್ನುವ ರೀತಿಯಲ್ಲಿ ಮಾಡದೆ, ಗುಣಮಟ್ಟವನ್ನು ಕಾಪಾಡಿಕೊಳ್ಳಬೇಕು. ಸಂಶೋಧನೆಯ ಫಲಿತಾಂಶಗಳನ್ನು ಕನ್ನಡ ಭಾಷೆಯಲ್ಲೇ ಬರೆದು ಹೊರತರಬೇಕು. ಕನ್ನಡ ನಾಡಿನಲ್ಲಿರುವ ವಿಶ್ವವಿದ್ಯಾಲಯಗಳು ಈ ದಿಕ್ಕಿನಲ್ಲಿ ನಿರಾಳವಾಗಿ ಕುಳಿತು ಆಲೋಚಿಸಬೇಕು. ಎಲ್ಲ ವಿಶ್ವವಿದ್ಯಾಲಯಗಳೂ ವಿಜ್ಞಾನ ಪತ್ರಿಕೆಗಳನ್ನು ನಡೆಸಬೇಕು. ಕನ್ನಡದಲ್ಲಿ ಬಂದ ಉನ್ನತ ಶಿಕ್ಷಣ ಪುಸ್ತಕಗಳು, ಲೇಖನಗಳು ಇಂಗ್ಲಿಷ್‌ಗೆ ಭಾಷಾಂತರವಾಗಬೇಕು. ಕನ್ನಡದಲ್ಲಿ ವಿಜ್ಞಾನದ ಶಿಕ್ಷಣವನ್ನು ಪಡೆದು ಹೊರಬಂದವರಿಗೆ ಕನ್ನಡ ನಾಡಿನಲ್ಲಿ ಕೂಡಲೇ ಕೆಲಸ ಸಿಗುವಂತೆ ವ್ಯವಸ್ಥೆಯಾಗಬೇಕು.

ವಿಶ್ವದ ಬೇರೆಡೆ ನಡೆವ ಸಂಶೋಧನಾ ಕಾರ್ಯಗಳನ್ನು ದೂರದರ್ಶನದ ಮುಖಾಂತರ, ಕನ್ನಡದಲ್ಲಿ ನಿಗದಿತ ದಿವಸ ಮತ್ತು ವೇಳೆಯಲ್ಲಿ ವಿದ್ಯಾರ್ಥಿಗಳ ಲಾಭಕ್ಕಾಗಿ ಬಿತ್ತರಿಸಬೇಕು. ಬೇಕಾದರೆ ಇಂಗ್ಲೀಷಿನಲ್ಲಿಯೂ ಈ ಪ್ರಸಾರ ಕಾರ್ಯ ಮಾಡಬಹುದು. ಆದರೆ ಸದಾ ಇಂಗ್ಲೀಷಿನಲ್ಲಿ ಪ್ರಸಾರ ಮಾಡುವುದು ಒಂದು ಪರಿಪಾಠವಾಗಬಾರದು. ಕನ್ನಡ ನಾಡಿನಲ್ಲಿ ನಡೆದ ಉನ್ನತ ಸಂಶೋಧನೆಗಳಿಗೆ ಸರ್ಕಾರ ಬಹುಮಾನ ಕೊಟ್ಟು ಪ್ರೋತ್ಸಾಹಿಸಬೇಕು. ಈ ಬಹುಮಾನಗಳು ಅಖಿಲಭಾರತ ಮಟ್ಟದ ಯಾವ ಬಹುಮಾನಗಳಿಗೂ ಕೂಡ ಕಡಿಮೆ ಇರಕೂಡದು. ವಿಶ್ವವಿದ್ಯಾಲಯದ ಮಟ್ಟದಲ್ಲಿ ಕನ್ನಡದಲ್ಲಿ ನಡೆಯುವ ಉನ್ನತ ಮಟ್ಟದ ವಿಜ್ಞಾನ ಬೋಧನೆಗೆ ವಿಶ್ವವಿದ್ಯಾಲಯ ಧನಸಹಾಯ

ಆಯೋಗ ಸಾಕಷ್ಟು ಧನ ನೀಡಬೇಕು. ಆದರೆ ಕನ್ನಡದ ಬೆಳವಣಿಗೆಯನ್ನು ತಡೆಯುವ ಇಲ್ಲಸಲ್ಲದ ಷರತ್ತುಗಳನ್ನು ಹಾಕಬಾರದು. ಕನ್ನಡವನ್ನು ಬೆಳೆಸಲು ಕನ್ನಡಿಗ ವಿಜ್ಞಾನ ಬೋಧಕರು, ಚಿಂತಕರು ಸಮರ್ಥರೆಂಬುದನ್ನು ಮೊದಲು 'ಅವರು' ಅರಿತುಕೊಳ್ಳಬೇಕು.

೫. ಸಮೂಹ ಮಾಧ್ಯಮಗಳಲ್ಲಿ ಬಳಕೆಯಾಗುತ್ತಿರುವ ಕನ್ನಡದ ಸ್ವರೂಪ ಮತ್ತು ಪ್ರಮಾಣಗಳನ್ನು ನಗರ ಪ್ರದೇಶಗಳಲ್ಲಿ ನೆಲೆಸಿರುವ ಹಾಗೂ ಸಮೂಹ ಮಾಧ್ಯಮಗಳಲ್ಲಿ ಅಧಿಕಾರ ಸೂತ್ರ ಹಿಡಿದಿರುವ ಜನರು ನಿಯಂತ್ರಿಸುತ್ತಿದ್ದಾರೆ. ಇವರು ನಗರವಾಸಿಗಳನ್ನೇ ದೃಷ್ಟಿಯಲ್ಲಿಟ್ಟುಕೊಂಡು ಕಾರ್ಯಕ್ರಮಗಳನ್ನು ಬಹುಪಾಲು ರೂಪಿಸುತ್ತಾರೆ ಮತ್ತು ಗ್ರಾಂಥಿಕ ಕನ್ನಡ ಭಾಷೆಯನ್ನು ಪ್ರಯೋಗಿಸುತ್ತಿದ್ದಾರೆ. ಹಳ್ಳಿಗಾಡಿನ ಜನರಿಗೆ ದಕ್ಕಬೇಕಾದ ಪಾಲುಗಳನ್ನು, ಕಳಪೆ ಕಾರ್ಯಕ್ರಮಗಳನ್ನು ಕೆಟ್ಟ ಆಡುಭಾಷೆಯಲ್ಲಿ ನಗರ ವಾಸಿಗಳೇ ರೂಪಿಸುತ್ತಿದ್ದಾರೆ. ಇದು ತಪ್ಪಬೇಕು. ನಿಜವಾದ ಕನ್ನಡದ ಆಡು ನುಡಿಯ ತ್ರಾಣವನ್ನು ಬಲ್ಲವರಿಗೆ ಈ ಕೆಲಸವನ್ನು ವಹಿಸಬೇಕು.

ದೂರದರ್ಶನದಲ್ಲಿ ಕನ್ನಡದ ಕಾರ್ಯಕ್ರಮಗಳು ಬಹಳ ಕುಲಗೆಟ್ಟು ಕನ್ನಡಿಗರ ಕಣ್ಣುಗಳನ್ನು ತಿವಿಯುತ್ತಿವೆ. ಪ್ರಾಯೋಜಿತ ಕಾರ್ಯಕ್ರಮಗಳಂತೂ ಒಮ್ಮೊಮ್ಮೆ ತೀರಾ ಹಾಸ್ಯಾಸ್ಪದವಾಗಿರುತ್ತವೆ. ಹಣ ಒಂದೇ ಈಗ ಕನ್ನಡ ಕಾರ್ಯಕ್ರಮಗಳನ್ನು ನಿಯಂತ್ರಿಸುತ್ತಿದೆಯೇನೋ ಎನ್ನುವಷ್ಟರ ಮಟ್ಟಿಗೆ ಕನ್ನಡದ ಸ್ವರೂಪ ಸಮೂಹ ಮಾಧ್ಯಮಗಳಲ್ಲಿ ತನ್ನ ಗುಣವನ್ನು ಪ್ರಕಟಗೊಳಿಸುತ್ತಿದೆ.

ಕನ್ನಡಕ್ಕೆ ದೂರದರ್ಶನ ಮಾಧ್ಯಮದಲ್ಲಿ ಸಾಕಷ್ಟು ಕಾಲಾವಕಾಶವಿಲ್ಲ. ಹಿಂದಿ ಕನ್ನಡದ ಪಾಲನ್ನು ನುಂಗಿ ಕುಳಿತಿದೆ.

೬. ಸಮುದಾಯದಲ್ಲಿ ಬಳಕೆಯಲ್ಲಿರುವ 'ಭಾಷಿಕ' ನೆಲೆಗಳನ್ನು 'ಜನಪ್ರಿಯ' ಎಂದು ನಿರಾಕರಿಸುವ ಲೇಖಕರು. ತಮ್ಮ ಮಿತಿಯನ್ನು ತಾವೇ ಜಗಜ್ಜಾಹೀರು ಮಾಡಿಕೊಂಡಂತಾಗಿದೆ. ಹಿಂದೆ ರಾಜಮಹಾರಾಜರ ಕಾಲದಲ್ಲಿ ಪಂಡಿತರು ಪುರಾಣಗಳನ್ನು, ರಾಜರ ಕಥೆಗಳನ್ನು ತಾಳೆಗರಿಯ ಮೇಲೆ ಬೆವರು ಸುರಿಸಿ ಬರೆದು, ಜನಸಾಮಾನ್ಯರ ಬದುಕನ್ನು, ಆಸೆ ನಿರಾಶೆಗಳನ್ನು ತುಚ್ಛವಾಗಿ ಕಂಡಂತೆ, ಈ ಆಧುನಿಕರೂ ಮಾಡುತ್ತಿದ್ದಾರೆ. ಜನರ ಬದುಕನ್ನು ನೋಡಲು ಶಕ್ತಿ ಇಲ್ಲದವರ ಪಾಡೆಲ್ಲ ಇಷ್ಟೆಯೇ. ಆದರೂ ನಿರಾಶೆ ಪಡಬೇಕಾಗಿಲ್ಲ. ೧೨ನೇ ಶತಮಾನದ ವಚನ ಚಳವಳಿಯನ್ನು ನೆನಪಿಸುವ ಪ್ರಯತ್ನಗಳು ನಡೆಯುತ್ತಲೇ ಇವೆ. ಈಗ ಕನ್ನಡ ನಾಡಿನ ಸಮಾಜದ ಕೆಳಸ್ತರದಿಂದ ಬಂದ ಲೇಖಕರು ಜನಪ್ರಿಯ ಭಾಷಿಕ ನೆಲೆಗಳನ್ನು ಅನಾವರಣಗೊಳಿಸುವ ದಿಕ್ಕಿನಲ್ಲಿ ಸಾಗುತ್ತಿದ್ದಾರೆ. ಇದು ಸದಾ ಇರುವ ಏರುಪೇರುಗಳನ್ನು ಸರಿಪಡಿಸುವ ಯತ್ನಗಳೆಂದೇ ನಾನು ಭಾವಿಸುತ್ತೇನೆ. ಈ ಸಂಘರ್ಷವಿದ್ದರೇ ಸಾಹಿತ್ಯ ಚಟುವಟಿಕೆಗಳು ಬಿಸಿ ಬಿಸಿಯಾಗಿ ನಡೆಯುತ್ತಿರುತ್ತವೆ. ಇಲ್ಲದಿದ್ದರೆ 'ಮಜಾ' ಇಲ್ಲ.

## ಎಸ್. ಎಸ್. ಹಿರೇಮಠ

೧) ನಮ್ಮ ಸಮಾಜದ ಬೆಳವಣಿಗೆಯ ಒಂದು ಹಂತದಲ್ಲಿ, ಸಂವಹನದ ಸಾಧನವಾಗಿ ಮೌಖಿಕತೆಯ ಜೊತೆಗೆ ಲಿಪಿ ಕೂಡ ರೂಢಿಗೆ ಬಂತು, ಕ್ರಮೇಣ ಲಿಪಿಯನ್ನು ಹೆಚ್ಚು ಅಧಿಕೃತವೆಂದು ಹೇಳಲಾಯಿತು. ಇದರ ಫಲವಾಗಿ ಲಿಖಿತ ಸಂಪ್ರದಾಯವು ಉಳಿದವರ ಮೇಲೆ ಅಧಿಕಾರವನ್ನು ಪಡೆಯಲು ಸಾಧ್ಯವಾಯಿತು. ಕಳೆದ ನೂರು ವರ್ಷಗಳಲ್ಲಿ ಶಿಕ್ಷಣ ವ್ಯವಸ್ಥೆಯೊಳಗೆ ಮತ್ತು ಹೊರಗೆ ಯಾವ ರೀತಿಯ ಭಾಷಾ ನೀತಿಯನ್ನು ಅನುಸರಿಸಬೇಕು ಎಂಬ ಸಮಸ್ಯೆ ಜ್ವಲಂತವಾಗಿದೆ. ಕೆಲವು ವರ್ಗ ಮತ್ತು ವರ್ಣಗಳ ಹಿತಕ್ಕಾಗಿ ದುಡಿಯುವ ಶಕ್ತಿಗಳು ಈ ವಿಷಯದಲ್ಲಿ ತಂತ್ರಗಾರಿಕೆಯನ್ನು ಮಾಡುತ್ತಲೇ ಬಂದಿವೆ. ಜ್ಞಾನವನ್ನು ಹರಡಬೇಕಾದ ಶಿಕ್ಷಣವೆಂಬ ಮಾಧ್ಯಮವು ಶೋಷಣೆಯ ಉಪಕರಣವಾಗಿ ಜನಸಮುದಾಯಕ್ಕೆ ಮಾರಕವಾಗಲು ಈ ಭಾಷಾನೀತಿಯು ಕಾರಣ. ನಮ್ಮ ಚರಿತ್ರೆಯ ಅಗತ್ಯಗಳಿಗೆ ಅನುಗುಣವಾಗಿ ಕನ್ನಡಕ್ಕೆ, ಸಂಸ್ಕೃತ, ಉರ್ದು, ಇಂಗ್ಲಿಷ್, ಹಿಂದಿ ಮುಂತಾದ ಭಾಷೆಗಳು ಮುಖಾಮುಖಿಯಾಗಿವೆ, ಮೇಲುಗೈ ಪಡೆದಿವೆ. ಭಾರತದಲ್ಲಿ ಅನೇಕ ಉಪರಾಷ್ಟ್ರೀಯತೆಗಳು ಅಸ್ತಿತ್ವದಲ್ಲಿವೆ. ಕರ್ನಾಟಕವೂ ಅಂಥ ಒಂದು ಘಟಕ. ಈ ರೀತಿಯ ಘಟಕಗಳಿಗೆ ಏನು ಬೇಕು ಎಂಬ ಸಂಗತಿಯನ್ನು ಕುರಿತಂತೆ ವೈಜ್ಞಾನಿಕವಾದ ಆಲೋಚನೆ ನಡೆದಿದ್ದು ಈ ಶತಮಾನದಲ್ಲಿಯೇ. ಅಲ್ಲಿಯೂ ಕೂಡ ಏಕಮತವಿಲ್ಲ, ಗೊಂದಲಗಳಿವೆ.

ನಮ್ಮ ದೇಶದಲ್ಲಿ ಇರುವ ಸಾಂಸತ್ತಿಕ ಪ್ರಜಾಪ್ರಭುತ್ವವು ಸಾಮಾನ್ಯವಾಗಿ ಬಲಪಂಥೀಯ ರಾಜಕೀಯದ ನೀತಿ ನಿಲುವುಗಳಿಗೆ ಅನುಗುಣವಾಗಿ ರೂಪುಗೊಂಡಿರುತ್ತದೆ. ಇದು ಹೊಸಕಾಲದ ಸವಾಲುಗಳನ್ನು ಎದುರಿಸಹೊರಟಾಗ ಸರಿಯಾದ ಆರ್ಥಿಕ ನೀತಿಯ ನೆಲೆಗಟ್ಟನ್ನು ಹೊಂದಿರುವುದಿಲ್ಲ. ಆದ್ದರಿಂದಲೇ ಅದು ಸಾಂಸ್ಕೃತಿಕ ಸವಾಲುಗಳನ್ನು ಎದುರಿಸುವ ರೀತಿಯೂ ಕುಂದುಕೊರತೆಗಳಿಂದ ತುಂಬಿರುತ್ತದೆ. ಏಕೆಂದರೆ ಆರ್ಥಿಕ ನೀತಿಯು ಸರಿಯಿರುವುದಿಲ್ಲ.

ಒಂದು ಜನಸಮುದಾಯದ ಭಾಷಾನೀತಿಯನ್ನು ರೂಪಿಸುವ ಹೊಣೆಹೊತ್ತ ಸರ್ಕಾರವನ್ನು ಬೇರೆ ಬೇರೆ ರಾಜಕೀಯ ಪಕ್ಷಗಳು ನಡೆಸುತ್ತವೆ. ಪ್ರತಿಯೊಂದಕ್ಕೂ ಅದಕ್ಕೇ ವಿಶಿಷ್ಟವಾದ ರಾಜಕೀಯ ಇಚ್ಛಾ ಶಕ್ತಿ ಇರುತ್ತದೆ. ಉದಾಹರಣೆಗೆ ಬಲಪಂಥೀಯ ಪಕ್ಷಗಳು ಗೊತ್ತಾದ ವರ್ಗ-ವರ್ಣಗಳ ಪರವಾಗಿ ಇರುತ್ತವೆಯೇ ಹೊರತು ಒಟ್ಟು ಸಮುದಾಯದ ಪರವಾಗಿಯಲ್ಲ. ಅವು ಹೆಚ್ಚೆಂದರೆ ಆಕರ್ಷಕವಾಗಿ ಕಾಣುವ ತಾತ್ಕಾಲಿಕ ಪರಿಹಾರ ಕ್ರಮಗಳನ್ನು ರೂಪಿಸುತ್ತವೆ.

ಎಡಪಂಥೀಯರೂ ಕೇಂದ್ರೀಕೃತ ವ್ಯವಸ್ಥೆಯ ಪರವಾಗಿಯೇ ಇರುತ್ತಾರೆ. ಎಂದರೆ ಹಲವು ಉಪರಾಷ್ಟ್ರೀಯ ಸಂಸ್ಕೃತಿಗಳನ್ನು ಬದಿಗೆ ತಳ್ಳಿ ಕೇಂದ್ರೀಕೃತ ಸಂಸ್ಕೃತಿಯೊಂದನ್ನು

ಅಸ್ತಿತ್ವಕ್ಕೆ ತರುವುದನ್ನು ಅವರು ಅಲ್ಲಗಳೆಯುವುದಿಲ್ಲ. ಹೀಗೆಂದು ಭಾಷಾನೀತಿಯನ್ನು ವಿಕೇಂದ್ರೀಕರಣಗೊಳಿಸಿ ಆಯಾ ರಾಜ್ಯಗಳಿಗೆ ಸ್ವಾತಂತ್ರ್ಯಕೊಟ್ಟರೆ, ಪ್ರಗತಿಯು ಸಾಧ್ಯವಾಗುತ್ತದೆ ಎಂದು ಹೇಳುವುದು ಕಷ್ಟ.

ಆದ್ದರಿಂದ ಎಷ್ಟೋ ಸಲ, ಒಂದು ಸಮುದಾಯವು ಅಪೇಕ್ಷಿಸುತ್ತದೆ ಎಂದು "ಹೇಳಲಾಗುವ" ಭಾಷಾನೀತಿಯು ಅಲ್ಲಿನ ಪ್ರಬಲ ವರ್ಗ-ವರ್ಣಗಳ ಆಯ್ಕೆಯೇ ಆಗಿರುತ್ತದೆ. ಇಂಥ ಕಡೆ ಭಾಷೆ ಮತ್ತು ಅದರ ಮೂಲಕ ದೊರೆಯುವ ತಿಳುವಳಿಕೆ ಇವೆರಡೂ ಪ್ರಶ್ನಾರ್ಹವೇ ಆಗಿರುತ್ತದೆ. ಅದೂ ಅಲ್ಲದೆ ಒಟ್ಟು ಸಮುದಾಯದ ಹಲವು ಕೆಳನೆಲೆಗಳು ತಮಗೆ ಏನು ಬೇಕು, ಅದನ್ನು ಹೇಗೆ ಕೇಳಬೇಕು, ಹೇಗೆ ಪಡೆಯಬೇಕು ಎಂಬುದನ್ನು ಗುರುತಿಸಿಕೊಳ್ಳಲು ಸರಿಯಾದ ಶಿಕ್ಷಣದ ಅಗತ್ಯವಿರುತ್ತದೆ. ಅದು ಇಲ್ಲದಿದ್ದಾಗ ಅವರಿಗೆ ಬಾಯಿ ಇರುವುದಿಲ್ಲ.

ಕರ್ನಾಟಕದ ಭಾಷಾನೀತಿಯ ಮೇಲಿನ ಒತ್ತಡಗಳು, ನಿಜವಾದ ರಾಜಕಾರಣ, ಆರ್ಥಿಕತೆ ಮತ್ತು ಸಂಸ್ಕೃತಿಗಳ ಆಳವಾದ ಅಧ್ಯಯನದಿಂದ ಮೂಡಿ ಬಂದಿಲ್ಲ. ಕನ್ನಡ ಪರವಾದ ಒತ್ತಡಗಳೂ ಎಷ್ಟೋ ಸಲ ಭಾವುಕವಾದವೂ, ತೆಳುವಾದವೂ ಆಗಿರುತ್ತವೆ. ಎಷ್ಟೋ ಸಲ ಇವು ಸಂಕುಚಿತ ಹಿತಾಸಕ್ತಿಗಳನ್ನು ಹೊಂದಿರುವ ಮಧ್ಯಮವರ್ಗದ ತೆವಲುಗಳೆಂದು ಭಾಸವಾಗುತ್ತವೆ. ಆದ್ದರಿಂದ ಒಟ್ಟು ಸಮುದಾಯದ ಅಗತ್ಯಗಳನ್ನು ಸರಿಯಾಗಿ ಪೂರೈಸುವ ಭಾಷಾನೀತಿಯು ಸಮಗ್ರವಾದ ಜನಪರ ಹೋರಾಟಗಳ ನೆಲೆಯಲ್ಲಿಯೇ ಮೂಡಿಬರುತ್ತದೆ.

೨) ಕರ್ನಾಟಕದಲ್ಲಿ ನಡೆಯುತ್ತಿರುವ ಇಂಗ್ಲಿಷ್ ಮತ್ತು ಹಿಂದಿ ಹೇರಿಕೆಗಳ ಹಿನ್ನೆಲೆಯಲ್ಲಿ ಬೇರೆ ಬೇರೆ ಸಂಸ್ಕೃತಿಗಳ ತಾಕಲಾಟವು ಖಂಡಿತವಾಗಿಯೂ ಇವೆ. ಕನ್ನಡ ಭಾಷಿಕರ ಪ್ರಗತಿ ಹೇಗೆ ಆಗಬೇಕು ಎನ್ನುವುದರ ಬಗ್ಗೆ ನಮ್ಮಲ್ಲಿ ಸರಿಯಾದ ಪರಿಕಲ್ಪನೆಗಳಿಲ್ಲ. ಇಂಗ್ಲಿಷ್ ಇಲ್ಲಿಗೆ ಬಂದಿದ್ದು ವಸಾಹತುಶಾಹಿಯ ದಬ್ಬಾಳಿಕೆಯ ಮಾಧ್ಯಮವಾಗಿ. ಸಹಜವಾಗಿಯೇ ಇಂದು ಅದು ನವವಸಾಹತುಶಾಹಿಯ ಪರೋಕ್ಷ ಆಳ್ವಿಕೆಗೆ ಸಹಾಯ ಮಾಡುತ್ತದೆ. ಇಂದು ಮೂರನೆಯ ಜಗತ್ತಿನ ದೇಶಗಳ ಮೇಲೆ ಹಲವು ಬಗೆಯ ಸಾಂಸ್ಕೃತಿಕ ಮತ್ತು ವ್ಯಾವಹಾರಿಕ ಒತ್ತಡಗಳಿವೆ. ಭಾಷೆಗಳ ನೆಲೆಯಲ್ಲಿ ಇಂಗ್ಲಿಷ್ ಈ ಒತ್ತಡಗಳ ಮುಖವಾಣಿಯಾಗಿದೆ.

ಹಾಗೆಯೇ, ರಾಷ್ಟ್ರಮಟ್ಟದಲ್ಲಿ ವೈದಿಕ ಧರ್ಮದ ಆಕ್ರಮಣಶೀಲತೆಯ ಸಂಕೇತವಾಗಿದ್ದ ಸಂಸ್ಕೃತವು ಇಂದು ಹಿಂದಿಯ ವೇಷದಲ್ಲಿ ಪ್ರತ್ಯಕ್ಷವಾಗಿದೆ. ಅದರಲ್ಲಿಯೂ ಆಳುವ ವರ್ಗದ ರಾಜಕೀಯ ಹಾಗೂ ಆರ್ಥಿಕ ಹುನ್ನಾರಗಳು ಕೆಲಸ ಮಾಡುತ್ತಿವೆ. ಆದ್ದರಿಂದ ಇಂಗ್ಲಿಷ್ ಮತ್ತು ಹಿಂದಿಗಳು ಕ್ರಮವಾಗಿ ವಿದೇಶೀ ಸಾಮ್ರಾಜ್ಯಶಾಹಿ ಮತ್ತು ದೇಶೀ ಬಂಡವಾಳಶಾಹಿಗಳ ಪ್ರತಿನಿಧಿಗಳಂತೆ ಕೆಲಸ ಮಾಡುತ್ತಿವೆ.

ಇಂಗ್ಲಿಷ್, ಹಿಂದಿ ಮತ್ತು ಪ್ರಾದೇಶಿಕ ಭಾಷೆಗಳ ನಡುವಿನ ಈ ತಾಕಲಾಟವು ಕೇವಲ ಸಮಾಜದ ಮೇಲು ಪದರಗಳಲ್ಲಿ ಇದೆಯೋ ಅಥವಾ ಜನಪದದ ತಳಹದಿಯನ್ನು ಮುಟ್ಟುತ್ತಿದೆಯೋ ಎನ್ನುವುದನ್ನು ಪರಿಶೀಲಿಸಬೇಕಾಗಿದೆ. ಆದರೆ ಭಾಷೆಗಳ ಹಂತದಲ್ಲಿ ಇರುವ ತರತಮನೆಲೆಗಳು ಜನಸಾಮಾನ್ಯರನ್ನು ಅನೇಕ ಅವಕಾಶಗಳಿಂದ ವಂಚಿಸುತ್ತಿರುವುದಂತೂ ಸ್ಪಷ್ಟ.

೩) ಶಿಕ್ಷಣ ವ್ಯವಸ್ಥೆಯಲ್ಲಿ ಕನ್ನಡ ಮಾಧ್ಯಮದ ಪರ ಮತ್ತು ವಿರೋಧವಾಗಿ ವಾದಗಳು ಮಂಡಿತವಾಗುತ್ತಿವೆ. ಇವುಗಳಿಗೆ ಗಟ್ಟಿಯಾದ ತಾತ್ವಿಕ ನೆಲೆಗಳು ಇವೆಯೆಂದು ತೋರುವುದಿಲ್ಲ. ಹಿಂದಿನ ಪ್ರಶ್ನೆಗಳಿಗೆ ಉತ್ತರ ಕೊಡುವಾಗ ಹೇಳಿದ ಸಂಗತಿಗಳು ಇಲ್ಲಿಯೂ ಗಮನಾರ್ಹ. ಮಾತೃಭಾಷೆಯ ಶಿಕ್ಷಣ ಮಾಧ್ಯಮದ ಬಗ್ಗೆ ಯಾರೂ ತಾತ್ವಿಕವಾಗಿ ವಿರೋಧಿಸುವುದಿಲ್ಲ. ಆದರೆ ದಿನದಿನವೂ ಬೆಳೆಯುತ್ತಿರುವ, ಹಲವು ಶಾಸ್ತ್ರಗಳ ತಿಳುವಳಿಕೆಯನ್ನು ತನ್ನೊಳಗೆ ಧಾರಣ ಮಾಡುವ ಶಕ್ತಿಯನ್ನು ಒಂದು ಭಾಷೆ ಪಡೆದಿದೆಯೇ ಎನ್ನುವುದು ಮುಖ್ಯ. ಹಾಗಿಲ್ಲದಿದ್ದರೆ ಅಂಥ ಸಾಮರ್ಥ್ಯವನ್ನು ಪಡೆದುಕೊಳ್ಳುವ ಪ್ರಯತ್ನಗಳಾದರೂ ನಡೆಯುತ್ತಿವೆಯೇ ಎಂದು ಪ್ರಶ್ನಿಸಿಕೊಳ್ಳಬೇಕಾಗುತ್ತದೆ.

ಶಿಕ್ಷಣದ ಮೂಲ ಉದ್ದೇಶಕ್ಕೆ ಹೋಲಿಸಿದರೆ ಮಾಧ್ಯಮದ ಪ್ರಶ್ನೆ ಅಷ್ಟು ಮುಖ್ಯವಲ್ಲ. ಕನ್ನಡಿಗರು ತಮ್ಮ ಏಳಿಗೆಗೆ ರೂಪಿಸಿಕೊಳ್ಳುವ ಮಾರ್ಗಗಳಿಗೆ ಅನುಗುಣವಾಗಿ ಶಿಕ್ಷಣದ ಆಶಯ ಮತ್ತು ಮಾಧ್ಯಮಗಳೂ ಆಕಾರ ಪಡೆಯಬೇಕು. ನಿರ್ಣಯ ತೆಗೆದುಕೊಳ್ಳುವಾಗ ರಾಜಕೀಯ ಹಿತಾಸಕ್ತಿಗಳೇ ಕಾರಣವಾಗಬಾರದು. ಕನ್ನಡಪರ ಮತ್ತು ವಿರೋಧಿಗಳ ಗುಂಪಿನಲ್ಲಿ ಜನಸಾಮಾನ್ಯರು ಕಳೆದುಹೋಗಿದ್ದಾರೆ.

೪) ನಮ್ಮ ಇಂದಿನ ಸಮಾಜ ವ್ಯವಸ್ಥೆಯಲ್ಲಿ ಉನ್ನತ ಶಿಕ್ಷಣವು ಮೇಲ್ವರ್ಗ ಮತ್ತು ಮಧ್ಯಮವರ್ಗಗಳ ಸೊತ್ತು. ಆ ವರ್ಗಗಳಿಗೆ ಶಿಕ್ಷಣ ಮಾಧ್ಯಮದ ಬಗ್ಗೆ ಇರುವ ಕಾಳಜಿ ಕಡಿಮೆ. ಅವರ ಜೀವನ ದೃಷ್ಟಿಯೇ ಜನಸಾಮಾನ್ಯರ ಕನ್ನಡಪರ ದೃಷ್ಟಿಗಿಂತ ಬೇರೆ. ಹೀಗಾಗಿ ಸಮಾಜದ ಮೇಲುಪದರದವರು ಇಂಗ್ಲಿಷ್ ಪರವಾಗಿಯೂ, ಕೆಳನೆಲೆಗಳವರು ಕನ್ನಡ ಪರವಾಗಿಯೂ ಇರುವಂತೆ ತೋರುತ್ತದೆ. ಆದರೆ ಎಲ್ಲ ವರ್ಗದ ಮಕ್ಕಳೂ ಕಾನ್ವೆಂಟ್ ಶಾಲೆಗಳಿಗೆ ನುಗ್ಗ ಬಯಸುತ್ತಾರೆ. ವಿಜ್ಞಾನ ಮತ್ತು ತಂತ್ರಜ್ಞಾನಗಳು ಜನಸಾಮಾನ್ಯರ ಅರಿವಿನ ಮಟ್ಟಕ್ಕೆ ತಲುಪಿಲ್ಲ. ಕನ್ನಡಿಗರೇ ಆದ ವಿಜ್ಞಾನ ಬೋಧಕರು ಕನ್ನಡವನ್ನು ಅಶಕ್ತವಾದ ಗ್ರಾಮೀಣ ಭಾಷೆಗಳ ನೆಲೆಯಲ್ಲಿ ಮಾತ್ರ ಗುರುತಿಸುತ್ತಾರೆ. ಅವರಲ್ಲಿ ಅನೇಕರಿಗೆ ಕನ್ನಡವು ಜಮೀನ್ದಾರೀ ಹಳ್ಳಿಗಳ, ಹಿಂದುಳಿದಿರುವಿಕೆಯ ಮತ್ತು ಜಡಸಮಾಜದ ಪ್ರತೀಕ. ಇಂಗ್ಲಿಷ್ ಮತ್ತು ಹಿಂದಿಗಳಾದರೋ ಆಧುನಿಕತೆ ಮತ್ತು ಬೆಳವಣಿಗೆಯ ಪ್ರತೀಕ. ಉನ್ನತ ವಿಜ್ಞಾನ ಶಿಕ್ಷಣದಲ್ಲಿ ಕನ್ನಡದ ಸ್ಥಾನಮಾನವನ್ನು ಈ ಹಿನ್ನೆಲೆಯಲ್ಲಿ ನೋಡಬೇಕಾಗುತ್ತದೆ.

೫) ಇಂದು ಸಮೂಹ ಮಾಧ್ಯಮಗಳಲ್ಲಿ ರಾಜಕೀಯ ಒತ್ತಡಗಳು, ಸಿದ್ಧ ಮಾದರಿಗಳು, ಕೀಳುಮಟ್ಟದ ಲಾಬಿಗಳು ಮತ್ತು ಹಣ ನಿರ್ಣಾಯಕವಾದ ಪಾತ್ರವನ್ನು ವಹಿಸುತ್ತಿವೆ. ಪ್ರಾದೇಶಿಕ ಭಾಷೆಗಳ ಪರವಾಗಿ ಮಾತನಾಡುವ ದನಿಯನ್ನು ಪಡೆದಿರುವ ವಿದ್ಯಾವಂತರೂ ಕೂಡ ತಮ್ಮ ಅಭಿರುಚಿಗಳಿಗೆ ಸರಿಹೊಂದುವ ಪರಿಮಿತ ಬೇಡಿಕೆಗಳನ್ನು ಮಾತ್ರ ಮಂಡಿಸುತ್ತಾರೆ. ಇಂಥ ಕಡೆ ಭಾಷೆ ಯಾವುದೇ ಇರಲಿ ಜನಸಾಮಾನ್ಯರ ಅಗತ್ಯಗಳ ಪೂರೈಕೆಯಾಗುವುದು ಸಾಧ್ಯವೇ ಇಲ್ಲ.

೬) ಸೃಜನಶೀಲ ಲೇಖಕರ ಅಭಿವ್ಯಕ್ತಿ ಸಾಧ್ಯತೆಗಳು ಮತ್ತು ಜವಾಬ್ದಾರಿಗಳು ಅಪಾರವಾಗಿವೆ. ಆದರೆ ಬಹುಪಾಲು ಲೇಖಕರ ಸಾಮಾಜಿಕ ದೃಷ್ಟಿಕೋನದಲ್ಲಿಯೇ ಗಂಭೀರವಾದ ಪರಿಮಿತಿಗಳಿವೆ. ಅಕ್ಷರ ಕಲಿಯದ ಕೋಟಿ ಕೋಟಿ ಜನಸಾಮಾನ್ಯರನ್ನು ತಲುಪುವುದು ಸರಳ ಸಾಮಾನ್ಯ ಭಾಷೆ ಮಾತ್ರ. ಸಂವಹನಶೀಲವಲ್ಲದಿದ್ದರೂ ಕಲಾತ್ಮಕ ವಾದ ಭಾಷೆ ತಲುಪುವುದು ತೀರ ಚಿಕ್ಕದಾದ ಪರಾವಲಂಬಿ ಸಮುದಾಯವನ್ನು. ಇಂಥ ಕಡೆ ಸೃಜನಶೀಲ ಲೇಖಕರ ವರ್ಗ ಮತ್ತು ಜಾತಿಯ ಹಿನ್ನೆಲೆಗಳು ಮುಖ್ಯವಾಗುತ್ತವೆ. ಈ ಹಿನ್ನೆಲೆಯ ಕಬ್ಬಿಣದ ಗೂಡುಗಳನ್ನು ಒಡೆದುಕೊಂಡು ಹೊರಬರುವದು ಬಹಳ ಕಷ್ಟ. ಒಂದು ವೇಳೆ ಹಾಗೆ ಬಂದವನೂ ಸಾಂಸ್ಕೃತಿಕವಾದ ನಿರ್ವಾತದಲ್ಲಿ ಇರುತ್ತಾನೆ. ಹೀಗಿರು ವಾಗ ತನ್ನ ಸಾಂಸ್ಕೃತಿಕ ಹಿನ್ನೆಲೆಯನ್ನು ಉಳಿಸಿಕೊಂಡೂ ಒಟ್ಟು ಜೀವನಕ್ಕೆ ಸ್ಪಂದಿಸುವ ಸವಾಲನ್ನು ಲೇಖಕನು ಎದುರಿಸಬೇಕಾಗುತ್ತದೆ. ಒಬ್ಬ ಸಂವೇದನಾಶೀಲ ಲೇಖಕನಿಗೆ ಸವಾಲುಗಳಿರುವುದು ಇಲ್ಲಿಯೇ.

# ನಮ್ಮ ಲೇಖಕರು

ಹ್ಯಾನ್ಸ್‌ಮ್ಯಾಗ್ನಸ್
ಎಂಜೆನ್ಸ್‌ಬರ್ಗರ್ : ಪ್ರಸಿದ್ಧ ಜರ್ಮನ್ ಕವಿ ಮತ್ತು ಚಿಂತಕರು.

ಪುರುಷೋತ್ತಮ
ಬಿಳಿಮಲೆ : ಜಾನಪದ ವಿದ್ವಾಂಸರು ಮತ್ತು ಸಾಹಿತ್ಯ ವಿಮರ್ಶಕರು. 'ಕರಾವಳಿ ಜಾನಪದ' ಮತ್ತು 'ಶಿಷ್ಟ-ಪರಿಶಿಷ್ಟ' ಇವರ ಪ್ರಮುಖ ಕೃತಿಗಳು.
ನಿರ್ದೇಶಕರು, ಅಧ್ಯಯನಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ–೫೮೩ ೨೧೧.

ರವಿಕುಮಾರ್ ಸಿ. ಪಿ. : ಎಲೆಕ್ಟ್ರಿಕಲ್ ಇಂಜಿನಿಯರಿಂಗ್‌ನಲ್ಲಿ ತಜ್ಞರು. ಕನ್ನಡ ಕವಿ ಮತ್ತು ಅನುವಾದಕರು. 'ದಂತಪಂಕ್ತಿ' ಇವರ ಕವನ ಸಂಕಲನ. 'ಕಾಡಿನಲ್ಲಿ ಬೆಳದಿಂಗಳು', ವಿಯಟ್ನಾಂ ಕಥೆಗಳ ಅನುವಾದ.
ಅಧ್ಯಾಪಕ, ಎಲೆಕ್ಟ್ರಿಕಲ್ ಇಂಜಿನಿಯರಿಂಗ್ ವಿಭಾಗ, ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ನವದೆಹಲಿ– ೧೧೦ ೦೧೬.

ನಿರ್ಮಲ್ ವರ್ಮಾ : ಹಿಂದಿ ಭಾಷೆಯ ಪ್ರಮುಖ ಕತೆಗಾರರು, ಕಾದಂಬರಿಕಾರರು ಹಾಗೂ ಚಿಂತಕರು.

ರಾಜಶೇಖರ್ ಡಿ. ವಿ. : ಕವಿ ಮತ್ತು ಪತ್ರಕರ್ತರು; 'ಶಬ್ದದೊಳಗಣ ನಿಶ್ಶಬ್ದ' ಇವರ ಕವನ ಸಂಕಲನ.
ಮುಖ್ಯ ಉಪಸಂಪಾದಕರು, ಸಾಪ್ತಾಹಿಕ ಪುರವಣಿ, ಪ್ರಜಾವಾಣಿ ದಿನಪತ್ರಿಕೆ, ಮಹಾತ್ಮಗಾಂಧಿ ರಸ್ತೆ, ಬೆಂಗಳೂರು- ೫೬೦ ೦೦೧.

ಚಂದ್ರಶೇಖರ್ ಟಿ. ಆರ್. : ಅರ್ಥಶಾಸ್ತ್ರದ ಅಧ್ಯಾಪಕರು; ಸಾಹಿತ್ಯ ವಿಮರ್ಶೆಯಲ್ಲಿ ಆಸಕ್ತರು, 'ಅಭಿವೃದ್ಧಿ ಮೀಮಾಂಸೆ' ಇವರ ಈಚಿನ ಕೃತಿ.
ಅಧ್ಯಾಪಕರು, ಅರ್ಥಶಾಸ್ತ್ರ ವಿಭಾಗ, ವಿಜಯನಗರ ಪ್ರಥಮ ದರ್ಜೆ ಕಾಲೇಜು, ಹೊಸಪೇಟೆ–೫೮೩ ೨೦೧.

ಸಫ್ದರ್‌ಹಷ್ಮಿ : ನಾಟಕಕಾರರು, ನಿರ್ದೇಶಕರು, ನಾಟಕ ವಿಮರ್ಶಕರು. 'ಬೀದಿ ನಾಟಕಗಳಲ್ಲಿ ವಿಶೇಷ ಆಸಕ್ತಿ. ಉತ್ತರ ಪ್ರದೇಶದಲ್ಲಿ ಒಂದು ನಾಟಕ ಪ್ರದರ್ಶನದ ನಂತರವೇ ಭೀಕರವಾಗಿ ಕೊಲೆಯಾದರು.

ಪ್ರಸ್ತುತ ಲೇಖನಗಳನ್ನು ಅವರ 'Right to Perform' ಕೃತಿಯಿಂದ ಆರಿಸಲಾಗಿದೆ.

ಶ್ರೀಮತಿ ಎಚ್. ಎಸ್. : ಲೇಖಕರು, ಅನುವಾದಕರು. 'ಜೇನು ಮತ್ತು ಮಾನವ' ಮತ್ತು 'ಹಳಗನ್ನಡ ಸಾಹಿತ್ಯಾಧ್ಯಯನಸಮೀಕ್ಷೆ' ಇವರ ಕೃತಿಗಳು. ಸಂಯೋಜನಾಧಿಕಾರಿಗಳು, ಪಠ್ಯಪುಸ್ತಕ ರಚನಾ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೫೮೩ ೨೧೧.

ಜಯಕುಮಾರ್ ಜಿ. : ವರ್ಣಚಿತ್ರ ಕಲಾವಿದರು ಮತ್ತು ಗ್ರಾಫಿಕ್ ಕಲಾವಿದರು. ಇಂಗ್ಲೆಂಡಿನಲ್ಲಿ ತರಬೇತಿ ಪಡೆದವರು.
ಅಧ್ಯಾಪಕರು, ಕಲಾವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೫೮೩ ೨೧೧.

ತೋವ್ ಸ್ಕುಟ್‌ನ್ಯಾಬ್ ಕಾಂಗಾಸ್ : ಭಾಷಾಶಾಸ್ತ್ರಜ್ಞರು, ರಾಸ್‌ಕಿಲ್ಡ್ ವಿಶ್ವವಿದ್ಯಾಲಯ ಕೇಂದ್ರ, ರಾಸ್‌ಕಿಲ್ಡ್, ಡೆನ್ಮಾರ್ಕ್.

ಓ. ಎಲ್. ನಾಗಭೂಷಣ ಸ್ವಾಮಿ : ವಿಮರ್ಶಕರು ಮತ್ತು ಅನುವಾದಕರು. 'ವಿಮರ್ಶೆಯ ಪರಿಭಾಷೆ', 'ಪ್ರಜ್ಞಾ ಪ್ರವಾಹ ತಂತ್ರ', 'ಪುರಾಣ' ಮತ್ತು 'ಭಾಷಾಂತರ' ಇವರ ಕೃತಿಗಳು.
ಡೀನ್, ಭಾಷಾನಿಕಾಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೫೮೩ ೨೧೧.

ಅಶೋಕ್ ಆರ್. ಕೇಳ್ಕರ್: ಭಾರತದ ಪ್ರಮುಖ ಭಾಷಾಶಾಸ್ತ್ರಜ್ಞರಲ್ಲಿ ಒಬ್ಬರು. ಇಂಗ್ಲಿಷ್ ಮತ್ತು ಮರಾಠಿಯಲ್ಲಿ ವಿಪುಲವಾಗಿ ಬರೆದಿದ್ದಾರೆ. ಪುಣೆಯ ಡೆಕ್ಕನ್ ಕಾಲೇಜಿನಲ್ಲಿ ಭಾಷಾಶಾಸ್ತ್ರದ ಪ್ರಾಧ್ಯಾಪಕರಾಗಿ ನಿವೃತ್ತರಾದವರು. ಈ ಲೇಖನವನ್ನು 'The Administrator' (Oct-Dec 1992) ನಿಂದ ಆಯ್ದು ಅನುವಾದಿಸಲಾಗಿದೆ.
ಪ್ರೊ. ಅಶೋಕ್ ಆರ್. ಕೇಳ್ಕರ್, ಧನಂಜಯ್ ೭೫೯/೮೩, ಆಫ್ ಭಂಡಾರ್‌ಕರ್ ಇನ್ಸ್ಟಿಟ್ಯೂಟ್ ರೋಡ್, ಪುಣೆ-೪೧೧ ೦೦೪.

ಭ. ಕೃಷ್ಣಮೂರ್ತಿ : ಭಾರತದ ಮತ್ತೊಬ್ಬ ಪ್ರಮುಖ ಭಾಷಾಶಾಸ್ತ್ರಜ್ಞರು. 'Telugu Verbal Bases' ಇವರ ಬೃಹತ್ ಕೃತಿ. ಈಚೆಗೆ ಹೈದರಾಬಾದಿನ ಕೇಂದ್ರೀಯ ವಿಶ್ವವಿದ್ಯಾಲಯದ ಕುಲಪತಿಗಳಾಗಿ ನಿವೃತ್ತರಾದರು. ಈ ಲೇಖನವನ್ನು 'Multilingualism in India' ಎಂಬ ಕೃತಿಯಿಂದ ಆಯ್ದು ಅನುವಾದಿಸಲಾಗಿದೆ.

ಡಾ. ಭ. ಕೃಷ್ಣಮೂರ್ತಿ, ಸಂ. ೧೨-೧೩-೧೨೩೩, 'ಭಾರತಿ', ಎಸ್‌ಟಿಆರ್ ೯, ತಾರ್‌ನಾಕಾ, ಹೈದರಾಬಾದ್-೫೦೦ ೦೧೭.

**ಗುಡಿಹಳ್ಳಿ ನಾಗರಾಜ್** : ಪತ್ರಕರ್ತರು ಮತ್ತು ವಿಮರ್ಶಕರು. 'ಸಾಹಿತ್ಯ ಮತ್ತು ಸಮೂಹ ಪ್ರಜ್ಞೆ' ಎಂಬ ಕೃತಿಯನ್ನು ಸಂಪಾದಿಸಿದ್ದಾರೆ.
ವರದಿಗಾರರು, ಪ್ರಜಾವಾಣಿ, ಚಿತ್ರದುರ್ಗ-೫೭೭ ೫೦೧

**ನಾರಾಯಣ ಜಿ.** : ಕನ್ನಡದ ಹಿರಿಯ ಪತ್ರಕರ್ತರು, ಸಾಹಿತ್ಯ ಮತ್ತು ಕನ್ನಡ ಪರ ಚಟುವಟಿಕೆಗಳಲ್ಲಿ ತೀವ್ರ ಆಸಕ್ತರು. ಈಗ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು.
ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ವಿಧಾನಸೌಧ, ಬೆಂಗಳೂರು-೫೬೦ ೦೦೧.

**ಯು. ಆರ್. ರಾವ್** : ಭಾರತದ ಹಿರಿಯ ಬಾಹ್ಯಾಕಾಶ ವಿಜ್ಞಾನಿಗಳಲ್ಲಿ ಒಬ್ಬರು. ಹಲವು ಮಹತ್ವದ ಅಧಿಕಾರ ಸ್ಥಾನಗಳನ್ನು ಯಶಸ್ವಿಯಾಗಿ ನಿರ್ವಹಿಸಿದವರು.
ಅಧ್ಯಕ್ಷರು; ಭಾರತೀಯ ಬಾಹ್ಯಾಕಾಶ ಆಯೋಗ, ಅಂತರಿಕ್ಷ ಭವನ, ಹೊಸ ಬಿ. ಇ. ಎಲ್. ರಸ್ತೆ, ಬೆಂಗಳೂರು-೫೬೦ ೦೯೪.

**ಪಿ. ಎಸ್. ಶಂಕರ್** : ವೈದ್ಯರು, ಜನಪ್ರಿಯ ವಿಜ್ಞಾನಕ್ಕೆ ಸಂಬಂಧಿಸಿದ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಕನ್ನಡ ವಿಶ್ವವಿದ್ಯಾಲಯವು ಪ್ರಕಟಿಸುತ್ತಿರುವ 'ವೈದ್ಯಕೀಯ ವಿಶ್ವಕೋಶ'ದ ಸಂಪಾದಕರು.
ಡಾ. ಪಿ. ಎಸ್. ಶಂಕರ್, ಪ್ರಿನ್ಸಿಪಾಲರು, ಎಂ. ಆರ್. ಮೆಡಿಕಲ್ ಕಾಲೇಜು, ಗುಲಬರ್ಗಾ-೫೮೫ ೧೦೪.

**ನಿ. ಮುರಾರಿ ಬಲ್ಲಾಳ** : ಅರ್ಥಶಾಸ್ತ್ರಜ್ಞರು, ಸಾಹಿತ್ಯ ವಿಮರ್ಶೆ ಮತ್ತು ತತ್ವಶಾಸ್ತ್ರದಲ್ಲಿ ಆಸಕ್ತರು. 'ಸತ್ಯದ ನವದರ್ಶನ' ಇವರ ಈಚಿನ ಅನುವಾದಿತ ಕೃತಿ.
ಡಾ. ನಿ. ಮುರಾರಿ ಬಲ್ಲಾಳ; 'ಮಾನಸ', ಅಂಬಲಪಾಡಿ, ಉಡುಪಿ-೫೭೬ ೧೦೩.

**ಬಸವರಾಜ ಸಬರದ** : ಸಾಹಿತಿ ಮತ್ತು ವಿಮರ್ಶಕರು. 'ಬಸವೇಶ್ವರ ಮತ್ತು ಪುರಂದರದಾಸ' ಇವರ ಇತ್ತೀಚಿನ ಮುಖ್ಯ ಕೃತಿ.

ರೀಡರ್, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವ ವಿದ್ಯಾಲಯ, ಗುಲಬರ್ಗಾ-೫೮೫ ೧೦೬.

ಸತ್ಯನಾಥ್ ಟಿ. ಎಸ್. : ಭಾಷಾಶಾಸ್ತ್ರ ಮತ್ತು ಜಾನಪದ ಅಧ್ಯಯನಗಳಲ್ಲಿ ವಿದ್ವಾಂಸರು. ದೆಹಲಿ ವಿಶ್ವವಿದ್ಯಾಲಯದ ಆಧುನಿಕ ಭಾರತೀಯ ಭಾಷೆಗಳ ವಿಭಾಗದಲ್ಲಿ ಕನ್ನಡ ಅಧ್ಯಾಪಕರು, ಅವರ ಮುಖ್ಯ ಕೃತಿ: 'ಕರ್ನಾಟಕ ಜಾನಪದ: ಕೆಲವು ಮುಖಗಳು'
ಟಿ. ಎಸ್. ಸತ್ಯನಾಥ್, ಕನ್ನಡ ಪ್ರಾಧ್ಯಾಪಕರು, ಆಧುನಿಕ ಭಾರತೀಯ ಭಾಷೆಗಳ ವಿಭಾಗ, ದೆಹಲಿ ವಿಶ್ವವಿದ್ಯಾಲಯ, ನವದೆಹಲಿ–೧೧೦ ೦೦೭.

ಬೆಸಗರಹಳ್ಳಿ ರಾಮಣ್ಣ : ಕನ್ನಡದ ಪ್ರಸಿದ್ಧ ಕತೆಗಾರರು, ವೃತ್ತಿನಿರತ ವೈದ್ಯರು. 'ಕನ್ನಂಬಾಡಿ' ಇವರ ಸಮಗ್ರ ಕಥೆಗಳ ಸಂಕಲನ.
ಡಾ. ಬೆಸಗರಹಳ್ಳಿ ರಾಮಣ್ಣ, 'ನೆಲದ ಒಡಲು', ಡಿ೩–೧೨೮೫, ಬಿ. ಡಿ. ಓ. ಆಫೀಸ್ ಹಿಂದೆ, ಮಂಡ್ಯ–೫೭೧ ೪೦೧.

ಎಸ್. ಎಸ್. ಹಿರೇಮಠ : ಜಾನಪದ ವಿದ್ವಾಂಸರು ಮತ್ತು ವಿಮರ್ಶಕರು, 'ಕರ್ನಾಟಕ ಸಂಸ್ಕೃತಿಕ ಪರಂಪರೆ–೧' ಅವರ ಮುಖ್ಯ ಕೃತಿ.
ಅಧ್ಯಾಪಕರು, ಜಾನಪದ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ–೫೮೩ ೨೧೧

ಆರ್. ಎಂ. ಹಡಪದ : ಕರ್ನಾಟಕದ ಪ್ರಸಿದ್ಧ ಕಲಾವಿದರಲ್ಲಿ ಒಬ್ಬರು, ರಾಜ್ಯ ಲಲಿತ ಕಲಾ ಅಕಾಡೆಮಿಯ ಮಾಜಿ ಅಧ್ಯಕ್ಷರು.
ಪ್ರಿನ್ಸಿಪಾಲರು, ಕೆನ್ ಕಲಾಶಾಲೆ, ಶೇಷಾದ್ರಿಪುರಂ, (ಅಂಚೆ ಕಛೇರಿ ಹಿಂದೆ) ಬೆಂಗಳೂರು–೫೬೦ ೦೨೦.

ಮಹಾಳಿ ಕೆ., ರಾಜೇಶ್, ಪದ್ಮಮ್ಮ ಮತ್ತು ಸಂಧ್ಯಾ : ಕಲಾವಿದರು, ಕನ್ನಡ ವಿಶ್ವವಿದ್ಯಾಲಯ, ಹಂಪಿ–೫೮೩ ೨೧೧

ರಾಘವೇಂದ್ರರಾವ್ ಎಚ್. ಎಸ್. : ಪ್ರಾಧ್ಯಾಪಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ–೫೮೩ ೨೧೧.

ಸೂಚನೆ: ವರ್ಣ ಕಲಾಕೃತಿ ಒಂದರ ಕೆಳಗೆ 'ರಾಜೀವಗೌಡರ ಮನೆ'–ಎಂಬುದರ ಬದಲು 'ಕಾಜಿನ ಗೌಡರ ಮನೆ'–ಎಂದು ಓದಿಕೊಳ್ಳಬೇಕಾಗಿ ವಿನಂತಿ.

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ ಸಾಹಿತ್ಯವನ್ನು ಹುಟ್ಟಿಸುವುದು ನಮ್ಮ ವಿಶ್ವವಿದ್ಯಾಲಯದ ಕರ್ತವ್ಯವಾಗಿದೆ. ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು




ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ



Reg. No. 055999 /23 /A L /93 / T L